# ಧಾರವಾಡ ಜಿಲ್ಲೆಯ ಚಿತ್ರಕಲೆ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ ದೃಶ್ಯಕಲಾ ವಿಭಾಗಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)


ಸಂಶೋಧಕರು
ಸವಿತಾ ಬಡಿಗೇರ

ಮಾರ್ಗದರ್ಶಕರು
ಡಾ. ಎಸ್.ಸಿ. ಪಾಟೀಲ







ದೃಶ್ಯಕಲಾ ವಿಭಾಗ
ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೩-೧೩

# ಧಾರವಾಡ ಜಿಲ್ಲೆಯ ಚಿತ್ರಕಲೆ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕರು
**ಸವಿತಾ ಬಡಿಗೇರ**

ಮಾರ್ಗದರ್ಶಕರು
**ಡಾ. ಎಸ್. ಸಿ. ಪಾಟೀಲ್**
ವಿಶೇಷಾಧಿಕಾರಿಗಳು
ಕರ್ನಾಟಕ ಲಲಿತಕಲಾ ವಿಶ್ವವಿದ್ಯಾಲಯ,
ಪ್ರಾದೇಶಿಕ ಕಛೇರಿ, ಬೆಂಗಳೂರು



**ದೃಶ್ಯಕಲಾ ವಿಭಾಗ**
ಲಲಿತಕಲಾ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ ೫೮೩ ೨೭೧
೨೦೧೩

## ಪ್ರಮಾಣ ಪತ್ರ

**ಧಾರವಾಡ ಜಿಲ್ಲೆಯ ಚಿತ್ರಕಲೆ** ಎಂಬ ಶೀರ್ಷಿಕೆಯ ಸಂಶೋಧನಾ ಪ್ರಬಂಧವನ್ನು ಮಾರ್ಗದರ್ಶಕರು ಹಾಗೂ ನೂತನ ಕರ್ನಾಟಕ ಲಲಿತಕಲಾ ವಿಶ್ವವಿದ್ಯಾಲಯದ ವಿಶೇಷಾಧಿಕಾರಿಗಳಾದ **ಡಾ. ಎಸ್. ಸಿ. ಪಾಟೀಲ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ಈ ಸಂಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಯಾವುದೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ: ೩೦.೦೭.೨೦೧೩

ಸ್ಥಳ: ವಿದ್ಯಾರಣ್ಯ

Savita

**(ಸವಿತಾ ಬಡಿಗೇರ)**
ಸಂಶೋಧನ ವಿದ್ಯಾರ್ಥಿನಿ
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

# ದೃಢೀಕರಣ ಪತ್ರ

**ಸವಿತಾ ಬಡಿಗೇರ** ಇವರು ಬರೆದು ಸಾದರಪಡಿಸಿದ **ಧಾರವಾಡ ಜಿಲ್ಲೆಯ ಚಿತ್ರಕಲೆ** ಎಂಬ ಶೀರ್ಷಿಕೆಯ ಈ ಎಂ.ಫಿಲ್ ಪ್ರಬಂಧವು ಮೂಲ ಸಂಶೋಧನಾ ಕೃತಿಯಾಗಿದ್ದು, ಇವರು ನನ್ನ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಈ ಸಂಪ್ರಬಂಧವನ್ನು ಸಿದ್ಧಪಡಿಸಿದ್ದಾರೆ.

ಪ್ರಸ್ತುತ ಈ ಸಂಪ್ರಬಂಧ ಇಡಿಯಾಗಿ, ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಧೃಢೀಕರಿಸುತ್ತೇನೆ.

ದಿನಾಂಕ: ೩೦.೦೭.೨೦೧೩

ಸ್ಥಳ: ವಿದ್ಯಾರಣ್ಯ

(ಡಾ.ಎಸ್.ಸಿ.ಪಾಟೀಲ)
ಮಾರ್ಗದರ್ಶಕರು
ವಿಶೇಷಾಧಿಕಾರಿಗಳು
ಕರ್ನಾಟಕ ಲಲಿತಕಲಾ ವಿಶ್ವವಿದ್ಯಾಲಯ,
ಪ್ರಾದೇಶಿಕ ಕಛೇರಿ, ಬೆಂಗಳೂರು

## ದೃಢೀಕರಣ ಪತ್ರ

**ಸವಿತಾ ಬಡಿಗೇರ** ಅವರು **ಧಾರವಾಡ ಜಿಲ್ಲೆಯ ಚಿತ್ರಕಲೆ** ಎಂಬ ಶೀರ್ಷಿಕೆಯ ಎಂ.ಫಿಲ್ ಸಂಶೋಧನಾ ಪ್ರಬಂಧವನ್ನು **ಡಾ. ಎಸ್. ಸಿ. ಪಾಟೀಲ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಈ ಸಂಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಯಾವುದೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: ೩೦.೦೭.೨೦೧೩

ಸ್ಥಳ: ವಿದ್ಯಾರಣ್ಯ

(ಡಾ. ಕೆ. ರವೀಂದ್ರನಾಥ)
ಮುಖ್ಯಸ್ಥರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

ಮುಖ್ಯಸ್ಥರು
ದೃಶ್ಯಕಲಾ ವಿಭಾಗ (ಲಲಿತಕಲಾ ನಿಕಾಯ)
ಕನ್ನಡ ವಿಶ್ವ ವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ಧಾರವಾಡ ಜಿಲ್ಲೆಯ ಚಿತ್ರಕಲೆ

## ಪರಿವಿಡಿ

ಅಧ್ಯಾಯ – ೧

# ಅಧ್ಯಯನ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ

ಜನಾಂಗದ ಬದುಕು ಜೀವನ ಚರಿತ್ರೆಯೆನಿಸಿದರೆ, ಕಲೆಗಳು ಅದರ ಆತ್ಮಚರಿತ್ರೆಯೆನಿಸುತ್ತವೆ. ವ್ಯಾಪಕವಾದ ಅರ್ಥದಲ್ಲಿ "ಜನತೆ ಬದುಕಿದ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅವರ ಜೀವನ ಸಮಸ್ಯೆ, ಜೀವನ ಮೌಲ್ಯ, ಇತ್ಯಾದಿಗಳ ವಿವರಣೆಯೇ"[೧] ಇತಿಹಾಸವೆನಿಸುತ್ತದೆ. ಆ ಇತಿಹಾಸದ ಒಳ ಚೌಕಟ್ಟಿನಲ್ಲಿ ಬೆಳೆದು ಬಂದ ಕಲೆಗಳು ಅದಕ್ಕೆ ಸುಂದರ ಸಂಸ್ಕಾರವನ್ನು ನೀಡುತ್ತವೆ. ನಿತ್ಯದ ಬದುಕು ಹಸನಾಗಿ ನಡೆಯುವಂತೆ ಒಂದು ಸೂತ್ರದಲ್ಲಿ ಯಾವುದು ಬಂಧಿಸಿದೆಯೋ ಅದು ಧರ್ಮ. ಈ ಧರ್ಮ ಪ್ರಜ್ಞೆಯ ಆಚಾರ–ವಿಚಾರಗಳು ನೂರಾರು ಸಂಪ್ರದಾಯಗಳಿಗೆ, ನಂಬಿಕೆಗಳಿಗೆ, ಮೌಲ್ಯಗಳಿಗೆ ಕಾರಣವಾಗಿ ಸಾಹಿತ್ಯ, ಸಂಗೀತ, ಚಿತ್ರ, ಶಿಲ್ಪ ಮುಂತಾದ ಕಲೆಗಳ ಹುಟ್ಟಿಗೆ ಕಾರಣವಾಗಿದೆಯೆನ್ನಬೇಕು. ಇಂಥ ಕಲೆಗಳ ಬೆಳವಣಿಗೆಯ ವಿಕಾಸಗಳೇ ಸಂಸ್ಕೃತಿಯ ವೈಭವವನ್ನು ಸೂಚಿಸುತ್ತವೆ.[೨] ಇಂತಹ ಕಲೆಗಳ ಕುರಿತು ಅನೇಕ ಸಂಶೋಧನಾತ್ಮಕ ಬರಹಗಳು, ಸಂಶೋಧನೆಗಳು ನಡೆಯುತ್ತಿರುವುದು ಒಂದು ಪ್ರಗತಿಯ ಕಾರ್ಯ ಎನ್ನಬಹುದು. ಈ ನಿಟ್ಟಿನಲ್ಲಿ ಸಂಶೋಧನಾ ಕಾರ್ಯವು ತಡವಾದರೂ ಉತ್ತಮವಾದ ಸಂಶೋಧನೆ ಮತ್ತು ಸಂಶೋಧಕರನ್ನು ಹೊರ ತರುತ್ತಿರುವುದು ಉತ್ತಮ ಮತ್ತು ಸಂತೋಷದ ಬೆಳವಣಿಗೆಯಾಗಿದೆ.

ಕಲೆ ಸುಸಂಸ್ಕೃತ ಜೀವನದ ಪ್ರತಿಬಿಂಬ. ನಾಗರಿಕ ಜೀವನದ ಪ್ರತಿನಿಧಿ. ಒಂದು ದೇಶದ ಕಲೆಯು ಆ ದೇಶದ ಸಂಸ್ಕೃತಿಯ ಪಡಿನೆರಳಾಗಿರುತ್ತದೆ. ಸಂಸ್ಕೃತಿಯ ಅಂಗವಾಗಿರುವ ಈ ಅಭಿವ್ಯಕ್ತಿಯನ್ನು ಸಮೃದ್ಧಗೊಳಿಸುವಲ್ಲಿ ಕಲಾಶಿಕ್ಷಣವು ಪ್ರಮುಖ ಪಾತ್ರವಹಿಸುತ್ತದೆ. ಜಾಗತಿಕ

೦೧. ಡಾ. ಎಂ. ಚಿದಾನಂದ ಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ – ೧

೦೨. ಡಾ. ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಪುಟ – ೩



ಇತಿಹಾಸ ಪುಟಗಳನ್ನು ತಿರುವಿದಾಗ "ಭಾರತೀಯ ಸಂಸ್ಕೃತಿಯ ಹಿರಿಮೆ-ಗರಿಮೆಗಳ ಅರಿವಾಗದಿರದು. ಜಗತ್ತಿನ ಇನ್ನಿತರ ಸಂಸ್ಕೃತಿಗಳು ಮೊಗ್ಗು-ಹೀಚು-ಕಾಯಿಗಳಾಗಿದ್ದಿರುವಾಗಲೇ ಭಾರತೀಯ ಸಂಸ್ಕೃತಿಯು ಹೂವಾಗಿ ಅರಳಿ ತನ್ನ ಸೌರಭವನ್ನು ವಿಶ್ವದಾದ್ಯಂತ ಹರಡಿ ತನ್ನ ಸಂಸ್ಕೃತಿಯು ಮಧುರ ಫಲಗಳನ್ನು ಜಗದ ಜನತೆಗೆ ಇತ್ತು ತಣಿಸುತ್ತಿತ್ತು. ಇಷ್ಟೊಂದು ಪುರಾತನವಾದ ಈ ಸಂಸ್ಕೃತಿಯ ಅಂತಃಸತ್ವ, ಅದರ ಗುಣ ಗ್ರಾಹ್ಯತೆ. ಈ ನಾಡಿನ ಮಣ್ಣಿನಲ್ಲಿ ಇಂದಿಗೂ ಜೀವಂತವಾಗಿರುವುದನ್ನು ನಾವು ಕಾಣುತ್ತೇವೆ."[೩] ಪ್ರಾಚೀನ ಕಾಲದಲ್ಲಿ ಇಷ್ಟೊಂದು ಉನ್ನತ ಸಂಸ್ಕೃತಿ, ಸಾಹಿತ್ಯ, ಕಲೆಗಳನ್ನೊಳಗೊಂಡ ಭಾರತವು ಎಲ್ಲಾ ರಂಗಗಳಲ್ಲಿಯೂ ತನ್ನ ಹಿರಿಮೆಯನ್ನು ಮೆರೆದಿದೆ. ವೇದ ಕಾಲದಿಂದ ಭಾರತೀಯ ಸಂಸ್ಕೃತಿಯ ಬೆಳವಣಿಗೆಯನ್ನು ಅವಲೋಕಿಸಿದಾಗ ವ್ಯಕ್ತಿಯ ಹುಟ್ಟು ಸಾವುಗಳವರೆಗೆ ನಿರಂತರವಾಗಿ ಕಲೆಗಳು ಬೆಳೆದು ಬಂದಿರುವುದು; ಬೆಳೆಯುತ್ತಿರುವುದು ಒಂದು ವೈಶಿಷ್ಟ್ಯ ಪೂರ್ಣ ಸಾಧನವಾಗಿದೆ."[೪] ಇಂತಹ ಉನ್ನತವಾದ ಕಲಾಪರಂಪರೆಯನ್ನು ಜತನದಿಂದ ಕಾಪಾಡಿಕೊಂಡು, ಅವುಗಳ ಕುರಿತು ಪ್ರಸ್ತುತ ಸಂದರ್ಭದಲ್ಲಿ ಅಧ್ಯಯನ ಮಾಡುವುದು. ಇಂದಿನ ಯುವ ಸಂಶೋಧಕರ ಆದ್ಯ ಕರ್ತವ್ಯವಾಗಿದೆ.

ಭಾರತೀಯ ಚಿತ್ರಕಲೆ ಬಹು ಪ್ರಾಚೀನವೆಂಬುದಕ್ಕೆ ಸಂಸ್ಕೃತ ಕಾವ್ಯಶಾಸ್ತ್ರ ಪುರಾಣಗಳಲ್ಲಿ ಪ್ರಮಾಣಭೂತ ವಾಕ್ಯಗಳೂ, ಸಂದರ್ಭಗಳೂ ದೊರೆಯುತ್ತವೆ.[೫] ರಾಮಾಯಣದ ಕಾಲದಲ್ಲಿ 'ಚಿತ್ರಗೃಹ', 'ಚಿತ್ರಶಾಲೆ'ಗಳಿದ್ದವೆಂದು ಆ ಕಾವ್ಯಗಳಿಂದ ತಿಳಿದುಬರುತ್ತದೆ. "ಲಲಿತಕಲೆಯ ಅತಿಮುಖ್ಯ ಭಾಗವಾದ 'ಚಿತ್ರಕರ್ಮಕ್ಕೆ' ಭಾಸನ ನಾಟಕಗಳಲ್ಲಿ (ಸು.ಕ್ರಿ.ಶ.೩೦೦) ಬಾರಿಬಾರಿಗೂ ಅನ್ವಯವು ದೊರೆಯುತ್ತದೆ. ಭಾಸನ ಕಾಲದ ಸಮಾಜ ಚಿತ್ರಗಾರನಿಗೆ ಪ್ರಾಶಸ್ತ್ಯಕೊಟ್ಟಿತು. ರಾಜಾಶ್ರಯವನ್ನು ಪಡೆದ ಚಿತ್ರಗಾರರು ಅರಮನೆಗಳನ್ನು ಕಲಾಕೋಶಗಳನ್ನಾಗಿ ಮಾಡಿಕೊಂಡಿದ್ದರು ಎನ್ನುವುದಕ್ಕೆ ಅನೇಕ ನಿದರ್ಶನಗಳು ದೊರಕುತ್ತವೆ. ಭಾರತೀಯ ಕಲಾವಿದನ ಊಹೆಗೆ ಪರಿಮಿತಿ ಇಲ್ಲ. ಆ ಕಲ್ಪನೆ ಹಿಮಪರ್ವತವನ್ನು ಪರಶಿವನ ಅವಾಸಸ್ಥಾನವನ್ನಾಗಿ ಮಾಡಿದೆ. ಜಗದ್ರಕ್ಷಕ ಮಹಾವಿಷ್ಣುವನ್ನು ಕ್ಷೀರ ಸಮುದ್ರದಲ್ಲಿ. ಆದಿಶೇಷನ ಸುಪ್ಪತ್ತಿಗೆಯ ಮೇಲೆ ಪವಡಿಸುವಂತೆ ಮಾಡುವ ಭವ್ಯ ಭಾವನೆಗಳಿಗೆ ನಮ್ಮ ಕಲೆಯ ಐತಿಹಾಸದಲ್ಲಿ ಮಿತಿ ಇಲ್ಲ. ವಿಶ್ವಕಲ್ಯಾಣಕ್ಕಾಗಿ ಸಕಲ ಸುಖಗಳನ್ನು ತೊರೆದು ತಪಗೈದು ಜ್ಞಾನಾರ್ಜನೆಗೈದ ಗೌತಮ ಬುದ್ಧನನ್ನು ಸರಿಯಾಗಿ ರೂಪಿಸಬಲ್ಲವರು ಭಾರತೀಯ ಕಲಾವಿದರು"[೬] ಮಾತ್ರ ಎಂಬ ವಿಚಾರಗಳು ಗಮನಾರ್ಹವಾಗಿವೆ. ಭಾರತೀಯ ಕಲಾವಿದ ಧಾರ್ಮಿಕ ಭಾವನೆಗಳಲ್ಲಿಯೇ ಮಗ್ನನಾಗಿ ತನ್ನ ಸುತ್ತಮುತ್ತಿನ ರಸಾವಿಷ್ಟ ಸೊಬಗು ಸೌಂದರ್ಯವನ್ನು,

೦೩. ಡಾ. ಎಸ್. ಸಿ. ಪಾಟೀಲ : ವರ್ಣಸಂಚಯ, ಪುಟ - ೩೮

೦೪. ಅದೇ., ಪುಟ - ೩೯

೦೫. ಪಿ. ಆರ್. ತಿಪ್ಪೇಸ್ವಾಮಿ : ಚಿತ್ರಕಲಾ ಪ್ರಪಂಚ, ಪುಟ - ೯೦

೦೬. ಅದೇ., ಪುಟ - ೧೨೨

ಆಕರ್ಷಕ ಸನ್ನಿವೇಶಗಳನ್ನು, ಜನಸಾಮಾನ್ಯರ ರಸಿಕ ಜೀವನವನ್ನು, ವನ್ಯಮೃಗಗಳ ಭೀಕರ ಸ್ವರೂಪವನ್ನು, ಸಾಕು ಪ್ರಾಣಿಗಳ, ಮೃಗ ಪಕ್ಷಿಗಳ ಆಕರ್ಷಕ ಸರಳ ಜೀವನವನ್ನು ಕಡೆಗಣಿಸಿದ್ದನೆಂದಾಗಲಿ, ಕೈಬಿಟ್ಟಿದ್ದನೆಂದಾಗಲಿ ಭಾವಿಸಲು ಕಾರಣವಿಲ್ಲ. ಚಿತ್ರ ಸೃಷ್ಟಿಯಲ್ಲಿ ತಮ್ಮ ಪ್ರಧಾನ ಗುರಿ ಮರೆಯದೆ, ಸನ್ನಿವೇಶಕ್ಕೆ ಹೊಂದಿಕೊಂಡಿರುವ ಪ್ರತಿಯೊಂದಂಶಕ್ಕೂ, ಅವುಗಳ ಪ್ರಾಮುಖ್ಯತೆಗನುಗುಣವಾದ ಸ್ಥಾನವನ್ನಿತ್ತಿರುವರು. ಪ್ರಾಚೀನ ಕಾಲದ ಭಾರತೀಯ ಕಲಾವಿದರು ಕಲೆಯೇ ತಮ್ಮ ಜೀವನ ಸರ್ವಸ್ವವೆಂಬ ದೃಢ ನಂಬಿಕೆಯಿಂದ ವಂಶಪಾರಂಪರ್ಯವಾಗಿ. ಕಲೆಯನ್ನವಲಂಬಿಸಿ ಕಲೆಯಲ್ಲಿ ವಿಪುಲ ಪ್ರಗತಿ ಸಾಧಿಸಿದರು.[೭] ಇಂತಹ ಧಾರ್ಮಿಕ, ಐತಿಹಾಸಿಕ, ಪರಂಪರೆಯುಳ್ಳ ಈ ಚಿತ್ರಕಲೆಯನ್ನು ಇಂದಿನ ಸಮಕಾಲಿನ ಸಂದರ್ಭದಲ್ಲಿ ತನ್ನ ಹಿಂದಿನ ಗತವೈಭವವನ್ನು ಸೇರಿಸಿಕೊಂಡು ಒಂದು ಉನ್ನತವಾದ ಸ್ಥಾನದಲ್ಲಿ ಇಂದಿಗೂ ಕೂಡ ಮೆರೆಯುತ್ತಿದೆ ಮತ್ತು ಮೆರೆಯುತ್ತಲೇ ಇರಬೇಕು ಎಂಬುದು ಪ್ರತಿಯೊಬ್ಬ ಕಲಾವಿದನ ಆಶಯವಾಗಿದೆ.

ಭಾರತದ ಭವ್ಯ ಕಲಾಜಗತ್ತಿಗೆ ಕರ್ನಾಟಕದ ಕೊಡುಗೆ ಅಪಾರ. ತನ್ನ ವಿಶಿಷ್ಟವಾದ ಶಿಲ್ಪಕಲೆ ಮತ್ತು ಕಲಾವಿದರನ್ನು ಹಾಗೂ ಚಿತ್ರಕಲೆಯ ಎಲ್ಲಾ ಆಯಾಮಗಳೊಂದಿಗೆ ಉನ್ನತ ಸ್ಥಾನವನ್ನು ಕೊಟ್ಟಿದೆ. ಕರ್ನಾಟಕದ ನೆಲ, ಜಲ, ಪರಿಸರ ಇಲ್ಲಿಯ ಭೌಗೋಳಿಕ ಅಂಶ ಮತ್ತು ಇಲ್ಲಿನ ಉತ್ತಮ ಸಂಸ್ಕೃತಿಯ ಜನರು ಕಲಾಪರಂಪರೆಯನ್ನು ತಮ್ಮ ಜೀವನದ ಒಂದು ಅಂಗವಾಗಿ ಸ್ವೀಕರಿಸಿ, ಉಳಿಸಿಕೊಂಡು ಅದನ್ನು ಬೆಳೆಸಿಕೊಂಡು ಹೋಗುತ್ತಿದ್ದಾರೆ. ಆದ ಕಾರಣ ಇಂದಿಗೂ ಕೂಡ ಕರ್ನಾಟಕದ ಕಲೆ ತನ್ನ ಒಂದು ವಿಶಿಷ್ಟವಾದ ಸ್ವರೂಪದಿಂದ ಹೊಸ ಹೊಸ ಪ್ರಯೋಗಗಳಿಂದ ಬೆಳೆಯುತ್ತಿದೆ. ಚಿತ್ರಕಲೆಯು ಇಂದು "ಸಂಶೋಧನೆ" ಎಂಬ ಹೊಸ ಕ್ಷೇತ್ರದೊಂದಿಗೆ ತುಳುಕು ಹಾಕಿಕೊಂಡು ಚಿತ್ರಕಲೆ ಮತ್ತು ಚಿತ್ರಕಲಾ ಸಾಹಿತ್ಯ, ಚಿತ್ರಕಲಾ ಸಂಶೋಧನೆಯ ಜೊತೆ ಜೊತೆಗೆ ನಡೆದುಕೊಂಡು ಒಂದು ಶೈಕ್ಷಣಿಕ ಶಿಸ್ತಾಗಿ ಬೆಳೆದಿದೆಯೆಂದರೆ ತಪ್ಪಾಗಲಾರದು.

**ಅಧ್ಯಯನದ ಉದ್ದೇಶ**

ಜೀವನಾನುಭವವೇ ಕಲಾಸೃಷ್ಟಿಗೆ ಮೂಲ ಪ್ರೇರಣೆ. ಅನುಭವವಿಲ್ಲದ ಯಾವುದೇ ಕಲೆ ಜೊಳ್ಳಾಗುತ್ತದೆ. ಅಮೃತ ಸ್ಪಂದಿಯಾದ ಈ ಜೀವನಾನುಭವವೇ ಕಲೆಯ ಮೂಲಧಾತು. ಈ ಧಾತುವಿಗೆ ಪ್ರತಿಭೆಯ ಸ್ಪರ್ಶವಾದಾಗ ಕಲೆಯೆಂಬುದು ವಿಶೇಷವಾದುದಾಗುತ್ತದೆ. ಪ್ರಪಂಚವು ಸಮೃದ್ಧವಾಗುತ್ತದೆ, ನೋವಿರಲಿ, ನಲಿವಿರಲಿ, ವ್ಯಾಕುಲತೆಯಿರಲಿ ಅನುಭವದ ಪ್ರಕಾಶದಲ್ಲಿ ಅಭಿವ್ಯಕ್ತಗೊಂಡಾಗ ರಸಪಾಕವಾಗಿ ಕಲೆ ರೂಪ ತಳೆಯುತ್ತದೆ. ಕಲಾಸೃಷ್ಟಿಯೆಂಬುದೇ ಒಂದು ಬಗೆಯ ಮಧುರಯಾತನೆಯ ಫಲ. ಅದೊಂದು ರಸಪಾಕ. ಕಲಾವಿದನ ಮನಸ್ಸಿನಲ್ಲಿ ಅಮೂರ್ತ

೦೭. ಪಿ. ಆರ್. ತಿಪ್ಪೇಸ್ವಾಮಿ : ಚಿತ್ರಕಲಾ ಪ್ರಪಂಚ, ಪುಟ-೧೨೩

ಭಾವನೆ, ಕಲ್ಪನೆ, ಪ್ರತಿಬಿಂಬ, ನೆನಪು ಮುಂತಾದವುಗಳಿಂದ ಕೂಡಿದ ತುಮುಲಗಳು ಉದ್ಭವಿಸಿ ಮೂರ್ತವಾದ ರೂಪ, ಆಕಾರಗಳನ್ನು ಪಡೆದು ಕಲಾಕೃತಿ ಸೃಷ್ಟಿಯಾಗುತ್ತದೆ. ಹೀಗೆ ಸೃಜನಶೀಲನೊಬ್ಬನ ಕಸರತ್ತು ಶಬ್ದಗಳ ಜಾಡುಹಿಡಿದು ಅಭಿವ್ಯಕ್ತಗೊಂಡರೆ ಸಾಹಿತ್ಯವಾಗುತ್ತದೆ. ರೇಖೆ ಬಣ್ಣಗಳ ಮೂಲಕ ರೂಪ ಆಕಾರಗಳನ್ನು ಪಡೆದರೆ ಚಿತ್ರಕಲೆಯಾಗಿ ಹೊರಹೊಮ್ಮುತ್ತದೆ. ಹೀಗೆ ಅನುಭವವೆಂಬುದು ಸೂಕ್ತವಾದ ಮಾಧ್ಯಮದ ಮೂಲಕ ಅಭಿವ್ಯಕ್ತಗೊಂಡಾಗ ಕಲೆಯಾಗಿ ಪ್ರಕಾಶಗೊಳ್ಳುತ್ತದೆ.[೮] ಇಂತಹ ಚಿತ್ರಕಲೆಯು ಇಂದು ಅನೇಕ ಮಾಧ್ಯಮಗಳ ಮೂಲಕ ಪ್ರಚಾರಕ್ಕೆ ಬರುತ್ತಿದೆ. ಈ ಕಲೆಯು ಎಲ್ಲಾ ಮಾಹಿತಿಗಳನ್ನು ಸಂಗ್ರಹಿಸಿ ಅದನ್ನು ಸಂಶೋಧನೆಯ ಮೂಲಕ ಹೊಸ ಆಯಾಮದೊಂದಿಗೆ ದಾಖಲಿಸುವ ಉದ್ದೇಶವನ್ನು ಈ ಅಧ್ಯಯನವು ಹೊಂದಿವೆ.

ಒಂದು ನಾಡಿನ ಸಾಹಿತ್ಯ, ಕಲೆ, ತತ್ವಜ್ಞಾನ, ಕಲಾಸಿದ್ಧಾಂತ. ಕಲಾವಿಮರ್ಶೆ ಆ ದೇಶದ ಸಂಸ್ಕೃತಿಯ ಹಿನ್ನಲೆಯಿಂದ ಬಂದದ್ದಾಗಿದೆ. ಒಬ್ಬ ಕಲಾವಿದನು ನಾಡಿನಲ್ಲಿ ಬಾಳಿಬದುಕಿ ಆ ಪರಿಸರದಲ್ಲಿ ಬೆಳೆದು ತನಗಾದ ಸಿಹಿ–ಕಹಿ ಅನುಭವಗಳನ್ನು ಕಲಾಕೃತಿಯ ಮೂಲಕ ಪ್ರಕಟಿಸಲು ಪ್ರಯತ್ನಿಸುತ್ತಾನೆ. ಇಲ್ಲಿ ಮುಖ್ಯವಾಗಿ ದೇಶೀಯ ಉಡುಗೆ–ತೊಡುಗೆ, ಆಚಾರ–ವಿಚಾರಗಳು ಸಂಸ್ಕೃತಿಯ ಹಿನ್ನಲೆಯ ಬದುಕಿನ ಅನುಭವಗಳು ಕಲಾಕೃತಿಗಳಲ್ಲಿ ಮೂಡಿಬರುತ್ತವೆ. ಈ ಅಂಶಗಳು ಕಲಾವಿದನ ಜೀವನ ಸಾಧನೆಯ ಪ್ರಮುಖ ಆಕರಗಳಾಗಿರುತ್ತವೆ.[೯] ಈ ಆಕರಗಳ ಮೂಲಕ ಕಲಾವಿದನ ಕಲೆ, ಅವನು ಕಲೆಯನ್ನು ಕಲಿತ ಉದ್ದೇಶ, ಮತ್ತು ಈ ಕಲೆಯ ಮೂಲಕ ಅವನು ಕಲಾಜಗತ್ತಿಗೆ ನೀಡಿದ್ದ ಕೊಡುಗೆ, ಸಾಧನೆಗಳ ಅಧ್ಯಯನ ಕೈಗೊಂಡು ಅದರ ಆಳವನ್ನು ವಿಶ್ಲೇಷಿಸಿದಾಗ ಕಲಾವಿದನ ಪರಿಸರದಲ್ಲಿ ಕಲೆಯ ಮಹತ್ವ ಮತ್ತು ಐತಿಹಾಸಿಕ ಹಿನ್ನೆಲೆಯನ್ನು ಕೂಡ ಈ ಅಧ್ಯಯನಕ್ಕೆ ಒಳಪಡಿಸುವ ಉದ್ದೇಶವನ್ನು ಹೊಂದಲಾಗಿದೆ.

ಕವಿರಾಜಮಾರ್ಗಕಾರ ಹೇಳುವ "ತಿರುಳ್ಗನ್ನಡದ ನಾಡಿನಲ್ಲಿರುವ" ನಗರ ಧಾರವಾಡ; ಪ್ರಾಚೀನ ಪ್ರಸಿದ್ಧ ಬೆಳ್ವಲ–೩೦೦ ವಿಸ್ತಾರದಲ್ಲಿ ನೆಲೆಗೊಂಡಿರುವ ಜಿಲ್ಲೆ ಮತ್ತು ನಗರ. ಕನ್ನಡ ಸಾಹಿತ್ಯ ಕೃತಿಯಲ್ಲಿ ಬಲ್ಮೆಯನ್ನು ಸಾಧಿಸಿ, ಕವಿ–ಕಾವ್ಯ ಸಂಪದದ ಜೇನ್ಗೂಡವೆನಿಸಿದ್ದು ಧಾರವಾಡ. ಕರ್ನಾಟಕದ ಇತಿಹಾಸದಲ್ಲಿ ಸಾಮ್ರಾಜ್ಯಗಳು ಅನೇಕ ಹುಟ್ಟಿದವು, ಬಾಳಿದವು, ಆಳಿದವು. ಅವು ಒಂದೊಂದೂ ರಾಜಧಾನಿಯನ್ನು ಮಾಡಿಕೊಂಡವು, ಆ ಒಂದೊಂದು ರಾಜಧಾನಿಯೂ ಆ ಸ್ಥಾನ ಗೌರವವನ್ನು ಮತ್ತು ಪಟ್ಟವನ್ನು ಕಾಲಗತಿಯಲ್ಲಿ ಕಳೆದುಕೊಂಡವು. ಆದರೆ ಧಾರವಾಡದ ಹಿರಿಮೆ–ಗರಿಮೆ ಅನನ್ಯ, ಅದು ಯಾವ ಸಾಮ್ರಾಜ್ಯದ ರಾಜಧಾನಿಯೂ ಅಲ್ಲ, ಅದು ಈ ನಾಡ ಜನಮನ ಹೃದಯ ರೂಪಿಸಿಕೊಂಡು ಬೆಳೆಸುವ "ಸಂಸ್ಕೃತಿ" ಎಂಬ ಭಾವನೆ, ಸಾಧನ,

೦೮. ಎಸ್. ಎಸ್. ಚಿನ್ನಣ್ಣವರ : ಸುರೇಶ ಹಾಲಭಾವಿಯವರ ಕಲೆ ಮತ್ತು ಬದುಕು, (ಅ.ಪ್ರ.ಎಂ.ಪಿ.ಎ.ಕಿ.ಪ್ರ), ಪುಟ – ೧

೦೯. ಡಾ. ಆರ್. ಗೋಪಾಲ್ : ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪುಟ–೧೮

ಅನುಷ್ಠಾನದಿಂದ ಪಾವನಗೊಂಡ ಜನಪದರ ಬದುಕಿನ-ಬಾಳಿನ ರಾಜಧಾನಿ! ಬೆಂಗಳೂರು ಕರ್ನಾಟಕದ ರಾಜಧಾನಿ, ರಾಜಕೀಯವಾಗಿ-ವಾಣಿಜ್ಯವಾಗಿ; ಅದರೆ ನಿಜವಾಗಿ "ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ" ಧಾರವಾಡವೇ! ಇದು ಧಾರವಾಡದ ಕೀರ್ತಿ, ಅದರ ಹಿರಿಮೆ-ಗರಿಮೆ[೧೦]ಯೂ ಆಗಿದೆ.

ಧಾರವಾಡ ಜಿಲ್ಲೆಯ ಪ್ರಾದೇಶಿಕತೆ ಈ ಪ್ರದೇಶದ ಜನರ ಜೀವನ ಆಚಾರ-ವಿಚಾರ, ಜನಪದ ಆಚರಣೆ, ಧಾರ್ಮಿಕ ಪ್ರಭಾವ, ಪ್ರೇರಣೆ ನಂಬಿಕೆ ಇತ್ಯಾದಿಗಳು ಕಲಾವಿದರ ಕಲಾಕೃತಿ ರಚನೆಯ ಮೇಲೆ ಪ್ರಭಾವ ಬೀರಿ ಈ ಪರಂಪರೆ ವೈವಿಧ್ಯಮಯವಾಗಿ ರಚನೆಗೊಳ್ಳಲು ಕಾರಣವಾಗಿದೆ. ಅನೇಕ ಚಿತ್ರಗಳು ಆಯಾಕಾಲದ ಜನರ ಜೀವನದ ಸಮಗ್ರ ವಿವರಗಳನ್ನು ಒಳಗೊಂಡಿರುತ್ತದೆ. ಇವು ಐತಿಹಾಸಿಕ, ಸಾಮಾಜಿಕ, ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಇತಿಹಾಸವನ್ನು ಅರಿಯಲು ಮುಖ್ಯವಾದ ಅನನ್ಯ ಆಕರಗಳಾಗಿವೆ.

ಧಾರವಾಡ ಜಿಲ್ಲೆ ವಿಶಿಷ್ಟವಾದ ಸಾಂಸ್ಕೃತಿಕ ಪರಿಸರ ಹೊಂದಿದ್ದು, ಅದರಡಿಯಲ್ಲಿ ಹಲವಾರು ಲಲಿತಕಲೆಗಳಿಗೆ ಪ್ರಮುಖವಾದ ಸ್ಥಾನಮಾನವನ್ನು ನೀಡಿ ಬೆಳೆಸಿಕೊಂಡು ಬಂದಿರುವುದು ಕಂಡುಬರುತ್ತದೆ. ಶಿಲ್ಪಕಲೆ, ಚಿತ್ರಕಲೆ, ಚಿತ್ರಕಲಾ ಶಾಲೆಗಳು, ಸಂಗೀತ, ಸಂಗೀತ ಗುರುಕುಲ, ವಸ್ತುಸಂಗ್ರಹಾಲಯಗಳು, ಸಾಹಿತ್ಯ ಹೀಗೆ ಇಲ್ಲಿ ವೈವಿಧ್ಯಮಯವಾಗಿ ಬೆಳೆದುಬಂದಿದೆ. ಧಾರವಾಡ ಜಿಲ್ಲೆಯ ಸಾಂಸ್ಕೃತಿಕ ಕೊಡುಗೆಗಳ ಬಗ್ಗೆ ಗಮನಿಸಿದರೆ ಚಿತ್ರಕಲೆಯ ಪಾತ್ರವು ಪ್ರಮುಖವಾಗಿದೆ. ಉತ್ತರ ಕರ್ನಾಟಕದಲ್ಲಿ ಚಿತ್ರಕಲಾ ಶಿಕ್ಷಕರ ತರಬೇತಿ ಶಿಕ್ಷಣವನ್ನು ಮೊದಲ ಬಾರಿಗೆ ಶಾಸ್ತ್ರೀಯ ನೆಲೆಯಲ್ಲಿ ಪ್ರಾರಂಭಿಸಿದ ಕೀರ್ತಿ ಧಾರವಾಡದ್ದು.[೧೧] ಚಿತ್ರಕಲೆಯನ್ನು ಕಲಿಸುವುದು ಚಿತ್ರಕಲೆಯ ಮೂಲಕ ಧರ್ಮ ಪ್ರಸಾರ ಮಾಡುವುದು, ಮನೆ, ಮಠ-ಮಾನ್ಯಗಳಲ್ಲಿ ವರ್ಣಚಿತ್ರಗಳ ಸಮೂಹವನ್ನೆ ಕಾಣಬಹುದು. ಕಲಾವಿದ ಮತ್ತು ಅವನ ಕಲಾಕೃತಿಗೆ ವಿಶೇಷವಾದ ಸ್ಥಾನ ಮಾನ ನೀಡಿ ಹಬ್ಬ-ಹರಿದಿನ, ಉತ್ಸವ, ಜಾತ್ರೆಗಳಲ್ಲಿ ಕಲಾವಿದರಿಗೆ ಗೌರವ ಪುರಸ್ಕಾರವನ್ನು ನೀಡಿ ಚಿತ್ರಕಲಾವಿದರನ್ನು ಪ್ರೋತ್ಸಾಹಿಸುವುದು. ಹೀಗೆ ಹಲವಾರು ಕಲಾಚಟುವಟಿಕೆಗಳ ಮೂಲಕ ಧಾರವಾಡ ಜಿಲ್ಲೆಯ ಜನರು ಚಿತ್ರಕಲೆಯನ್ನು ಉಳಿಸಿ ಬೆಳೆಸುವಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ ಕಲಾವಿದರನ್ನು ಮತ್ತು ಅವರ ಹೊಸ ಹೊಸ ಪ್ರಯೋಗಗಳಿಗೆ ಯಾವಾಗಲು ನೀರೆರೆದು ಪೋಷಿಸುವ ಕಾರ್ಯಕ್ಕೆ ಮುಂದಾಗುತ್ತಾರೆ. ಈ ಎಲ್ಲಾ ಅಂಶಗಳನ್ನು ಚಿತ್ರಕಲೆಯ ಹಿನ್ನಲೆಯಲ್ಲಿ ಸಮಗ್ರವಾಗಿ ಆಧ್ಯಯನಕ್ಕೆ ಒಳಪಡಿಸುವ ಉದ್ದೇಶ ಈ ಅಧ್ಯಯನದ್ದಾಗಿದೆ.

"ಕಲೆಗಳಲ್ಲಿ ಚಿತ್ರಕಲೆ ಶ್ರೇಷ್ಠವಾದುದು. ಚಿತ್ರಕಲೆ ಒಂದು ನಾಡಿನ ಒಂದು ಜನಾಂಗದ

---

೧೦. ಡಾ. ಎಸ್. ಸಿ. ಪಾಟೀಲ : ವರ್ಣಸಂಚಯ, ಪುಟ – ೯೫

೧೧. ಅದೇ., ಪುಟ – ೯೬

ಇತಿಹಾಸವನ್ನು ತಿಳಿಸುವ ಮಹತ್ವದ ಸಾಧನವಾಗಿದೆ. ಅದು ಪ್ರಾಚೀನ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಜೊತೆಗೆ ಆನಂದವನ್ನೂ ನೀಡುತ್ತದೆ. ಒಂದು ಚಿತ್ರ ಇಲ್ಲವೆ ಶಿಲ್ಪಕೃತಿ ಸಾವಿರಾರು ವರ್ಷಗಳ ಇತಿಹಾಸವನ್ನು ನಮ್ಮ ಕಣ್ಮುಂದೆ ನಿಲ್ಲಿಸುವ ಶಕ್ತಿಯನ್ನು ಪಡೆದಿವೆ."[೧೨]

"ಕರ್ನಾಟಕದಲ್ಲಿ ಹಲವು ಜಿಲ್ಲೆಯಲ್ಲಿ ಪ್ರಾಚೀನ ಚಿತ್ರಗಳು ಕಂಡು ಬರುತ್ತವೆ. ಅವುಗಳ ಕುರಿತು ಅಲ್ಲಲ್ಲಿ ಕಿರುಮಾಹಿತಿ ನೀಡುವ ತುಂಡು ಬರವಣಿಗೆಗಳು[೧೩] ಕಂಡುಬರುತ್ತವೆ. ಕಲೆ ಮಾನವನ ಕ್ರಿಯಾ ಶಕ್ತಿಯ ಕುಶಲ ಅಭಿವ್ಯಕ್ತಿ. ಅಭಿವ್ಯಕ್ತಿಯು ಹಲವಾರು ರೀತಿಯಲ್ಲಿ ವ್ಯಕ್ತವಾಗಿದ್ದು, ಆಗಾಗ ಬದಲಾವಣೆ ಆಗುತ್ತಾ ಬಂದಿದೆ. ಮಾನವನಿಗೆ, ತನ್ನ ಸುತ್ತುಮುತ್ತಲಿನ ಪರಿಸರದಿಂದ ಕಲಾಪ್ರಜ್ಞೆ ಹೊರ ಹೊಮ್ಮಲು ಕಾರಣಗಳಾಗುತ್ತವೆ. ತನ್ನ ಪರಿಸರದಲ್ಲಿ ಮನಸ್ಸಿನ ಮೇಲೆ ಹೆಚ್ಚು ಪರಿಣಾಮ ಉಂಟುಮಾಡುತ್ತವೆಯೋ ಅವನ್ನು ಚಿತ್ರಿಸುತ್ತಾನೆ. ಪ್ರಕೃತಿಯನ್ನು ಅದು ಪ್ರಚೋದಿಸಿದ ಭಾವನೆಗಳನ್ನು ಕಲೆಯ ಮೂಲಕ ಸೃಷ್ಟಿಸುತ್ತಾನೆ. ಮಾನವನು ವಿಕಾಸಗೊಂಡಂತೆ ಕಲೆ ಬದಲಾಗುತ್ತಾ ಬಂದಿದೆ. ಕಲೆ ಮಾನವನ ಜೀವನದ ಅಂಗವಾಗಿದ್ದು, ಕಲಾಸೃಷ್ಟಿ ಒಂದಲ್ಲ ಒಂದು ರೂಪದಲ್ಲಿ ನಡೆಯುತ್ತಿದೆ."

ಧಾರವಾಡದ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಲಲಿತಕಲೆಗಳು ಬೆಳೆದು ಬಂದ ಪರಂಪರೆಯನ್ನು ಗುರುತಿಸುವುದು ಈ ಪ್ರಬಂಧದ ಮಹತ್ವದ ಉದ್ದೇಶಗಳಲ್ಲೊಂದಾಗಿದೆ. ಧಾರವಾಡ ಜಿಲ್ಲೆಯು ಜನಪದ ಸಂಸ್ಕೃತಿಯ ಮಹತ್ವದ ತಾಣವಾಗಿದ್ದು, ಇಲ್ಲಿ ಅರಳಿದ ಜನಪದ ಚಿತ್ರಕಲೆ ಪ್ರಮುಖ ಕಲೆಗಳನ್ನು ಅಧ್ಯಯನಕ್ಕೊಳಪಡಿಸುವ ಉದ್ದೇಶವು ಇಲ್ಲಿದೆ. ಧಾರವಾಡ ಜಿಲ್ಲೆಯಲ್ಲಿ ಭಿತ್ತಿಚಿತ್ರಕಲಾ ಪರಂಪರೆಯು ಪ್ರಾಚೀನ ಕಾಲದಿಂದ ಮನೆ, ಮಠ, ಮಂದಿರಗಳಲ್ಲಿ ಬೆಳೆದುಬಂದಿದ್ದು, ಪ್ರಸ್ತುತ ಜಿಲ್ಲೆಯಲ್ಲಿ ಭಿತ್ತಿಚಿತ್ರಕಲೆಯನ್ನು ಅಧ್ಯಯನ ಮಾಡುವ ಅದರ ನೆಲೆ–ಬೆಲೆಯನ್ನು ಗುರುತಿಸುವ ಉದ್ದೇಶವೂ ಇಲ್ಲಿದೆ. ಈ ಜಿಲ್ಲೆಯಲ್ಲಿ ಸಂಗ್ರಹಗೊಂಡಿರುವ ವಸ್ತುಸಂಗ್ರಹಾಲಯಗಳಲ್ಲಿರುವ ಚಿತ್ರಗಳ ಕುರಿತು ಹಾಗೆಯೇ ಇಲ್ಲಿ ಕಲಾಶಿಕ್ಷಣಕ್ಕಾಗಿ ಪ್ರಾರಂಭವಾದ ಶಿಕ್ಷಣ ಸಂಸ್ಥೆಗಳ ಕೊಡುಗೆಗಳನ್ನು ಕುರಿತು ಮತ್ತು ಸಮಕಾಲೀನ ಕಲೆ, ಕಲಾವಿದರನ್ನು ಕುರಿತು ಅಧ್ಯಯನ ಮಾಡುವ ಉದ್ದೇಶವನ್ನು ಪ್ರಸ್ತುತ ಪ್ರಬಂಧವು ಹೊಂದಿದೆ.

**ಅಧ್ಯಯನದ ಸ್ವರೂಪ**

ಪ್ರಸ್ತುತ ಸಂಶೋಧನೆಯ ಅನುಕೂಲತೆಗಾಗಿ ಎಂಟು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

---

೧೨. ಡಾ. ಯಾದಪ್ಪ ಬಿ. ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ – ಒಂದು ಅಧ್ಯಯನ, ಅ.ಪ್ರ.ಪಿಹೆಚ್.ಡಿ.ಮ.ಪ್ರ., ಪುಟ – ೨೫

೧೩. ಅದೇ., ಪುಟ – ೨೬

**ಅಧ್ಯಾಯ-ಒಂದು**

**ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ**

ಈ ಅಧ್ಯಾಯದಲ್ಲಿ ಅಧ್ಯಯನ ಕೈಗೊಳ್ಳುವ ಸ್ಪಷ್ಟ ಉದ್ದೇಶಗಳನ್ನು ಕುರಿತು ಚರ್ಚಿಸಲಾಗಿದೆ. ಹಾಗೆಯೇ ಈ ಸಂಶೋಧನೆ ಪ್ರಬಂಧಕ್ಕೆ ಒಂದು ಸ್ವರೂಪವನ್ನು ಕೊಡುವ ಪ್ರಯತ್ನ ಮಾಡಲಾಗಿದೆ. ಅಲ್ಲದೇ ಈ ಅಧ್ಯಯನವು ಧಾರವಾಡ ಜಿಲ್ಲೆಯ ವ್ಯಾಪ್ತಿಗೆ ಒಳಪಡಿಸಿ ಅಧ್ಯಯನ ನಡೆಸಲಾಗಿದ್ದುದನ್ನು ಸ್ಪಷ್ಟಪಡಿಸಲಾಗಿದೆ. ಹಾಗೆಯೇ ಪ್ರಸ್ತುತ ಅಧ್ಯಯನದ ಕುರಿತು ಈ ಹಿಂದೆ ನಡೆದ ಅಧ್ಯಯನಗಳ ಸಮೀಕ್ಷೆಯನ್ನು ಮಾಡಲಾಗಿದೆ.

**ಅಧ್ಯಾಯ-ಎರಡು**

**ಧಾರವಾಡ ಜಿಲ್ಲೆಯ ಸಾಂಸ್ಕೃತಿಕ ಹಿನ್ನಲೆ ಮತ್ತು ಲಲಿತಕಲೆಗಳು**

ಧಾರವಾಡ ಜಿಲ್ಲೆಯ ಐತಿಹಾಸಿಕ, ಚಾರಿತ್ರಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಹಿನ್ನಲೆಯನ್ನು ಕುರಿತು ಸ್ಥೂಲವಾಗಿ ಚರ್ಚಿಸಲಾಗಿದೆ. ಅಲ್ಲದೆ ಲಲಿತಕಲೆಗಳಾದ ಸಂಗೀತ, ನೃತ್ಯ, ಸಾಹಿತ್ಯ ಮುಂತಾದವುಗಳ ಕುರಿತು ಸಹ ಗಮನಿಸಿ, ಅಧ್ಯಯನಕ್ಕೆ ಪೂರಕವಾದ ಒಂದು ಗಟ್ಟಿ ನೆಲೆಯನ್ನು ಇಲ್ಲಿ ಒದಗಿಸಿಕೊಡುವ ಪ್ರಯತ್ನವಿದೆ.

**ಅಧ್ಯಾಯ-ಮೂರು**

**ಧಾರವಾಡ ಜಿಲ್ಲೆಯ ಜನಪದ ಚಿತ್ರಕಲೆ**

ಈ ಅಧ್ಯಾಯದಲ್ಲಿ ಜನಪದ ಸಂಪ್ರದಾಯದ ಅನೇಕ ಕಲೆಗಳು ಜಿಲ್ಲೆಯಲ್ಲಿದೆ. ಅದರಲ್ಲಿ ಪ್ರಮುಖವಾದ ಕಸೂತಿ ಕಲೆ, ಕಲಘಟಗಿಯ ಕಲೆ, ಹಚ್ಚೆ, ರಂಗೋಲಿ, ಮೆಹಂದಿ, ಮುಂತಾದ ಜನಪದ ಮೂಲದ ಚಿತ್ರಕಲೆಯನ್ನು ಅವುಗಳ ಹುಟ್ಟು, ಬೆಳವಣಿಗೆ ಜನಪದ ನಂಬುಗೆ, ಆಚರಣೆ ಮುಂತಾದ ಅಂಶಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಚಿತ್ರಕಲಾ ರಚನಾಪರಿಕರಗಳ ರಚನಾವಿಧಾನ ಚಿತ್ರಗಳ ವಸ್ತು ವಿಷಯ ಮುಂತಾದವುಗಳ ಬಗ್ಗೆ ಇಲ್ಲಿ ವಿವರಿಸಲಾಗಿದೆ. ಒಟ್ಟಾರೆಯಾಗಿ ಪ್ರಮುಖವಾದ ಜನಪದ ಮೂಲದ ಚಿತ್ರಕಲೆಯನ್ನು ಸ್ಥೂಲವಾಗಿ ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಅಧ್ಯಾಯ-ನಾಲ್ಕು**

**ಧಾರವಾಡ ಜಿಲ್ಲೆಯ ಭಿತ್ತಿಚಿತ್ರಕಲೆ**

ಈ ಅಧ್ಯಾಯದಲ್ಲಿ ಧಾರವಾಡ ಜಿಲ್ಲೆಯಲ್ಲಿ ಕಂಡುಬರುವ ಭಿತ್ತಿಚಿತ್ರ ಕಲೆಯನ್ನು ಕುರಿತು ವಿಶ್ಲೇಷಿಸಲಾಗಿದೆ. ವಿಶೇಷವಾಗಿ ಅಮ್ಮಿನಭಾವಿಯ ಪಂಚಗೃಹ ಹಿರೇಮಠ, ಉಪ್ಪಿನಬೆಟಗೇರಿಯ ಯಲ್ಲಮ್ಮ ದೇವಸ್ಥಾನ, ನವಲಗುಂದ ಪಂಚಗೃಹ ಹಿರೇಮಠ, ಅಣ್ಣಿಗೇರಿಯ ವಾಡೆಯಲ್ಲಿರುವ ಭಿತ್ತಿಚಿತ್ರಗಳ ಬಗ್ಗೆ ಸ್ಥೂಲವಾಗಿ ಅಧ್ಯಯನ ಮಾಡಲಾಗಿದೆ.



P. T. O

**ಅಧ್ಯಾಯ–ಐದು**

**ಧಾರವಾಡ ಜಿಲ್ಲೆಯ ವಸ್ತುಸಂಗ್ರಹಾಲಯದ ಚಿತ್ರಕಲೆ**

ಈ ಅಧ್ಯಾಯದಲ್ಲಿ ಧಾರವಾಡ ಜಿಲ್ಲೆಯಲ್ಲಿರುವ ಪ್ರಮುಖ ವಸ್ತುಸಂಗ್ರಹಾಲಯದಲ್ಲಿ ಸಂಗ್ರಹಣೆಗೊಂಡಿರುವ ಚಿತ್ರಕಲಾಕೃತಿ ಮತ್ತು ಕಲಾವಿದರು ಯಾವ ಉದ್ದೇಶಕ್ಕಾಗಿ ಕಲಾಕೃತಿ ರಚನೆ ಮಾಡಿದರು ಮತ್ತು ಅವುಗಳ ಮಹತ್ವವನ್ನು ಕುರಿತು ಅಧ್ಯಯನ ಮಾಡಲಾಗಿದೆ. ಈ ಎಲ್ಲಾ ಕಲಾಕೃತಿಗಳ ರಚನೆಯ ಹಿನ್ನೆಲೆಯನ್ನು ಮತ್ತು ಚಿತ್ರಗಳ ವಸ್ತುವಿಷಯ ಮುಂತಾದ ಅಂಶಗಳನ್ನು ದೃಶ್ಯಕಲೆಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ– ಆರು**

**ಧಾರವಾಡ ಜಿಲ್ಲೆಯ ಚಿತ್ರಕಲಾ ಶಿಕ್ಷಣ ಸಂಸ್ಥೆಗಳು ಮತ್ತು ಕಲಾವಿದರು**

ಧಾರವಾಡ ಜಿಲ್ಲೆಯಲ್ಲಿರುವ ಚಿತ್ರಕಲಾ ಶಿಕ್ಷಣ ಸಂಸ್ಥೆಗಳು ಮತ್ತು ಕಲಾಚಟುವಟಿಕೆಗಳು, ಕಲಾ ಸಂಘಟನೆಗಳ ಕುರಿತು ಅಧ್ಯಯನ ಮಾಡಲಾಗಿದೆ. ಚಿತ್ರಕಲಾ ಶಿಕ್ಷಣ–ಸಂಸ್ಥೆಗಳು ಅವುಗಳ ಹುಟ್ಟು, ಬೆಳವಣಿಗೆ ಬೋಧನಾಪದ್ಧತಿ, ಕಲಾಶಿಕ್ಷಕರ ಸಾಧನೆ, ಕಲಾಪ್ರದರ್ಶನಗಳು, ಕಲಾಶಿಬಿರಗಳು, ಕಲಾಪ್ರಾತ್ಯಕ್ಷಿಕೆ, ಹೀಗೆ ಶೈಕ್ಷಣಿಕ ಚಟುವಟಿಕೆಗಳ ಕುರಿತು ಈ ಅಧ್ಯಾಯದಲ್ಲಿ ಗಮನಹರಿಸಲಾಗಿದೆ. ಧಾರವಾಡ ಜಿಲ್ಲೆಗೆ ಅನೇಕ ಹಿರಿಯ–ಕಿರಿಯ ಕಲಾವಿದರು ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ ಮತ್ತು ರಾಷ್ಟ್ರೀಯ, ಅಂತರಾಷ್ಟ್ರೀಯ ಮಟ್ಟದಲ್ಲಿ ಸಾಧನೆ ಮಾಡಿದ್ದಾರೆ. ಅವರಲ್ಲಿ ಪ್ರಮುಖರಾದ ಕಲಾವಿದರನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ, ಹಿರಿಯ ಕಲಾವಿದರಾದ ಡಾ.ಎಂ.ವಿ.ಮಿಣಜಗಿ, ಡಿ.ವಿ.ಹಾಲಭಾವಿ, ಡಿ.ಜಿ.ಬಡಿಗೇರ, ಎನ್.ಜಿ ಬಡಿಗೇರ ಬಸವರಾಜ ಹಳಿಜೋಳ, ಆರ್ಯ ಆಚಾರ, ವಾಚೇದಮಠ, ಎಂ.ಆರ್.ಬಾಳಿಕಾಯಿ ಮತ್ತು ಈ ಜಿಲ್ಲೆಯಲ್ಲಿನ ೫೫ ವರ್ಷಕ್ಕೆ ಮೇಲ್ಪಟ್ಟ ಹಿರಿಯ ಕಲಾವಿದರನ್ನು ಮಾತ್ರ ಪ್ರಸ್ತುತ ಅಧ್ಯಯನದಲ್ಲಿ ಸ್ಥೂಲವಾಗಿ ಅವರ ಸಾಧನೆಯನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

**ಅಧ್ಯಾಯ–ಏಳು**

**ಧಾರವಾಡ ಜಿಲ್ಲೆಯಲ್ಲಿ ಚಿತ್ರಕಲಾ ಸಾಹಿತ್ಯ ಸಮೀಕ್ಷೆ**

ಈ ಅಧ್ಯಾಯದಲ್ಲಿ ಧಾರವಾಡ ಜಿಲ್ಲೆಯಿಂದ ಹೊರಬಂದ ಚಿತ್ರಕಲಾ ಸಾಹಿತ್ಯದ ಸಮೀಕ್ಷೆಯನ್ನು ಮಾಡಲಾಗಿದೆ. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಿಂದ ಪ್ರಕಟವಾದ ಚಿತ್ರಕಲಾ ಗ್ರಂಥ, ಎಂ,ಫಿಲ್. ಪಿಎಚ್.ಡಿ ಪ್ರಬಂಧಗಳು ಮತ್ತು ಜಿಲ್ಲೆಯ ಪ್ರಮುಖ ಪುಸ್ತಕಾಲಯಗಳಿಂದ ಪ್ರಕಟಗೊಂಡ ಚಿತ್ರಕಲಾ ಪುಸ್ತಕಗಳನ್ನು ಅಧ್ಯಯನ ಮಾಡಲಾಗಿದೆ. ಉದಾ: ಶಿವರಾಮಕಾರಂತ ಬಿ,ಪಿ. ಬಾಯಿರಿ. ಡಿ.ವಿ. ಹಾಲಭಾವಿ. ಡಾ. ಎಸ್.ಸಿ ಪಾಟೀಲ, ಸುರೇಶ

ಕುಲಕರ್ಣಿ ಮುಂತಾದ ಕಲಾವಿದರು ಮತ್ತು ಸಾಹಿತಿಗಳ ಪ್ರಕಟಿತ ಚಿತ್ರಕಲಾ ಗ್ರಂಥಗಳನ್ನು ಸಮೀಕ್ಷೆ ಮಾಡಲಾಗಿದೆ.

**ಅಧ್ಯಾಯ-ಎಂಟು**

**ಸಮಾರೋಪ**

ಈ ಮೇಲಿನ ಏಳು ಅಧ್ಯಾಯಗಳ ಕುರಿತು ಸಂಕ್ಷಿಪ್ತವಾದ ವಿವರಣೆಯನ್ನು ಮಾಡಲಾಗಿದೆ. ಮತ್ತು ಪ್ರತಿ ಅಧ್ಯಯನ ವ್ಯಕ್ತವಾಗುವ ಫಲಿತಗಳನ್ನು ಕೊಡಲಾಗಿದೆ.

**ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದ ಅಧ್ಯಯನಗಳ ಸಮೀಕ್ಷೆ**

ಈ ಅಧ್ಯಯನಗಳನ್ನು ಈ ಕೆಳಗಿನಂತೆ ವಿಂಗಡಿಸಿಕೊಂಡು ಸಮೀಕ್ಷಿಸಲಾಗಿದೆ. ೨೦೧೧ರಲ್ಲಿ ಸುನೀಲ ಹೆಗಡೆಯವರು ಬಿ.ವಿ.ಎ. ಪದವಿಯ ಅವಶ್ಯಕತೆಗಾಗಿ **ಧಾರವಾಡದ ಕೋಲಾಜ ಚಿತ್ರಕಲಾವಿದರು**[೧೪] ಎಂಬ ವಿಷಯದ ಕುರಿತು ಕಿರು ಸಂಶೋಧನೆ ಮಾಡಿದ್ದು, ಇದರಲ್ಲಿ ಧಾರವಾಡದ ಕೋಲಾಜ್ ಕಲಾವಿದರಾದ ಎಂ.ಆರ್.ಬಾಳಿಕಾಯಿ, ಭರತ ಕುಮಾರ ಸುಣಗಾರ ಪ್ರಭಾಕರರಾವ ಬೈಲ ಇವರ ಕಲಾಜೀವನ, ಕಲಾಪ್ರದರ್ಶನ ಮತ್ತು ಕಲಾಕೃತಿಗಳ ತೌಲನಿಕ ಅಧ್ಯಯನವನ್ನು ಮಾಡಲಾಗಿದೆ.

**ಎಂ.ಎಫ್.ಎ/ ಎಂ.ವಿ.ಎ. ಹಾಗೂ ಎಂ.ಈಡಿ ಕಿರುಪ್ರಬಂಧಗಳು**

೧೯೮೩ರಲ್ಲಿ ಎಸ್. ಸಿ. ಪಾಟೀಲರವರು **ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ**[೧೫] ಎಂಬ ವಿಷಯ ಕುರಿತು ಕರ್ನಾಟಕ ವಿ.ವಿ. ಧಾರವಾಡದ ಸ್ನಾತಕೋತ್ತರ ಶಿಕ್ಷಣ ವಿಭಾಗಕ್ಕೆ ಸಲ್ಲಿಸಿದ್ದಾರೆ. ಈ ಪ್ರಬಂಧವು ವಿಶ್ವವಿದ್ಯಾಲಯ ಮಟ್ಟದಲ್ಲಿ ನಡೆದ ಮೊದಲ ಚಿತ್ರಕಲಾ ಸಂಶೋಧನಾಧ್ಯಯನವೆಂದು ಹೇಳಬಹುದು.

೨೦೦೩ರಲ್ಲಿ ಶಂಕ್ರಪ್ಪ ಎಂ. ಕುಂದಗೋಳ ಅವರು **ಅಮ್ಮಿನಭಾವಿ ಭಿತ್ತಿಚಿತ್ರಕಲೆ**[೧೬] ಎಂಬ ವಿಷಯ ಕುರಿತು ಕಿರು ಸಂಶೋಧನಾಧ್ಯಯನ ಮಾಡಿದ್ದಾರೆ. ೨೦೦೬ರಲ್ಲಿ ಬಿ.ಎಂ.ಪಾಟೀಲ ಅವರು **ಧಾರವಾಡದ ಹಾಲಭಾವಿ ಸ್ಕೂಲ್ ಆಫ್ ಆರ್ಟ್ ಒಂದು ಐತಿಹಾಸಿಕ ಅಧ್ಯಯನ**[೧೭] ಎಂಬ ಕಿರು ಸಂಶೋಧನೆ ಮಾಡಿದ್ದು, ಇದರಲ್ಲಿ ೧೯೩೫ರಲ್ಲಿ ಡಿ. ವಿ. ಹಾಲಭಾವಿಯವರು

---

೧೪. ಸುನೀಲ ಹೆಗಡೆ : ಧಾರವಾಡದ ಕೋಲಾಜ ಚಿತ್ರಕಲಾವಿದರು, ಅ.ಪ್ರ.ಬಿ.ವಿ.ಎ.ಕಿ.ಪ್ರ., ಕರ್ನಾಟಕ ವಿ.ವಿ. ಧಾರವಾಡ. ೨೦೧೧

೧೫. ಎಸ್. ಸಿ. ಪಾಟೀಲ : ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ, ಅ.ಪ್ರ.ಬಿ.ಈಡಿ.ಕಿ.ಪ್ರ., ಕರ್ನಾಟಕ ವಿ.ವಿ. ಧಾರವಾಡ. ೧೯೮೩

೧೬. ಶಂಕ್ರಪ್ಪ ಎಂ. ಕುಂದಗೋಳ : ಅಮ್ಮಿನಭಾವಿ ಭಿತ್ತಿಚಿತ್ರಕಲೆ, ಅ.ಪ್ರ.ಎಂ.ಎಫ್.ಎ.ಕಿ.ಪ್ರ., ೨೦೦೩

೧೭. ಬಿ. ಎಂ. ಪಾಟೀಲ : ಧಾರವಾಡದ ಹಾಲಭಾವಿ ಸ್ಕೂಲ್ ಆಫ್ ಆರ್ಟ್- ಒಂದು ಐತಿಹಾಸಿಕ ಅಧ್ಯಯನ, ಅ.ಪ್ರ.ಎಂ.ಎ.ಎ.ಕಿ.ಪ್ರ., ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧

ಸ್ಥಾಪಿಸಿದ ಸ್ಕೂಲ್ ಆಫ್ ಆರ್ಟ್‌ದ ಸ್ಥಾಪನೆ ಬೆಳವಣಿಗೆ, ಶೈಕ್ಷಣಿಕ ಕೊಡುಗೆ, ಕಲಾಚಟುವಟಿಕೆಗಳು ಮುಂತಾದ ಅಂಶಗಳ ಕುರಿತು ಅಧ್ಯಯನ ಮಾಡಿದ್ದಾರೆ. ೨೦೦೮ರಲ್ಲಿ ಆರ್.ಆರ್.ಸಿದ್ದಾಪೂರ ಅವರು **ಕಲಾವಿದ ಬಿ. ಮಾರುತಿ ಕಲೆ ಮತ್ತು ಬದುಕು**[೧೮] ಎಂಬ ವಿಷಯದ ಕುರಿತು ಕಿರು ಸಂಶೋಧನಾಧ್ಯಯನ ಮಾಡಿದ್ದಾರೆ. ೨೦೦೯ರಲ್ಲಿ ಇಸ್ಮಾಯಿಲ್ ಜಿ. ನದಾಪ್ ಅವರು **ಕಲಾವಿದ ಎಸ್. ಎಮ್. ದಾಟನಾಳ ಅವರು ಜೀವನ ಮತ್ತು ಕಲಾಕೃತಿಗಳ ಒಂದು ಅಧ್ಯಯನ**[೧೯] ಎಂಬ ವಿಷಯದ ಕುರಿತು ಕಿರು ಸಂಶೋಧನಾಧ್ಯಯನ ಮಾಡಿದ್ದಾರೆ. ಇದೇ ಅವಧಿಯಲ್ಲಿ ಅರ್ಚನಾ ಸುತಾರ ಅವರು **ಭರತ ಕುಮಾರ ಅವರ ಬದುಕು ಮತ್ತು ಕಲಾಕೃತಿಗಳು**[೨೦] ಎಂಬ ವಿಷಯದ ಕುರಿತು ಕಿರು ಸಂಶೋಧನಾಧ್ಯಯನ ಮಾಡಿದ್ದಾರೆ.

೨೦೧೦ರಲ್ಲಿ ಪಿ.ವಿ.ಬಡಿಗೇರ ಅವರು **ಅಮ್ಮಿನಬಾವಿ ಮತ್ತು ಮಹಾಲಿಂಗಪೂರು ವೀರಶೈವ ಮಠಗಳ ಭಿತ್ತಿಚಿತ್ರಕಲೆಗಳ ತೌಲನಿಕ ಅಧ್ಯಯನ**[೨೧] ಎಂಬ ವಿಷಯದ ಕುರಿತು ಕಿರು ಸಂಶೋಧನೆ ಮಾಡಿದ್ದಾರೆ. ಇದೇ ಅವಧಿಯಲ್ಲಿ ಎನ್.ಎನ್. ಚಿನ್ನಣ್ಣವರು **ಸುರೇಶ ಹಾಲಭಾವಿಯವರ ಕಲೆ ಮತ್ತು ಬದುಕು**[೨೨] ಎಂಬ ವಿಷಯದ ಕುರಿತು, ಆರ್.ಎಫ್.ಹಿರೇಗೌಡರ ಅವರು **ಕಲಾವಿದ ವಿ.ಬಿ.ಬಡಿಗೇರ ಬದುಕು ಮತ್ತು ಕಲಾಕೃತಿಗಳು**[೨೩] ಎಂಬ ವಿಷಯದ ಕುರಿತು, ಎಂ.ಎಸ್.ಹೊಸಹಳ್ಳಿಮಠ ಅವರು **ಕಲಾವಿದ ಡಿ.ವಿಶ್ವನಾಥ ಜೀವನ ಮತ್ತು ಕಲಾಕೃತಿಗಳ ಒಂದು ಅಧ್ಯಯನ**[೨೪] ಎಂಬ ವಿಷಯದ ಕುರಿತು ಕಿರು ಸಂಶೋಧನಾಧ್ಯಯನ ಮಾಡಿದ್ದಾರೆ.

೨೦೧೧ರಲ್ಲಿ ಸಿ.ಸಿ.ಬಾರಕೇರ ಅವರು **ಚಿತ್ರಕಲಾ ಪ್ರಪಂಚಕ್ಕೆ ಧಾರವಾಡ ಸರಕಾರಿ ಚಿತ್ರಕಲಾ ಮಹಾವಿದ್ಯಾಲಯದ ಕೊಡುಗೆ**[೨೫] ಎಂಬ ವಿಷಯದ ಕುರಿತು ಕಿರುಸಂಶೋಧನೆ ಮಾಡಿದ್ದು,

---

೧೮. ಆರ್. ಆರ್. ಸಿದ್ದಾಪೂರ : ಕಲಾವಿದ ಬಿ. ಮಾರುತಿ ಕಲೆ ಮತ್ತು ಬದುಕು, ಅ.ಪ್ರ.ಎಂ.ವಿ.ಎ.ಕಿ.ಪ್ರ., ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೮

೧೯. ಇಸ್ಮಾಯಿಲ್ ಜಿ. ನದಾಪ್ : ಕಲಾವಿದ ಎಸ್. ಎಂ. ದಾಟನಾಳ ಅವರು ಜೀವನ ಮತ್ತು ಕಲಾಕೃತಿಗಳ ಒಂದು ಅಧ್ಯಯನ, ಅ.ಪ್ರ.ಎಂ.ವಿ.ಎ.ಕಿ.ಪ್ರ., ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೯

೨೦. ಅರ್ಚನಾ ಸುತಾರ : ಭರತ ಕುಮಾರ ಅವರ ಬದುಕು ಮತ್ತು ಕಲಾಕೃತಿಗಳು, ಅ.ಪ್ರ.ಎಂ.ವಿ.ಎ.ಕಿ.ಪ್ರ., ಕನ್ನಡ ವಿಶ್ವವಿದ್ಯಾಲಯ. ಹಂಪಿ. ೨೦೦೯

೨೧. ಪಿ. ವಿ. ಬಡಿಗೇರ : ಅಮ್ಮಿನಭಾವಿ ಮತ್ತು ಮಹಾಲಿಂಗಪುರ ವೀರಶೈವ ಮಠಗಳ ಭಿತ್ತಿಚಿತ್ರಕಲೆಗಳ ತೌಲನಿಕ ಅಧ್ಯಯನ, ಅ.ಪ್ರ.ಎಂ.ವಿ.ಎ.ಕಿ.ಪ್ರ., ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೦

೨೨. ಎನ್ ಎನ್. ಚಿನ್ನಣ್ಣವರ : ಸುರೇಶ ಹಾಲಭಾವಿಯವರ ಕಲೆ ಮತ್ತು ಬದುಕು, ಅ.ಪ್ರ.ಎಂ.ಪಿ.ಎ.ಕಿ.ಪ್ರ., ಕನ್ನಡ ವಿಶ್ವವಿದ್ಯಾಲಯ. ಹಂಪಿ ೨೦೧೦

೨೩. ಆರ್. ಎಫ್. ಹಿರೇಗೌಡರ್ : ಕಲಾವಿದ ವಿ.ಬಿ. ಬಡಿಗೇರ ಬದುಕು ಮತ್ತು ಕಲಾಕೃತಿಗಳು, ಅ.ಪ್ರ.ಎಂ.ವಿ.ಎ.ಕಿ.ಪ್ರ., ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೨೪. ಎಂ. ಎಸ್. ಹೊಸಳ್ಳಿಮಠ : ಕಲಾವಿದ ಡಿ. ವಿಶ್ವನಾಥ ಜೀವನ ಮತ್ತು ಕಲಾಕೃತಿಗಳ ಒಂದು ಅಧ್ಯಯನ, ಅ.ಪ್ರ.ಎಂ.ಪಿ.ಎ.ಕಿ.ಪ್ರ., ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೨೫. ಸಿ.ಸಿ.ಬಾರಕೇರ : ಚಿತ್ರಕಲಾ ಪ್ರಪಂಚಕ್ಕೆ ಧಾರವಾಡ ಸರಕಾರಿ ಚಿತ್ರಕಲಾ ಮಹಾವಿದ್ಯಾಲಯದ ಕೊಡುಗೆ, ಅ.ಪ್ರ.ಎಂ.ವಿ.ಎ.ಕಿ.ಪ್ರ., ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧

ಇದರಲ್ಲಿ ೧೯೭೪ರಲ್ಲಿ ಪ್ರಾರಂಭವಾದ ಧಾರವಾಡದ ಸರಕಾರಿ ಚಿತ್ರಕಲಾ ಮಹಾವಿದ್ಯಾಲಯದ ಸ್ಥಾಪನೆ. ಬೆಳವಣಿಗೆ, ಧಾರವಾಡದ ಸಾಂಸ್ಕೃತಿಕ ಪರಿಸರ ಮುಂತಾದ ಅಂಶಗಳ ಬಗ್ಗೆ ಅಧ್ಯಯನ ಮಾಡಲಾಗಿದೆ.

ಇದೇ ಅವಧಿಯಲ್ಲಿ ಶ್ರೀಮತಿ ಲತಾರಾಣಿ ಮಲ್ಹಾರ ಅವರು **ಡಾ. ಮಿಣಜಗಿಯವರ ಶ್ರೀ ವಿಜಯಮಹಾಂತೇಶ ಲಲಿತಕಲಾ ಮಹಾವಿದ್ಯಾಲಯದ ಐತಿಹಾಸಿಕ ಅಧ್ಯಯನ**[೨೬] ಎಂಬ ವಿಷಯದ ಕುರಿತು ಕಿರು ಸಂಶೋಧನೆ ಮಾಡಿದ್ದು ಇದರಲ್ಲಿ ೧೯೮೪ರಲ್ಲಿ ಹುಬ್ಬಳ್ಳಿಯಲ್ಲಿ ಎಂ. ವಿ. ಮಿಣಜಗಿಯವರಿಂದ ಸ್ಥಾಪನೆಗೊಂಡ ಕಲಾಶಾಲೆ ಶ್ರೀ. ವಿಜಯ ಮಹಾಂತೇಶ ಲಲಿತಕಲಾ ಮಹಾವಿದ್ಯಾಲಯದ ಬೆಳವಣಿಗೆ ಎಂ. ವಿ. ಮಿಣಜಗಿಯವರ ಕಲಾಬದುಕು, ಕಲಾಕೃತಿಗಳು, ಅಧ್ಯಾಪಕರ ವಿದ್ಯಾರ್ಥಿಗಳ ಕೊಡುಗೆ ಸಾಧನೆ ಮತ್ತು ಕಲಾಶಾಲೆಯಲ್ಲಿ ಸಂಗ್ರಹಗೊಂಡಿರುವ ವಿವಿಧ ಕಲಾವಿದರ ಕುರಿತು ಹಾಗೂ ಶಿವಾನಂದ ಕೆ. ಪತ್ತಾರ ಅವರು ಕಲಾವಿದ ಆರ್ಯ ಆಚಾರ್ಯ ಎಂಬ ವಿಷಯದ ಕುರಿತು ಕಿರು ಸಂಶೋಧನಾಧ್ಯಯನ ಮಾಡಿದ್ದಾರೆ.

**ಎಂ.ಫಿಲ್ ಕಿರುಪ್ರಬಂಧಗಳು**

೨೦೦೫ರಲ್ಲಿ ಶಂಕರಪ್ಪ ಎಂ. ಕುಂದಗೋಳ ಅವರು **ಧಾರವಾಡದ ಚಿತ್ರಕಲಾವಿದ ಡಿ. ವಿ. ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು**[೨೭] ಎಂಬ ವಿಷಯದ ಕುರಿತು ಹಾಗೂ ಸಿ.ಡಿ.ಜಟ್ಟೆಣ್ಣನವರ ಅವರು **ಕಲಾವಿದ ಡಾ.ಎಂ.ವ್ಹಿ.ಮಿಣಜಗಿ ಒಂದು ಅಧ್ಯಯನ**[೨೮] ಎಂಬ ವಿಷಯದ ಕುರಿತು ಕಿರು ಸಂಶೋಧನಾಧ್ಯಯನ ಮಾಡಿದ್ದಾರೆ. ೨೦೦೭ರಲ್ಲಿ ಶಶಿಕಾಂತ ಕೆ. ಬಸರಿಕಟ್ಟಿ ಅವರು **ಕಲಘಟಗಿಯ ಕಲೆ ಒಂದು ಅಧ್ಯಯನ**[೨೯] ಎಂಬ ವಿಷಯದ ಕುರಿತು ಕಿರು ಸಂಶೋಧನಾಧ್ಯಯನ ಮಾಡಿದ್ದಾರೆ ಹಾಗೂ ೨೦೧೦ರಲ್ಲಿ ಭಾನುಮತಿ ಕೆ. ಎಲ್ ಅವರು **ಚಿತ್ರಕಲಾವಿದ ಎಂ.ಜಿ.ವಾಚೇದಮಠ ಬದುಕು ಮತ್ತು ಕಲಾಕೃತಿಗಳು**[೩೦] ಎಂಬ ವಿಷಯದ ಕುರಿತು ಕಿರು ಸಂಶೋಧನಾಧ್ಯಯನ ಮಾಡಿದ್ದಾರೆ.

---

೨೬. ಶ್ರೀಮತಿ ಲತಾರಾಣಿ ಮಲ್ಹಾರ : ಡಾ. ಮಿಣಜಗಿಯವರ ಶ್ರೀ ವಿಜಯಮಹಾಂತೇಶ ಲಲಿತಕಲಾ ಮಹಾವಿದ್ಯಾಲಯದ ಐತಿಹಾಸಿಕ ಅಧ್ಯಯನ, ಅ.ಪ್ರ.ಎಂ.ವಿ.ಎ.ಕಿ.ಪ್ರ., ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧

೨೭. ಶಂಕ್ರಪ್ಪ ಎಂ. ಕುಂದಗೋಳ : ಧಾರವಾಡ ಚಿತ್ರಕಲಾವಿದ ಡಿ.ವಿ. ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು, ಪ್ರ.ಎಂ.ಫಿಲ್‌ಸಂ.ಪ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೫

೨೮. ಸಿ. ಡಿ. ಜಟ್ಟೆಣ್ಣವರ : ಕಲಾವಿದ ಡಾ. ಎಂ.ವಿ. ಮಿಣಜಗಿ ಒಂದು ಅಧ್ಯಯನ, ಅ.ಪ್ರಎಂ.ಫಿಲ್‌ಸಂ.ಪ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೫

೨೯. ಶಶಿಕಾಂತ ಕೆ. ಬಸರಿಕಟ್ಟಿ : ಕಲಘಟಗಿಯ ಕಲೆ – ಒಂದು ಅಧ್ಯಯನ, ಅ.ಪ್ರ.ಎಂ.ಫಿಲ್‌ಸಂ.ಪ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೭

೩೦. ಭಾನುಮತಿ ಕೆ. ಎಲ್. : ಚಿತ್ರಕಲಾವಿದ ಎಂ.ಜಿ. ವಾಚೇದಮಠ ಬದುಕು ಮತ್ತು ಕಲಾಕೃತಿಗಳು, ಅ.ಪ್ರ.ಎಂ.ಫಿಲ್‌ಸಂ.ಪ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೦

**ಪಿಹೆಚ್.ಡಿ. ಮಹಾಪ್ರಬಂಧಗಳು**

ಧಾರವಾಡ ವಿಶ್ವವಿದ್ಯಾಲಯಕ್ಕೆ ೧೯೯೧ರಲ್ಲಿ ಎಸ್. ಸಿ. ಪಾಟೀಲರವರು **ಕರ್ನಾಟಕ ಜನಪದ ಚಿತ್ರಕಲೆ**[೩೧] ಎಂಬ ವಿಷಯ ಕುರಿತು ಪಿಹೆಚ್.ಡಿ ಮಹಾಪ್ರಬಂಧ, ಹಾಗೂ ೨೦೦೨ರಲ್ಲಿ **A Critical analysis of Art Education at School level in Karnataka state with special reference to Drawing and Painting (ಕರ್ನಾಟಕದ ಮಾಧ್ಯಮಿಕ ಶಾಲಾಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ ಒಂದು ವಿಮರ್ಶಾತ್ಮಕ ಅಧ್ಯಯನ)**[೩೨] ಎಂಬ ವಿಷಯ ಕುರಿತು ದ್ವಿತೀಯ ಪಿಹೆಚ್.ಡಿ ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ.

ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೦ರಲ್ಲಿ ಯಾದಪ್ಪ ಬಿ. ಪರದೇಶಿಯವರು **ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ – ಒಂದು ಅಧ್ಯಯನ**[೩೩] ಎಂಬ ವಿಷಯ ಕುರಿತು, ೨೦೦೪ರಲ್ಲಿ ಶಶಿಕಲಾ ಹೂಗಾರ ಅವರು **ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ**[೩೪] ಎಂಬ ವಿಷಯ ಕುರಿತು, ೨೦೦೫ರಲ್ಲಿ ಎಚ್. ಎನ್. ಚಿತ್ರಗಾರ ಅವರು **ಕರ್ನಾಟಕದ ಹಸ್ತಪ್ರತಿ ಚಿತ್ರಕಲೆ**[೩೫] ಎಂಬ ವಿಷಯ ಕುರಿತು, ೨೦೦೮ರಲ್ಲಿ ಪ್ರೇಮಾನಂದ ಟಿ. ಲಕ್ಕಣ್ಣನವರು **ಕರ್ನಾಟಕದ ದೃಶ್ಯಕಲಾ ಸಾಹಿತ್ಯ – ಒಂದು ವೈಚಾರಿಕ ಅಧ್ಯಯನ**[೩೬] ಎಂಬ ವಿಷಯ ಕುರಿತು ಹಾಗೂ ೨೦೧೧ರಲ್ಲಿ ನಿಂಗಪ್ಪ ಎಂ. ಅಂಗಡಿಯವರು **ಕರ್ನಾಟಕದ ಗಾಜೀನ ಮೇಲಿನ ಚಿತ್ರಕಲೆ – ಒಂದು ಅಧ್ಯಯನ**[೩೭] ಎಂಬ ವಿಷಯ ಕುರಿತು ಪಿಹೆಚ್.ಡಿ ಮಹಾಪ್ರಬಂಧವನ್ನು ಸಲ್ಲಿಸಲಾಗಿದೆ. ಈ ಮೇಲಿನ ಸಲ್ಲಿಕೆಯಾದ ಮಹಾಪ್ರಬಂಧಗಳಲ್ಲಿ ಧಾರವಾಡ ಜಿಲ್ಲೆಯಲ್ಲಿನ ಚಿತ್ರಕಲೆಗಳ ಕುರಿತು ಸಾಂದರ್ಭಿಕವಾಗಿ ಹೇಳಲಾಗಿದೆ.

ಹೀಗೆ ಮೇಲಿನ ವಿಷಯಗಳಿಗೆ ತಕ್ಕ ಹಾಗೆ ಅಧ್ಯಯನ ಮಾಡಿದ್ದು, ಅವೆಲ್ಲಾ ಬೇರೆ ಬೇರೆ ವಿಷಯಕ್ಕೆ ಸಂಬಂಧಿಸಿದ ಬಿಡಿಬಿಡಿಯಾದ ಅಧ್ಯಯನಗಳಾಗಿವೆ. ಧಾರವಾಡ ಜಿಲ್ಲೆಯ

---

೩೧. ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಪ್ರ.ಪಿಹೆಚ್.ಡಿ.ಮ.ಪ್ರ., ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೯೧

೩೨. ಡಾ. ಎಸ್. ಸಿ. ಪಾಟೀಲ : A Critical analysis of Art Education at School level in Karnataka state with special reference to Drawing and Painting (ಕರ್ನಾಟಕದ ಮಾಧ್ಯಮಿಕ ಶಾಲಾಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ ಒಂದು ವಿಮರ್ಶಾತ್ಮಕ ಅಧ್ಯಯನ), ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೨೦೦೨

೩೩. ಯಾದಪ್ಪ ಬಿ. ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ – ಒಂದು ಅಧ್ಯಯನ, ಅ.ಪ್ರ.ಪಿಹೆಚ್.ಡಿ.ಮ.ಪ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೦

೩೪. ಶಶಿಕಲಾ ಹೂಗಾರ : ಕರ್ನಾಟಕದ ತೊಗಲುಗೊಂಬೆ ಚಿತ್ರಕಲೆ, ಅ.ಪ್ರ.ಪಿಹೆಚ್.ಡಿ.ಮ.ಪ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೪

೩೫. ಎಚ್. ಎನ್. ಚಿತ್ರಗಾರ : ಕರ್ನಾಟಕದ ಹಸ್ತಪ್ರತಿ ಚಿತ್ರಕಲೆ, ಅ.ಪ್ರ.ಪಿಹೆಚ್.ಡಿ.ಮ.ಪ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೫

೩೬. ಪ್ರೇಮಾನಂದ ಟಿ. ಲಕ್ಕಣ್ಣನವರ : ಕರ್ನಾಟಕದ ದೃಶ್ಯಕಲಾ ಸಾಹಿತ್ಯ – ಒಂದು ವೈಚಾರಿಕ ಅಧ್ಯಯನ, ಅ.ಪ್ರ.ಪಿಹೆಚ್.ಡಿ.ಮ.ಪ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೮

೩೭. ನಿಂಗಪ್ಪ ಎಂ. ಅಂಗಡಿ : ಕರ್ನಾಟಕ ಗಾಜಿನ ಮೇಲಿನ ಚಿತ್ರಕಲೆ – ಒಂದು ಅಧ್ಯಯನ, ಅ.ಪ್ರ.ಪಿಹೆಚ್.ಡಿ.ಮ.ಪ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೧

ಸಮಗ್ರವಾದ ಚಿತ್ರಕಲೆಯ ಒಂದು ನೋಟವನ್ನು ಕಟ್ಟಿಕೊಡುವ ಪ್ರಯತ್ನಗಳು ಇಲ್ಲಿಯವರೆಗೆ ನಡೆಯದೇ ಇರುವುದನ್ನು ಗಮನಿಸಿ ಪ್ರಸ್ತುತ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

**ಅಧ್ಯಯನದ ವ್ಯಾಪ್ತಿ**

ಈ ಅಧ್ಯಯನವು ಧಾರವಾಡ ಜಿಲ್ಲೆಯ ವ್ಯಾಪ್ತಿಗೆ ಮಾತ್ರ ಸೀಮಿತವಾಗಿದೆ. ಈ ಜಿಲ್ಲೆಯು ಹುಬ್ಬಳ್ಳಿ. ಕುಂದಗೋಳ, ಕಲಘಟಗಿ, ನವಲಗುಂದ ಮತ್ತು ಧಾರವಾಡ ಹೀಗೆ ಒಟ್ಟು ಐದು ತಾಲೂಕುಗಳನ್ನೊಳಗೊಂಡಿದೆ. ಅಲ್ಲದೇ ಈ ವಿಷಯಕ್ಕೆ ಪೂರಕವಾಗಿ ಕರ್ನಾಟಕದ ಇತರ ಜಿಲ್ಲೆಗಳ ಚಿತ್ರಕಲೆಯನ್ನು ಸಹ ಅಧ್ಯಯನಕ್ಕೆ ಅಲ್ಲಲ್ಲಿ ತೌಲನಿಕವಾಗಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**ಅಧ್ಯಯನದ ವೈಧಾನಿಕತೆ**

ಈ ಅಧ್ಯಯನಕ್ಕೆ ಎರಡು ರೀತಿಯ ಆಕರ ಸಾಮಗ್ರಿಗಳನ್ನು ಬಳಸಿಕೊಳ್ಳಲಾಗಿದೆ.

೧. ಮೂಲ ಆಕರ ಸಾಮಗ್ರಿ

೨. ಆನುಷಂಗಿಕ ಆಕರ ಸಾಮಗ್ರಿ

**೧. ಮೂಲ ಆಕರ ಸಾಮಗ್ರಿ**

ಮೂಲ ಆಕರ ಸಾಮಗ್ರಿಗಳಲ್ಲಿ ಕ್ಷೇತ್ರಕಾರ್ಯ ಅತಿಮುಖ್ಯವಾದ ಅಂಶವಾಗಿದೆ. ಅಧ್ಯಯನದ ಕ್ರಮಕ್ಕೆ ಅಗತ್ಯವಾಗಿರಬೇಕಾಗುವಂತಹ ವಿಧಾನ ಇದಾಗಿದೆ. ಒಂದು ನಾಡಿನ ಸಂಸ್ಕೃತಿ, ಚರಿತ್ರೆ, ಕಲೆ, ವಿಷಯಗಳ ಬಗ್ಗೆ ಸಂಶೋಧನೆ ಮಾಡುವಾಗ ಕ್ಷೇತ್ರಕಾರ್ಯ ಮುಖ್ಯವಾಗಿರುತ್ತದೆ. ಇದರಲ್ಲಿ ಸಂಗ್ರಹಿಸಿದ ಮಾಹಿತಿಗಳನ್ನು ಮೂಲ ಆಕರ ಸಾಮಗ್ರಿಯಾಗಿ ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಕ್ಷೇತ್ರಕಾರ್ಯದಲ್ಲಿ ಅವಲೋಕನ ಅತಿಮುಖ್ಯವಾದ ಅಂಶವಾಗಿದ್ದು, ಮೂಲಭೂತವಾದ ಭಿತ್ತಿಚಿತ್ರಗಳನ್ನು ಸೂಕ್ಷ್ಮವಾಗಿ ಗಮನಿಸಿ, ಛಾಯಚಿತ್ರಣ ಮಾಡಿಕೊಂಡು, ಅದಕ್ಕೆ ಸಂಬಂಧಿಸಿದ ಮಾಹಿತಿಯನ್ನು ಅದೇ ಸ್ಥಳಗಳಲ್ಲಿ ಸಂಗ್ರಹಿಸಿಕೊಂಡು ಅಧ್ಯಯನ ಮಾಡಲಾಗಿದೆ. ಉದಾಹರಣೆಗೆ ಅಮ್ಮಿನಭಾವಿ ಮತ್ತು ನವಲಗುಂದದ ಸ್ಥಳೀಯರಿಂದ ಮಾಹಿತಿಯನ್ನು ಪಡೆಯಲಾಗಿದೆ. ಕೆಲವು ಕಡೆಗಳಲ್ಲಿ ಮೂಲ ಚಿತ್ರಗಳು ಲಭ್ಯವಿಲ್ಲದ ಸಮಯದಲ್ಲಿ ಅವುಗಳನ್ನು ಪ್ರತಿಕೃತಿ ಮಾಡಿಕೊಂಡು ಅಥವಾ ಛಾಯಚಿತ್ರ ಮಾಡಿಕೊಂಡು ಹಿರಿಯ ವಿದ್ವಾಂಸರ ಮತ್ತು ಕಲಾಶಿಕ್ಷಕರ ಜೊತೆಗೆ ವಿಷಯಕ್ಕೆ ಸಂಬಂಧಿಸಿದಂತೆ ಚರ್ಚಿಸಿ. ಮಾಹಿತಿಯನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಹೀಗೆ ಈ ಕ್ಷೇತ್ರಕಾರ್ಯದಿಂದ ದೊರೆತ ಹಲವಾರು ವಿವರಗಳನ್ನು ಅಭ್ಯಾಸಕ್ಕೆ ಮತ್ತು ಬರವಣಿಗೆಗೆ ಅನುಕೂಲವಾಗುವಂತೆ ಪಟ್ಟಿಕೆಗಳಲ್ಲಿ ಸಂಗ್ರಹ ಮಾಡಿಕೊಂಡು ಪ್ರಸ್ತುತ ಪ್ರಬಂಧವನ್ನು ರಚನೆ ಮಾಡಲಾಗಿದೆ.

**೨. ಆನುಷಂಗಿಕ ಆಕರ ಸಾಮಗ್ರಿ**

ಪ್ರಕಟಿತ ಮತ್ತು ಅಪ್ರಕಟಿತ ಸಾಹಿತ್ಯ ಮತ್ತು ಕಲೆಯ ಗ್ರಂಥಗಳು, ಕಲೆಯ ಸಂಪುಟಗಳು, ವಿಶ್ವಕೋಶಗಳು, ಅನುವಾದ ಗ್ರಂಥಗಳು, ಸಂಶೋಧನಾ ಮಹಾಪ್ರಬಂಧಗಳು, ಅಲ್ಲದೆ ದೇಶಿ ವಿದೇಶಿ ಪ್ರವಾಸಿಗರ ಬರಹಗಳು, ಸಂಶೋಧನಾ ಲೇಖನಗಳು ಮುಂತಾದ ಮೂಲದಿಂದ ಮಾಹಿತಿ ಸಂಗ್ರಹಿಸಿಕೊಂಡು ಅಧ್ಯಯನ ಮಾಡಲಾಗಿದೆ. ಹೀಗೆ ಆನುಷಂಗಿಕ ಆಕರ ಸಾಮಗ್ರಿಗಳನ್ನು ವಿವಿಧ ಪಟ್ಟಿಗಳಲ್ಲಿ ಸಂಗ್ರಹ ಮಾಡಿಕೊಂಡು ಪ್ರಸ್ತುತ ಸಂಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

❑❑❑

## ಅಧ್ಯಾಯ - ೨

# ಧಾರವಾಡ ಜಿಲ್ಲೆಯ ಸಾಂಸ್ಕೃತಿಕ ಹಿನ್ನೆಲೆ ಮತ್ತು ಲಲಿತಕಲೆಗಳು

ಉತ್ತರ ಕರ್ನಾಟಕದ ಸಾಂಸ್ಕೃತಿಕ ರಾಜಧಾನಿಯೆಂದೇ ಪ್ರಸಿದ್ಧಿ ಪಡೆದಿರುವ ಧಾರವಾಡ ಜಿಲ್ಲೆ ಪ್ರಾಚೀನ ಕಾಲದಿಂದಲೂ ಶ್ರೀಮಂತ ಸಾಂಸ್ಕೃತಿಕ ನೆಲೆಗಳ ತಾಣವಾಗಿ ವಿದ್ಯೆಯ ತವರೂರಾಗಿದೆ. ಕರ್ನಾಟಕದ ಬಹುತೇಕ ರಾಜವಂಶಗಳು ಇಲ್ಲಿ ಆಡಳಿತ ನಡೆಸಿವೆ. ಉತ್ತರ ಕರ್ನಾಟಕದ ಹೃದಯ ಭಾಗದಂತಿರುವ ಧಾರವಾಡ ಜಿಲ್ಲೆ ಕರ್ನಾಟಕದ ವಾಯುವ್ಯ ಭಾಗದಲ್ಲಿದೆ. "ಪ್ರಸ್ತುತ ಧಾರವಾಡ ಜಿಲ್ಲೆ ಐದು ತಾಲೂಕುಗಳನ್ನು ಒಳಗೊಂಡಿದೆ. ೪೦೭೬.೪ ಚ.ಕಿ.ಮೀ ವಿಸ್ತೀರ್ಣವನ್ನು ಹೊಂದಿದ್ದು ಧಾರವಾಡ ಜಿಲ್ಲೆಯ ಫಲವತ್ತಾದ ಕಪ್ಪು ಮಣ್ಣಿನದು ಮಲೆನಾಡು, ಅರೆ ಮಲೆನಾಡು ಮತ್ತು ಬಯಲು ಪ್ರದೇಶಗಳನ್ನು ಒಳಗೊಂಡಿದೆ. ಧಾರವಾಡದ ಸೋಮೇಶ್ವರದಲ್ಲಿ ಹುಟ್ಟುವ ಶಾಲ್ಮಲಾ ನದಿಯು, ಧಾರವಾಡ ತಾಲ್ಲೂಕಿನಲ್ಲಿ ಹುಟ್ಟುವ ಬೇಡ್ತಿ ನದಿಯನ್ನು ನೆರೆಯ ಉತ್ತರ ಕನ್ನಡ ಜಿಲ್ಲೆಯಲ್ಲಿ ಗಂಗಾವಳಿ ನದಿ ಎಂದು ಕರೆಯುತ್ತಾರೆ. ಈ ಬೇಡ್ತಿ ನದಿಗೆ ದುಮ್ಮವಾಡದ ಬಳಿ ಕಲಘಟಗಿ ತಾಲ್ಲೂಕ ಒಡ್ಡು ಹಾಕಿ ನೀರಸಾಗರ ಎಂಬ ಜಲಾಶಯವನ್ನು ನಿರ್ಮಿಸಿದ್ದಾರೆ. ಇದರ ನೀರನ್ನು ಹುಬ್ಬಳ್ಳಿ ಧಾರವಾಡ ನಗರಗಳಿಗೆ ಒದಗಿಸಲಾಗುವುದು. ಜಿಲ್ಲೆಯಲ್ಲಿ ಅರಣ್ಯ ಸಂಪತ್ತು ವಿಪುಲವಾಗಿದೆ. ತೇಗ, ಬೀಟೆ, ಹೊನ್ನೆ, ನಂದಿ ಮತ್ತಿತರ ಬೆಲೆಬಾಳುವ ಮರಗಳು ಬೆಳೆದಿವೆ. ಅಳಲೆಕಾಯಿ, ಜೇನುತುಪ್ಪ, ಮೇಣ, ಸೀಗೆಕಾಯಿ, ಅಂಟುವಾಳ, ಧೂಪ ಇತರ ಅರಣ್ಯ ಉತ್ಪನ್ನಗಳಾಗಿವೆ. ಜೊತೆಗೆ ಅನೇಕ ಔಷಧಿ ಗಿಡಮೂಲಿಕೆಗಳು ದೊರೆಯುತ್ತವೆ."[೧]

ಧಾರವಾಡ ಜಿಲ್ಲೆಯನ್ನು ವಿದ್ಯಾಕಾಶಿ ಎಂದು ಕರೆಯುತ್ತಾರೆ. ಆದಿಕವಿಪಂಪ, ಕುಮಾರವ್ಯಾಸರಂತಹ ಆದಿಕವಿಗಳಿಂದ ಇಂದಿನ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಕರ್ನಾಟಕದ ಪ್ರಥಮದಲ್ಲಿ ವಿ.ಕೃ.ಗೋಕಾಕ, ದ.ರಾ.ಬೇಂದ್ರೆ, ಗಿರೀಶ ಕಾರ್ನಾಡ್, ನಾಡೋಜ ಚೆನ್ನವೀರ

೦೧. ಡಾ. ಸಿ. ಮಹಾದೇವ : ಕರ್ನಾಟಕ ದೇವಾಲಯ ಕೋಶ ಧಾರವಾಡ ಜಿಲ್ಲೆ, ಪುಟ - ೧೪

ಕಣವಿಯಂತಹ ಕವಿಗಳು ಒಂದೆಡೆಯಾದರೆ, ಸಂಗೀತ ದಿಗ್ಗಜರಲ್ಲಿ ಮಲ್ಲಿಕಾರ್ಜುನ ಮನಸೂರ, ಬಸವರಾಜ ರಾಜಗುರು, ಭೀಮಸೇನ ಜೋಶಿ, ಗಂಗೂಬಾಯಿ ಹಾನಗಲ್, ಕೃಷ್ಣಾಹಾನಗಲ್, ಪುಟ್ಟರಾಜ ಗವಾಯಿಗಳು, ಸವಾಯಿ ಗಂಧರ್ವರು, ತಮ್ಮ ಸಂಗೀತದ ಮೂಲಕ ವಿಶೇಷ ಕೊಡುಗೆಯನ್ನು ನೀಡುತ್ತಿದ್ದಾರೆ. ಕನ್ನಡ ಭಾಷಾ ಶಿಕ್ಷಣದ ರೂವಾರಿ ಡೆಪ್ಯೂಟಿ ಚೆನ್ನಬಸಪ್ಪ ನಡೆದಾಡುವ ವಿಶ್ವಕೋಶ ಖ್ಯಾತಿಯ ಡಾ.ಪಾಟೀಲ ಪುಟ್ಟಪ್ಪನಂಥ ಸಾಹಿತ್ಯಗಳನ್ನು ಸ್ಮರಿಸದೆ ಇರಲಾಗದು. ಉನ್ನತ ಮಟ್ಟದ ಸಾಧನೆಯಲ್ಲಿ ತೊಡಗಿದ ಶಿಕ್ಷಕರು, ಪ್ರಾಧ್ಯಾಪಕರು, ಸಮಾಜ ಸುಧಾರಕರು, ಸಂಶೋಧಕರು ಈ ಜಿಲ್ಲೆಯಲ್ಲಿದ್ದಾರೆ.

ಕರ್ನಾಟಕ ರಾಜ್ಯದ ಎರಡನೆಯ ದೊಡ್ಡನಗರ, ಮಹಾನಗರ ಛೋಟಾಮುಂಬೈ ಖ್ಯಾತಿಯ ಹುಬ್ಬಳ್ಳಿ ರಾಜ್ಯದ ಪ್ರಮುಖ ವಾಣಿಜ್ಯ ಕೇಂದ್ರದಲ್ಲೊಂದಾಗಿದೆ. ಧಾರವಾಡ ಕರ್ನಾಟಕದ ವಿದ್ಯಾಕಾಶಿ, ಕವಿ, ಸಾಹಿತಿ, ಕಲಾವಿದರ ನೆಲೆಬೀಡು ಇದಾಗಿದೆ. ರಾಜ್ಯದ ಮಾದರಿ ವಿಶ್ವವಿದ್ಯಾಲಯಗಳಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, ಕೃಷಿ ವಿಶ್ವವಿದ್ಯಾಲಯ, ಕರ್ನಾಟಕ ವಿದ್ಯಾವರ್ಧಕ ಸಂಘ, ಕರ್ನಾಟಕ ಕಾಲೇಜು, ಗಂಡುಮಕ್ಕಳ ಸರಕಾರಿ ಟ್ರೈನಿಂಗ್ ಕಾಲೇಜು, ಸಂಗೀತ ಗುರುಕುಲ ಶಾಲೆ, ಹೈಕೋರ್ಟ್ ಪೀಠ ಪ್ರಮುಖವಾಗಿವೆ. ಅಲ್ಲದೇ ಅನೇಕ ಇಲಾಖೆಯ ವಿಭಾಗೀಯ ಕಛೇರಿಗಳು, ಕರ್ನಾಟಕ ವೈದ್ಯಕೀಯ ಮಹಾವಿದ್ಯಾಲಯ, ಕ್ಯಾನ್ಸರ್ ಆಸ್ಪತ್ರೆಗಳಂತಹ ಅನೇಕ ಕ್ಷೇತ್ರದಲ್ಲಿ ಹೆಸರು ಪಡೆದ ಸಂಘ ಸಂಸ್ಥೆಗಳು ಇಲ್ಲಿ ಅಮೋಘ ಕೊಡುಗೆ ನೀಡಿವೆ.

ಧಾರವಾಡ ಅನೇಕ ಜನಪದ ಕಲಾ ತಂಡಗಳು ತಮ್ಮ ಕಲೆಯನ್ನು ಪ್ರದರ್ಶಿಸಲು ಅನುವು ಮಾಡಿಕೊಡುವ ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳು ಇಲ್ಲಿ ಜರಗುತ್ತವೆ. ಅವುಗಳಲ್ಲಿ ಮುಖ್ಯವಾಗಿ ಪ್ರದರ್ಶಕ ಕಲೆಗಳು ಮತ್ತು ಲಲಿತಕಲೆಗಳಿಗೆ ಮತ್ತು ಕಲಾವಿದರಿಗೆ ಉತ್ತೇಜನ ನೀಡಲು "ಧಾರವಾಡ ಉತ್ಸವ" ದಂತಹ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತದೆ.

ಕೇವಲ ಬೌದ್ಧಿಕ ಮತ್ತು ಮಾನಸಿಕವಾಗಿ ನೆಮ್ಮದಿ ತರುವ ವಿಚಾರಗಳ ನಡುವೆ ತಟ್ಟನೆ ನೆನಪಾಗುವುದು ಧಾರವಾಡ ವಿಶಿಷ್ಟವಾದ ಅಡುಗೆ ಮತ್ತು ತಿಂಡಿತಿನಿಸುಗಳು ಧಾರವಾಡ ಪೇಡಾ, ಮಂಡಿಗೆ, ಮಿರ್ಚಿ, ಕಟಕ್ ರೊಟ್ಟಿ, ಕೆನೆ ಮೊಸರು ನವಲೂರ ಪೇರಲ ಈ ಖ್ಯಾದಗಳ ರುಚಿಯನ್ನು ಸವಿದವರಿಗೆ ಗೊತ್ತು ಧಾರವಾಡದ ತಿಂಡಿ ತಿನಿಸುಗಳ ರುಚಿ.

**೧. ಸಾಂಸ್ಕೃತಿಕ ಪರಿಸರ**

ಧಾರವಾಡ ಜಿಲ್ಲೆಯ ಸಾಂಸ್ಕೃತಿಕ ಪರಿಸರದಲ್ಲಿ ಜನಪದ ಆಚರಣೆಗಳು ಇನ್ನೂ ಸಾಕಷ್ಟು ಜೀವಂತವಾಗಿವೆ. ನಂಬಿಕೆಗಳೂ ಆಚರಣೆಗಳಿಗೂ ವಿಶೇಷವಾದ ನಂಟು. ಪ್ರತಿಯೊಂದು ಹುಣ್ಣಿಮೆ, ಅಮಾವಾಸ್ಯೆಗಳು ಇಲ್ಲಿ ವಿಶೇಷವಾಗಿ ಆಚರಿಸಲ್ಪಡುತ್ತವೆ. ಜೊತೆಗೆ ಹೊಸ ವರ್ಷದ ಮೊದಲ

ದಿನವಾದ ಯುಗಾದಿ ಹಬ್ಬದಂದು ಮನೆಗೆಲ್ಲ ಸಾರಣಿ ಕಾರಣೆಗಳನ್ನು ಮಾಡಿ ತೋರಣ ಕಟ್ಟುವರು. ಧಾರವಾಡ ಜಿಲ್ಲೆ ಕೃಷಿ ಪ್ರಧಾನವಾದ ಪ್ರದೇಶವಾದ್ದರಿಂದ ಬಸವನಿಗೆ ಇಲ್ಲಿ ವಿಶೇಷ ಪ್ರಾಧಾನ್ಯವಿದೆ. ರೈತರಿಗೆ ಎತ್ತೇ ಸರ್ವಸ್ವ ಕಾರಹುಣ್ಣಿಮೆ ಸಂದರ್ಭದಲ್ಲಿಯೂ ಅವರು ದನಕರುಗಳನ್ನು ಸಿಂಗರಿಸಿ, ಮೆರವಣಿಗೆ ಮಾಡಿ, ಹೆಮ್ಮೆಯಿಂದ ಆನಂದಿಸುವರು. ಕಾರಹುಣ್ಣಿಮೆಯಂದು ಕರಿಹರಿಯುವ ಆಚರಣೆ ಈ ಜಿಲ್ಲೆಯಲ್ಲಿ ಅಸ್ತಿತ್ವದಲ್ಲಿದೆ. ಜ್ಯೇಷವಿದ ಅಮವಾಸ್ಯೆ ಮಣ್ಣೆತ್ತಿನ ಅಮವಾಸ್ಯೆ. ಈ ಸಂದರ್ಭದಲ್ಲಿಯೂ ಕೂಡ ರೈತ ಮಣ್ಣಿನಿಂದ ಎತ್ತುಗಳನ್ನು ಮಾಡಿ ಪೂಜಿಸುತ್ತಾನೆ.[೨] ಆಷಾಡ ಮಾಸದಲ್ಲಿಯೇ ಪ್ರತಿ ಮಂಗಳವಾರ ಹೆಣ್ಣುಮಕ್ಕಳು ಫಲವಂತಿಕೆ ಹಾಗೂ ಸಮೃದ್ಧಿಯ ಕೋರಿಕೆಯಾಗಿ ಗುಳ್ಳವ್ವನ ಆಚರಣೆ ಮಾಡುತ್ತಾರೆ. ಗುಳ್ಳವ್ವನ ಆಚರಣೆ ಈ ಜಿಲ್ಲೆಗೆ, ಅದರಂತೆ ಉತ್ತರ ಕರ್ನಾಟಕಕ್ಕೆ ವಿಶಿಷ್ಟವಾದುದು.

ಶ್ರಾವಣ ಸೋಮವಾರ ಧಾರವಾಡ ಜಿಲ್ಲೆಯಲ್ಲಿ ಮಹತ್ವದ ಆಚರಣೆಗಳು ನಡೆಯುತ್ತವೆ. ಧಾರವಾಡದ ಉಳವಿಬಸಪ್ಪನ ಗುಡಿಯಲ್ಲಿ ಕರಡಿಮಜಲು ಮುಳ್ಳೆಜ್ಜೆ ಕುಣಿತ ಮುಂತಾದ ಜನಪದ ಕಲಾಪ್ರದರ್ಶನಗಳು ಇರುತ್ತವೆ.[೩] ಭಾದ್ರಪದ ಶುದ್ಧ ತದಿಗೆ ಚೌತಿಯಂದು ಗೌರಿ ಗಣೇಶನ ಹಬ್ಬ ಆಚರಿಸುವರು. ಚೌತಿಯಂದು ಮಣ್ಣಿನಿಂದ ಮಾಡಿದ ಗಣಪತಿಗೆ ಪೂಜೆ ಸಲ್ಲುವುದು. ಲೋಕಮಾನ್ಯ ತಿಲಕರ ಪ್ರಭಾವದಿಂದ ಮಹಾರಾಷ್ಟ್ರದಲ್ಲಿ ಗಣೇಶನ ಹಬ್ಬ ಸಾರ್ವಜನಿಕ ಹಬ್ಬವಾದಂತೆ ಧಾರವಾಡ ಜಿಲ್ಲೆಯಲ್ಲಿಯೂ ಅದು ಸಾರ್ವಜನಿಕ ಉತ್ಸವವೇ ಆಗಿದೆ.[೪]

ಧಾರವಾಡ ಜಿಲ್ಲೆಯಲ್ಲಿ ನಾಡಹಬ್ಬವು ಸಂಭ್ರಮದಿಂದ ಆಚರಿಸಲ್ಪಡುತ್ತದೆ. ಹತ್ತು ದಿನಗಳ ಈ ಹಬ್ಬದಲ್ಲಿ ಕೊನೆಯ ದಿನ ವಿಜಯ ದಶಮಿ. ಆ ದಿನ ಸಂಜೆ ಸ್ಥಾನಿಕ ದೇವರ ಪಲ್ಲಕ್ಕಿ ಮೆರವಣಿಗೆ ಹೊರಟು, ಶಮೀಮರದ ಹತ್ತಿರ ಬರುತ್ತದೆ. ಅಲ್ಲಿ ದೇವರಿಗೆ ಶಮೀಪತ್ರ ಅರ್ಪಿಸಿ ಜನರು ಪರಸ್ಪರ ಬನ್ನಿ ಮುಡಿದು ಅಭಿನಂದಿಸುವರು. ಶುಕ್ರವಾರ ಪೇಟೆಯ ಲಕ್ಷ್ಮೀನಾರಾಯಣ ಗುಡಿಯಲ್ಲಿ ನವರಾತ್ರಿ ಉತ್ಸವದಲ್ಲಿ ದೇವರಿಗೆ ದಿನಕ್ಕೊಂದು ರೀತಿ ಅಲಂಕಾರ ಮಾಡುವರು. ಸೀಗಿ ಹುಣ್ಣಿಮೆಯಲ್ಲಿ ಹೊಲದಲ್ಲಿ ಐದು ಕಲ್ಲುಗಳನ್ನು ನೆಟ್ಟು ಪಾಂಡವರ ಹೆಸರಿನಲ್ಲಿ ಪೂಜಿಸಿ ನೈವೇದ್ಯ ಸಲ್ಲಿಸುವರು. "ಹೋಳಿಹುಣ್ಣಿಮೆಯೂ ಈ ಜಿಲ್ಲೆಯಲ್ಲಿ ವೈಶಿಷ್ಟ್ಯಪೂರ್ಣವೇ. ಹುಬ್ಬಳ್ಳಿ ಧಾರವಾಡಗಳಲ್ಲಿ ಸಾರ್ವಜನಿಕ ಸ್ಥಳಗಳಲ್ಲಿ ರತಿಕಾಮರನ್ನು ಕೂರಿಸಿ, ಹಬ್ಬ ಆಚರಿಸುವರು, ಬಣ್ಣದ ಓಕುಳಿ ಆಡುವರು ಸಂಜೆ ಮೆರವಣಿಗೆಯಲ್ಲಿ ಕಾಮನನ್ನು ಒಯ್ದು ದಹಿಸುವರು. ಹೋಳಿಯನ್ನು ಹದಿನೈದು ಇಪ್ಪತ್ತು ದಿನಗಳವರೆಗೆ ಆಡುತ್ತಿದ್ದುದು ಉಂಟು. ಹುಬ್ಬಳ್ಳಿಯಲ್ಲಿ

---

೦೨. ಡಾ.ಆರ್.ಗೋಪಾಲ್ (ಸಂ) : ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪುಟ – ೨೧೪

೦೩. ಅದೇ., ಪುಟ – ೨೧೪

೦೪. ಅದೇ, ಪುಟ – ೨೧೫

ರಂಗಪಂಚಮಿಯವರೆಗೆ ಆಡುವರು."[೫] ಹೀಗೆ ಧಾರವಾಡ ಜಿಲ್ಲೆಯ ಹಬ್ಬ ಹುಣ್ಣಿಮೆಗಳಿಗೆ ಸಂಬಂಧಪಟ್ಟ ಆಚರಣೆಗಳು ವೈಶಿಷ್ಟ್ಯಪೂರ್ಣವಾಗಿದ್ದು, ಕೃಷಿಗೆ ಸಂಬಂಧಿಸಿದಂತೆ ಫಲಸಮೃದ್ಧಿಯ ಕಾರಣಕ್ಕಾಗಿ ಕೌಟುಂಬಿಕ ಹಾಗೂ ಸಮಾಜಕ್ಕೆ ಸಂಬಂಧಿಸಿದಂತೆ ಸಾಮರಸ್ಯ ಕಾರಣವಾಗಿ ಅವು ಆಚರಣೆಗೊಳ್ಳುತ್ತಿರುವುದನ್ನು ಗುರುತಿಸಬಹುದಾಗಿದೆ. ಇವುಗಳೊಂದಿಗೆ ಅನೇಕ ಮಠಗಳು ಬಸದಿಗಳು, ಮಸೀದಿಗಳು, ಚರ್ಚುಗಳು ಈ ಜಿಲ್ಲೆಯಲ್ಲಿದ್ದು ಅವು ಕೂಡ ಜನರ ನಂಬಿಕೆಯ ಪೂಜೆಯ ತಾಣವಾಗಿವೆ.

### ೨. ಮಠಗಳಲ್ಲಿಯ ಚಿತ್ರಗಳು

ಕರ್ನಾಟಕ ವೀರಶೈವ ಮಠಗಳಿಗೆ ಒಂದು ಚರಿತ್ರೆಯಿದೆ. ಒಂದು ಪರಂಪರೆಯಿದೆ. ಸಮಾಜಕೇಂದ್ರಿತವಾಗಿಯೇ ದುಡಿದ ವೀರಶೈವ ಮಠಗಳು ಶಿಕ್ಷಣ, ದಾಸೋಹ ಮತ್ತು ಸಾಂಸ್ಕೃತಿಕ ಕೇಂದ್ರಗಳಾಗಿ ದುಡಿಯುವುದರ ಮೂಲಕ ಐತಿಹಾಸಿಕ ಗೌರವಕ್ಕೆ ಪಾತ್ರವಾಗಿವೆ. ಧಾರವಾಡ ಜಿಲ್ಲೆಯಲ್ಲಿ ಬರುವ ಮಠಗಳು ಶಿಕ್ಷಣ ದಾಸೋಹ ಜೊತೆಗೆ ಧರ್ಮಪ್ರಸಾರಕ್ಕಾಗಿ ಚಿತ್ರಕಲೆಯನ್ನು ಬಳಸಿಕೊಂಡಿರುವುದು ವಿಶೇಷವಾಗಿದೆ.[೬] ಧಾರವಾಡದ ಮುರುಘಾಮಠ, ಅಮ್ಮಿನಭಾವಿಯ ಪಂಚಗೃಹ ಹೀರೆಮಠ, ಹುಬ್ಬಳ್ಳಿಯ ಸಿದ್ಧಾರೂಡ ಮಠ, ಮೂರುಸಾವಿರ ಮಠ, ವೈಷ್ಣವ ಹಾಗೂ ಜನ್ನೆ ಮುಂತಾದ ಮಠಗಳಲ್ಲಿ ಚಿತ್ರಕಲೆ ವಿಶೇಷವಾದ ಸ್ಥಾನಮಾನ ಕೊಟ್ಟಿರುವುದು ಕಂಡುಬರುತ್ತದೆ.

ಧಾರವಾಡದ ಮುರುಘಾಮಠ ಕ್ರಿ.ಶ.೧೭೫೩ರಲ್ಲಿ ಬಾಳಾಜಿರಾವ್ ಪೇಶ್ವೆ ಅವರು ಮೊಗಲರಿಂದ ಧಾರವಾಡವನ್ನು ವಶಪಡಿಸಿಕೊಂಡು ಹೊಸದೊಂದು ಪೇಟೆ ಕಟ್ಟಿಸಿದರು ಅದೇ ಹಾವೇರಿ ಪೇಟೆ ಇದರ ಜೊತೆಯಲ್ಲಿ ವೀರಶೈವರು ಕೂಡಿಕೊಂಡು ಮುರುಘಾಸೇವೆ ಒಳಪಡುವ ಒಂದು ಮಠವನ್ನು ಕಟ್ಟಿಸಿದರು. ಅದೇ ಶ್ರೀಮುರುಘಾಮಠ, ಈ ಮಠಕ್ಕೆ ಚಿತ್ರಕಲೆಯ ಸಂಗ್ರಹಾಲಯ ಕೂಡ ಎನ್ನಬಹುದು. ಈ ಮಠದಲ್ಲಿ ೬೩ ವರ್ಣ ಚಿತ್ರಗಳಿವೆ. ಹಿರಿಯ ಕಲಾವಿದರಾದ ಶ್ರೀ. ಎಂ. ಎ. ಚೆಟ್ಟಿ, ಶ್ರೀ. ಎಚ್. ಆರ್. ಗಲಗಲಿ, ಶ್ರೀ.ವ್ಹಿ. ಬಿ. ಹೂಲಿ, ಶ್ರೀ ಎಂ. ವ್ಹಿ. ಬಾಣಕರ, ಶ್ರೀ. ಎಸ್. ಬಿ. ಸುಂಕದ, ಶ್ರೀ. ವೀರಣ್ಣಾರಾಮಾಪೂರ ಮಠ ಇವರುಗಳ ರಚಿಸಿದ ಅಪರೂಪ ಚಿತ್ರಗಳಿವೆ. ಈ ಚಿತ್ರಗಳ ವಿಷಯ ಶ್ರೀ ಮುರಘೇಂದ್ರ ಶಿವಯೋಗಿಗಳು ಮಾಡಿದ ಲೀಲೆಯ ಘಟನೆಗಳು ಮತ್ತು ವ್ಯಕ್ತಿ ಚಿತ್ರಗಳಲ್ಲಿ ಮಠಾಧೀಶರು ಸ್ವಾಮಿಗಳು, ಶರಣರು, ವಚನಕಾರರನ್ನು ವಸ್ತುವನ್ನಾಗಿಟ್ಟುಕೊಂಡು ರಚಿಸಿದ ಕಲಾಕೃತಿಗಳಾಗಿವೆ.

"ಕರ್ನಾಟಕ ಸರ್ಕಾರದ ಧಾರವಾಡ ಗೆಜೆಟಿಯರ್‌ನಲ್ಲಿ ಉಲ್ಲೇಖವಾಗಿರುವಂತೆ ಹುಬ್ಬಳ್ಳಿಯ

---

೦೫. ಡಾ.ಆರ್.ಗೋಪಾಲ್ (ಸಂ) : ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪುಟ - ೨೧೭

೦೬. ಅದೇ, ಪುಟ-೩೬೦

ಮೂರು ಸಾವಿರ ಮಠ ೧೭೨೭ರಲ್ಲಿ ಸ್ಥಾಪಿತವಾಗಿದೆ. ಆಗ ಇದನ್ನು ಹಿರೇಮಠ ಅಥವಾ ಬೃಹನ್ಮಠವೆಂದು ಕರೆಯಲಾಗುತ್ತಿತ್ತು.[೭] ಪ್ರಸ್ತುತ ಮಠದ ವತಿಯಿಂದ ಹುಬ್ಬಳ್ಳಿಯ ಖ್ಯಾತ ಕಲಾವಿದ ಡಾ.ಎಂ.ವಿ.ಮಿಣಜಗಿಯವರ ಕಲಾಶಾಲೆಯನ್ನು ತಮ್ಮ ಸಂಸ್ಥೆಯ ಅಡಿಯಲ್ಲಿ ನಡೆಯಿಸಿ ಕೊಂಡು ಒಳ್ಳೆಯ ಕಲಾಶಿಕ್ಷಣವನ್ನು ಕೊಡುತ್ತಿದ್ದಾರೆ.

ಕ್ರಿ.ಶ. ೧೮೩೭ ಬೀದರ ಜಿಲ್ಲೆ ಬಾಲ್ಕಿಯಲ್ಲಿ ಜನಿಸಿದ. ಸಿದ್ಧಾರೂಡರು ೧೯೨೫ರಲ್ಲಿ ಮಠವನ್ನು ಸ್ಥಾಪನೆ ಮಾಡಿದರು. ಅಲ್ಲಿ ಕೈಲಾಸ ಮಂಟಪವನ್ನು ಕಟ್ಟಿಸಿ ಪ್ರತಿ ದಿನ ಪ್ರವಚನ ಹೇಳುತ್ತಿದ್ದರು. ಸಿದ್ಧಾರೂಡರು ಕೌದಿಯನ್ನು ಬಳಸುತ್ತಿದ್ದನ್ನು ಗಮನಿಸಿ ಭಕ್ತರು ಇವರಿಗೆ ಕೌದಿಯನ್ನು ಕಾಣಿಕೆಯಾಗಿ ತಂದು ಕೊಡುತ್ತಿದ್ದರು, ಇಂದು ಈ ಮಠದಲ್ಲಿ ನೂರಾರು ಕೌದಿಗಳು ಸಂಗ್ರಹಗೊಂಡಿವೆ. ಪ್ರತಿವರ್ಷವು ಶಿವರಾತ್ರಿಯ ಜಾತ್ರೆ ಸಮಯದಲ್ಲಿ ಒಂದು ದಿನ ವಿಶೇಷ ಕೌದಿ ಪೂಜೆಯನ್ನು ನಡೆಯಿಸಿಕೊಂಡು ಬರುತ್ತಿದ್ದಾರೆ. ಈ ಮಠದಲ್ಲಿ ನಡೆಯುವ ಕಾರ್ಯಕ್ರಮಗಳಲ್ಲಿ ರಂಗೋಲಿಯಿಂದ ಮಠವನ್ನೆಲ್ಲ ಅಲಂಕರಿಸುತ್ತಾರೆ. ಸಿದ್ಧಾರೂಢರ ಭಾವಚಿತ್ರಗಳನ್ನು ಸಹ ರಂಗೋಲಿಯಲ್ಲಿ ಬಿಡಿಸುತ್ತಾರೆ. ಕೈಲಾಸ ಮಂಟಪದಲ್ಲಿ ಕೆಲವು ಚಿತ್ರಗಳಿವೆ. ಹೀಗೆ ಈ ವಿವಿಧ ಧರ್ಮದ ಮಠಗಳು ಧಾರ್ಮಿಕ ಕಾರ್ಯದ ಜೊತೆ ಚಿತ್ರಕಲೆಯನ್ನು ಬೆಳೆಸಿಕೊಂಡು ಬರುವ ಕಾರ್ಯವನ್ನು ಮಾಡುತ್ತಲಿವೆ.

**೩. ಚಿತ್ರಕಲಾ ಸಂಪತ್ತು**

ಕರ್ನಾಟಕದ ಚಿತ್ರಕಲಾಕ್ಷೇತ್ರಕ್ಕೆ ಧಾರವಾಡ ಜಿಲ್ಲೆಯ ಕೊಡುಗೆ ಅತ್ಯಮ್ಯೂಲವಾಗಿದೆ. ೧೯೬೬ರಲ್ಲಿ ದಂಡಾವತಿಮಠ ಅವರು ಧಾರವಾಡದಲ್ಲಿ ಮಂದಬುದ್ಧಿಯ ಮಕ್ಕಳಿಗಾಗಿ ಕಲಾಶಿಕ್ಷಣ ಶಾಲೆಯೊಂದನ್ನು ತೆರೆದಿದ್ದರು. ಹುಬ್ಬಳ್ಳಿಯ ಫೈನ್ ಆರ್ಟ್ ಸೊಸೈಟಿ ಮತ್ತು ರೈನ್ ಬೋ ಕಲಾವೃಂದದ ವತಿಯಿಂದಲೂ ಕಲಾ ಶಾಲೆಗಳ ನಡೆಯುತ್ತಿದ್ದವು. ಶ್ರೀ. ಡಿ.ಜಿ.ಬಡಿಗೇರ ಅವರು ೧೯೩೩ರಲ್ಲಿಯೇ ಕರ್ನಾಟಕ ಆರ್ಟ್ ಸೊಸೈಟಿಯನ್ನು ಆರಂಭಿಸಿದ್ದು ೧೯೪೦ರ ವೇಳೆಗೆ ಬೆಳಗಾವಿ, ಕಲ್ಕತ್ತ, ದೆಹಲಿ ಹಾಗೂ ಮುಂಬಯಿಗಳಲ್ಲಿ ಮೂರು ಪ್ರದರ್ಶನಗಳನ್ನು ನೀಡಿದ್ದರು. ಸಾಹಿತಿಗಳಿಂದ ಕಲೆಯ ಬಗ್ಗೆ ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದರು. ಡಿ.ವಿ.ಹಾಲಭಾವಿ ಅವರು ಪೋಸ್ಟ್ ಡಿಪ್ಲೊಮಾ ಆರ್ಟ್‌ಕ್ಲಬ್ ಆರಂಭಿಸಿದ್ದರು. ಹುಬ್ಬಳ್ಳಿಯಲ್ಲಿ ಶ್ರೀ ಎಂ.ಬಿ.ಪಾಟೀಲ್, ಶ್ರೀ ಕೃಷ್ಣಕ್ಷತ್ರಿ ಮತ್ತು ಶ್ರೀ ಕೆ. ಆರ್. ಸುಬ್ಬಣ್ಣ ಅವರುಗಳು ಸೇರಿ ತ್ರಿವಳಿಗಳು ಎಂಬ ಹೆಸರಿನ ಸಂಘಟನೆಯಿಂದ ಹಲವಾರು ರಸ್ತೆ ಬದಿಯ ಕಲಾಪ್ರದರ್ಶನಗಳನ್ನು ಮಾಡಿದರು. ಧಾರವಾಡದಲ್ಲಿ ೧೯೮೨ರಲ್ಲಿ ರಸ್ತೆ ಬದಿಯ ಕಲಾಪ್ರದರ್ಶನಗಳನ್ನು ಮಾಡಿದರು. ಧಾರವಾಡದಲ್ಲಿ ೧೯೮೨ರಲ್ಲಿ ಶ್ರೀ ಎಂ.ಆರ್.ಬಾಳೀಕಾಯಿ, ಶ್ರೀ ಭರತ್‌ಕುಮಾರ, ಶ್ರೀಮತಿ ರೇಣುಕಾಮಾರ್ಕಂಡೆ ಮುಂತಾದವರ ರೈನ್‌ಬೋ ಕಲಾತಂಡ,

೦೭. ಡಾ.ಆರ್.ಗೋಪಾಲ್ (ಸಂ) : ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪುಟ – ೧೧೩

ಹುಬ್ಬಳ್ಳಿಯಲ್ಲಿ ೧೯೮೭ರಲ್ಲಿ ಶ್ರೀ ಎಂ.ಸಿ.ಚೆಟ್ಟಿ, ಶ್ರೀ ಎಂ.ಜೆ.ಬಂಗ್ಲೆವಾಲೆ, ಶ್ರೀಮತಿ ಗಾಯಿತ್ರಿಗೌಡರ್ ಅವರುಗಳ ಜಾಗೃತಿ ಕಲಾವಿದರ ಕಲಾತಂಡ ಹಾಗೂ ಅಲ್ಲಿಯೇ ೧೯೮೮ರಲ್ಲಿ ಶ್ರೀ ಕುಂದಣಗಾರ್, ಶ್ರೀ ಎನ್.ಸಿ.ದೇಸಾಯಿ, ಶ್ರೀಚಿಕ್ಕಣ್ಣವರ ಅವರುಗಳ ಸೃಜನಶೀಲರ ಕಲಾತಂಡ ಇತ್ಯಾದಿ ಹಲವಾರು ಕಲಾತಂಡಗಳು ಕಲೆಯ ಕುರಿತು ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು.

ಧಾರವಾಡದಲ್ಲಿ ೧೯೯೭ರಲ್ಲಿ ಆರಂಭವಾದ ಧಾರವಾಡ ನಗರ ಚಿತ್ರಕಲಾವಿದರ ತಂಡದಲ್ಲಿ ಶ್ರೀ ಸುರೇಶ ಹಾಲಭಾವಿ, ಡಾ.ಎಸ್.ಸಿ.ಪಾಟೀಲ ಮುಂತಾದವರಿದ್ದು ಪ್ರತಿ ವರ್ಷ ವರ್ಣಮೇಳ ಆಚರಿಸುತ್ತಿದ್ದು, ಕಲಾಶಿಕ್ಷಕರ ಉಪನ್ಯಾಸ ಇತ್ಯಾದಿಗಳನ್ನು ಏರ್ಪಡಿಸುತ್ತಿದೆ. ಇವಲ್ಲದೆ ಆರ್ಟ್‌ಶೀಲ್ಡ್, ರಾಷ್ಟ್ರೀಯ ದೃಶ್ಯಕಲಾ ಅಕಾಡೆಮಿ, ಕಲಾರಶ್ಮಿ ಕಲಾಸಂಸ್ಥೆ, ಕರ್ನಾಟಕ ಚಿತ್ರಕಲಾವಿದರ ಸಂಘ, ರೇನ್‌ಬೋ ಕಲಾಸಂಸ್ಥೆ, ರಾಜ್ಯ ಚಿತ್ರಕಲಾ ಶಿಕ್ಷಕರ ಹಾಗೂ ಚಿತ್ರಗಾರರ ಸಂಘ, ಕರ್ನಾಟಕ ಚಿತ್ರಕಲಾ ಶಾಲೆಗಳ ಸಿಬ್ಬಂದಿಗಳ ಸಂಘ, ಚಿತ್ರಕಲಾವಿದರ ಕಲಾಬಳಗ, ಬ್ಲೂಗ್ರೂಪ್ ಕಲಾವಿದರು. ಕಲಾಮಂಡಲ, ರಂಗತರಂಗ[೮] ಇತ್ಯಾದಿ ಸಂಘಟನೆಗಳು ಕಾರ್ಯನಿರ್ವಹಿಸುತ್ತಿವೆ. ಕೆಲವು ನಿಂತು ಹೋಗಿವೆ.

೧೯೭೬ರಲ್ಲಿ ಕಲಾವೃಂದವನ್ನು ವರಕವಿ ಡಾ.ದ.ರಾ.ಬೇಂದ್ರಯವರು ಉದ್ಘಾಟಿಸಿದರು. ಶ್ರೀ.ಸುರೇಶ ವೆಂ.ಕುಲಕರ್ಣಿಯವರು ಇದನ್ನು ಪ್ರಾರಂಭಿಸಿದರು. ೧೯೭೯ರವರೆಗೆ ಪ್ರತಿವರ್ಷ ೧೫೦೦ ಚಿತ್ರಗಳನ್ನು ಶಾಲಾಮಕ್ಕಳ ಮತ್ತು ಚಿತ್ರಕಲಾವಿದರ ಪ್ರದರ್ಶನಗಳನ್ನು ೧೧ ಬಾರಿ ಪ್ರದರ್ಶಿಸಿದರು. ಕಲೆಯ ಬಗ್ಗೆ ಉಪನ್ಯಾಸಗಳನ್ನು ಏರ್ಪಡಿಸಿದ್ದರು.

೯೦ರ ದಶಕದ ಧಾರವಾಡದಲ್ಲಿ ಕಲಾಮಂಡಲ ಕಲಾ ಚಟುವಟಿಕೆಯನ್ನು ಆರಂಭಿಸಿತು. ಶ್ರೀ ಆರ್ಯ ಆಚಾರ್ಯರು ಇದರ ಅಧ್ಯಕ್ಷರಾಗಿದ್ದಾರೆ. ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಕಲಾಪ್ರವೃತ್ತಿ ಸಂವೇದನೆಗಳನ್ನು ಹಮ್ಮಿಕೊಳ್ಳುವುದು ಮತ್ತು ಜನತೆಗೆ ಪರಿಚಯಿಸುವುದು ಇದರ ಉದ್ದೇಶವಾಗಿದೆ. ಜತೆಗೆ ಸಾಮಾಜಿಕ ಅವಶ್ಯಕತೆಗಳಿಗೂ ಪ್ರತಿಸ್ಪಂದಿಸಲು ಕಲಾಮಂಡಲ ಯತ್ನಿಸುತ್ತಿದೆ. ೧೯೯೫ರಲ್ಲಿ ಮಹಿಳಾ ಕಲಾಶಿಬಿರವನ್ನು ಮೊದಲುಬಾರಿಗೆ ಕರ್ನಾಟಕದಲ್ಲಿ ಹಮ್ಮಿಕೊಂಡಿತು. ಇದಲ್ಲದೇ ಮಕ್ಕಳ ಬೇಸಿಗೆ ಶಿಬಿರ, ಅನೇಕ ಚಿತ್ರ, ಶಿಲ್ಪ ಪ್ರದರ್ಶನ, ಕಲಾಶಿಬಿರ ಕಲೆ ಕುರಿತ ಉಪನ್ಯಾಸಗಳು ಮುಂತಾದ ಹಲವಾರು ಕಾರ್ಯಕ್ರಮಗಳನ್ನು ನಡೆಸಿದೆ.ಕೆಲವೊಮ್ಮೆ ಆರ್ಥಿಕವಾಗಿ ಹಿಂದುಳಿದ ಯುವ ಕಲಾವಿದರಿಗೆ ಆರ್ಥಿಕ ಸಹಾಯವನ್ನು ನೀಡಿದೆ. ಬೆಂಗಳೂರು, ಧಾರವಾಡ, ಮುಂಬೈ ನಗರಗಳಲ್ಲಿ ನಿರಂತರವಾಗಿ ಕಲಾ ಪ್ರದರ್ಶನಗಳನ್ನು ಆಯೋಜಿಸುತ್ತಾ ಬಂದಿದೆ. ೧೯೯೦ರಲ್ಲಿ ಶ್ರೀಮತಿ ಲತಾರಾಣಿ ಮಲ್ಹಾರ ಅವರು ನವ್ಯ ನೃತ್ಯ ನೀಕೇತನ ಸಂಸ್ಥೆಯನ್ನು

೦೮. ಸೂರ್ಯನಾಥ ಕಾಮತ (ಸಂ) : ಧಾರವಾಡ ಜಿಲ್ಲೆಯ ಗ್ಯಾಜಿಟಿಯರ್, ಪುಟ – ೭೭೭

ಪ್ರಾರಂಭಿಸಿದರು. ಶ್ರೀವಿಜಯಕುಮಾರ ಕಾರ್ಯದರ್ಶಿಗಳಾಗಿದ್ದಾರೆ. ಈ ಸಂಸ್ಥೆ ಮಹಿಳಾ ಚಿತ್ರಕಲಾ ಶಿಬಿರವನ್ನು ಏರ್ಪಡಿಸಿದೆ. ಬ್ಯಾಲೆ ನೃತ್ಯವನ್ನು ಸಾವಿರಾರು ಮಕ್ಕಳಿಗೆ ದಸರಾ ಉತ್ಸವ, ಪಟ್ಟದಕಲ್ಲು, ಉತ್ಸವ, ನವರಸಪುರ ಉತ್ಸವಗಳಲ್ಲಿ ಪ್ರದರ್ಶಿಸಿವೆ.[೯]

ಧಾರವಾಡ ಜಿಲ್ಲೆಯ ಚಿತ್ರಕಲಾಕ್ಷೇತ್ರಕ್ಕೆ ನೀಡಿದ ಬಹು ದೊಡ್ಡ ಕೊಡುಗೆ ಎಂದರೆ ಕಲಾ ಶಾಲೆಗಳು. ೧೯೩೫ರಲ್ಲಿ ಶ್ರೀ ಡಿ.ವಿ.ಹಾಲಭಾವಿಯವರ ಸ್ಕೂಲ್ ಆಫ್ ಆರ್ಟ್ ಉತ್ತರ ಕರ್ನಾಟಕದ ಮೊದಲ ಕಲಾ ಶಾಲೆ, ನಂತರ ೧೯೫೫ ಡಾ.ಎಂ.ವಿ.ಮಿಣಜಗಿಯವರ ಶ್ರೀ.ವಿಜಯ ಮಹಾಂತೇಶ ಲಲಿತಕಲಾ ಮಹಾವಿದ್ಯಾಲಯ, ೧೯೭೦ರಲ್ಲಿ ಭಾರತೀಯ ಕಲಾಕೇಂದ್ರ, ೧೯೭೪ರಲ್ಲಿ ಸರಕಾರಿ ಚಿತ್ರಕಲಾ ಶಾಲೆ, ೧೯೯೨ರಲ್ಲಿ ಸೃಜನಾ ಕಲಾಮಹಾವಿದ್ಯಾಲಯವನ್ನು ಪ್ರಾರಂಭಿಸಲಾಯಿತು. ಶಿಕ್ಷಣ ಸಂಸ್ಥೆಗಳು ಈ ಭಾಗದಲ್ಲಿ ಅನೇಕ ಖ್ಯಾತನಾಮ ಕಲಾವಿದರನ್ನು ನಾಡಿಗೆ ನೀಡಿವೆ ಮತ್ತು ಕಲಾಕ್ಷೇತ್ರ ಇವರಿಂದ ಪ್ರಕಾಶಗೊಳ್ಳುತ್ತದೆ. ಕಲೆ ಮತ್ತು ಕಲಾವಿದರು ಮುಂದೆ ಬಂದಂತೆ ಅವರ ನಿರೀಕ್ಷೆಗಳು ಹೆಚ್ಚಾಗ ತೊಡಗುತ್ತವೆ. ಅದಕ್ಕೆ ಬೇಕಾದ ವಾತಾವರಣ ಅವಕಾಶಗಳನ್ನು ಕೆಲವು ಸಲ ಅವರೇ ಸೃಷ್ಟಿಸಿಕೊಳ್ಳುತ್ತಾರೆ. ಇಲ್ಲವೇ ಅದಕ್ಕಾಗಿ ಹೊಸ ಹೊಸ ಯೋಜನೆಗಳನ್ನು ರೂಪಿಸಲು ಅವರೇ ಮುಂದಾಗುತ್ತಾರೆ.

ಧಾರವಾಡ ಜಿಲ್ಲೆಯಲ್ಲಿ ಲಲಿತಕಲೆಯ ಎಲ್ಲ ಆಯಾಮಗಳು ಹೊಸಹೊಸ ಪ್ರಯೋಗಗಳಿಂದ ಮಿಂಚುತ್ತಿವೆ. ಮಿಂಚಲು ಅವಕಾಶವನ್ನು ಇಲ್ಲಿಯ ಸಹೃದಯರು ಮಾಡಿಕೊಡುತ್ತಾರೆ. ಕಲಾಪ್ರದರ್ಶನ ಮಾಡಲು ಇಲ್ಲಿ ವ್ಯವಸ್ಥಿತ ಕಲಾಗ್ಯಾಲರಿಗಳಿವೆ. ಅವು ಇಂತಿವೆ ಧಾರವಾಡದಲ್ಲಿ ಸರಕಾರಿ ಆರ್ಟ್ ಗ್ಯಾಲರಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಾಂಸ್ಕೃತಿಕ ಸಮುಚ್ಛಯದ ಆರ್ಟ್‌ಗ್ಯಾಲರಿ, ಧಾರವಾಡ ಕಲಾಮಂಡಳದ ಆರ್ಟ್‌ಗ್ಯಾಲರಿ, ಹುಬ್ಬಳ್ಳಿಯ ಗ್ಲಾಸ್ ಹೌಸ್‌ನಲ್ಲಿರುವ ಶ್ರೀ ಎಂ. ವಿ. ಮಿಣಜಗಿ ಆರ್ಟ್‌ಗ್ಯಾಲರಿ, ವಿದ್ಯಾನಗರದ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯ ಚಿಕ್ಕವೀರಯ್ಯಾ ಆರ್ಟ್‌ಗ್ಯಾಲರಿ ಈ ಕಲಾಗ್ಯಾಲರಿಗಳು ಈ ಭಾಗದ ಜನರಿಗೆ ಕಲಾರಸಸ್ವಾದನೆಯ ಕೇಂದ್ರಗಳಾಗಿವೆ.

ಒಟ್ಟಾರೆಯಾಗಿ ಧಾರವಾಡ ಜಿಲ್ಲೆಯ ಆಹ್ಲಾದಕರವಾದ ಪ್ರಶಾಂತನಗರವೆಂದು ಗುರುತಿಸಲ್ಪಡುತ್ತದೆ. ಉತ್ತಮ ಆರೋಗ್ಯದಾಯಕ ವಾತಾವರಣ ಹೊಂದಿ ವಿದ್ಯೆಗಳ ತವರೂರಾಗಿ, ಜನಪದ ಕಲೆಗಳ ಬೀಡಾಗಿ ಸಂಗೀತ, ಸಾಹಿತ್ಯ, ಚಿತ್ರಕಲೆಯ ಕ್ಷೇತ್ರವಾಗಿ ಲಲಿತಕಲೆಗಳನ್ನು ಸಮೃದ್ಧವಾಗಿ ಬೆಳೆಯಿಸಿಕೊಂಡು ತನ್ನ ಹಿರಿಮೆಯನ್ನು ಹೆಚ್ಚಿಸಿಕೊಂಡಿದೆ.

□□□

---

೦೯. ಆರ್ಯ ಆಚಾರ್ಯ (ಪ.ಸಂ) : ಚಿತ್ರ ಶಾಲ್ಮಲಾ, ಪುಟ – ೪೭

## ಅಧ್ಯಾಯ – ೩

# ಧಾರವಾಡ ಜಿಲ್ಲೆಯ ಜನಪದ ಚಿತ್ರಕಲೆ

ಕನ್ನಡ ನೆಲ ಕಲೆಗಳ ಆಗರವಾಗಿದೆ. ಶಿಲ್ಪ, ಚಿತ್ರ, ಸಾಹಿತ್ಯ, ಸಂಗೀತ, ನೃತ್ಯ, ನಾಟಕ ಮುಂತಾದ ಕಲೆಗಳು ಈ ನಾಡಿನ ಶ್ರೇಷವಿತೆಯ ಕುರುಹುಗಳಾಗಿವೆ. ಗ್ರಾಮೀಣ ಜನತೆಯ ಲಕ್ಷಣಯುಕ್ತವಾದ ರಚನೆ ಅಭಿವ್ಯಕ್ತಿಗಳನ್ನು ಜನಪದ ಕಲೆಗಳು ಎಂದು ಕರೆಯಬಹುದು.[1]

ಕರ್ನಾಟಕದ ಚಿತ್ರಕಲೆಗೆ ತನ್ನದೇ ಆದ ಐತಿಹಾಸಿಕ ಹಿನ್ನೆಲೆ ಇದೆ. ನಮ್ಮ ಜಾನಪದರು ಅವರ ನೋವು ನಲಿವುಗಳನ್ನು ಭಾವಪೂರ್ಣವಾಗಿ ಪ್ರತಿ ಶಬ್ದಗಳಲ್ಲಿಯೂ ತುಂಬಿ ಹಾಡಿದರು. ಅಲ್ಲದೇ ದೃಶ್ಯಕಲಾ ಮಾಧ್ಯಮದ ಮೂಲಕವು ತಮ್ಮ ಜೀವನ ಕ್ರಮಗಳನ್ನು ವಿಶಿಷ್ಟವಾದ ಸಾಂಸ್ಕೃತಿಕ ಮೌಲ್ಯಗಳನ್ನು ನಮ್ಮ ಜಾನಪದರು ಚಿತ್ರಕಲೆಯಲ್ಲಿ ಅಭಿವ್ಯಕ್ತಿಸಿದ್ದಾರೆ. ಈ ದೃಷ್ಟಿಯಿಂದ[2] ಧಾರವಾಡ ಜಿಲ್ಲೆಯಲ್ಲಿನ ಹಚ್ಚೆ ಹಾಕುವ ಕಲೆ, ರಂಗೋಲಿ, ಕಸೂತಿ ಕಲೆ, ಮೆಹಂದಿ, ಕಲಘಟಗಿಯ ಕಲೆ ಮುಂತಾದ ಜನಪದ ಮೂಲದ ಚಿತ್ರಕಲೆಯನ್ನು ಅವುಗಳ ಹುಟ್ಟು, ಬೆಳವಣಿಗೆ, ಜನಪದ ನಂಬುಗೆ ಆಚರಣೆ ಮುಂತಾದ ಅಂಶಗಳ ಹಿನ್ನೆಲೆಯ ಚಿತ್ರಕಲಾ ರಚನಾ ಪರಿಕರಗಳ ರಚನಾ ವಿಧಾನ ಚಿತ್ರಗಳ ವಸ್ತು ವಿಷಯಗಳ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ.

"ಜಾನಪದ ಎನ್ನುವ ಪದ ಇಂಗ್ಲೀಷಿನಲ್ಲಿ Folklore ಎಂಬುದಕ್ಕೆ ಸಮನಾರ್ಥಕವಾಗಿ ಬಳಸುವ ಕನ್ನಡ ಪದ, ಎನ್ನುವುದು. Folk and Lore ಎಂಬ ಎರಡು ಪ್ರತ್ಯೇಕ ಅರ್ಥವನ್ನು ಉಳ್ಳ ಪದಗಳ ಸಂಯೋಗದಿಂದ ಕೂಡಿದೆ. Folk ಎನ್ನುವುದಕ್ಕೆ ಕನ್ನಡದಲ್ಲಿ ಜನಪದ ಎಂತಲೂ Lore ಜ್ಞಾನ ಎಂತಲೂ ಅರ್ಥವಿದೆ ಜಾನಪದ ಜ್ಞಾನ ಈ ವಿಷಯಕ್ಕೆ ಡಾ. ಹಾ. ಮಾ. ನಾಯಕ

೦೧. ಡಾ.ಶಿವಾನಂದ ಬಂಟನೂರ : ಮಾಟದೊಳಗಣ ನೋಟ, ಪುಟ-೩೯

೦೨. ಡಾ. ಎಚ್. ಈ. ಬಸವರಾಜಪ್ಪ : ಬಳ್ಳಾರಿ ಜಿಲ್ಲೆಯ ಚಿತ್ರಕಲೆ, ಪುಟ-೩೨

ಅವರು ಜಾನಪದ ಎಂಬ ಶಬ್ದವನ್ನು ಬಳಸಿದ್ದಾರೆ. ಜನಪದ ಜ್ಞಾನವೇ ಜಾನಪದ ಎಂಬ ಶಬ್ದವನ್ನು ಬಳಸಿದ್ದಾರೆ."[೩]

ಜನಪದ ಚಿತ್ರಕಲೆಯು ಯಾವಾಗ ಹುಟ್ಟಿಬಂದಿತೆಂದು ಹೇಳುವುದು ಅಸಹಜ ಮಾನವನ ಉಗಮದಿಂದಲೂ ಅವನ ದಿನನಿತ್ಯದ ಬದುಕಿನಲ್ಲಿ ನಡೆಯುತ್ತಿದ್ದ ಚಟುವಟಿಕೆಗಳು ದಿನ ದಿನ ಹೋದಂತೆಲ್ಲಾ ಅವರಲ್ಲಾದಂತಹ ಬದಲಾವಣೆಗಳಿಂದ ಕಲೆ ಹುಟ್ಟಿರಬಹುದೆಂದು ತಿಳಿಯಬಹುದು. ಆದಿಮಾನವ ತಾನು ಜೀವಿಸುತ್ತಿದ್ದ ಸಂದರ್ಭದಲ್ಲಿ ಇನ್ನೊಬ್ಬರನ್ನು ಮಾತನಾಡಿಸಲು ಮೊದಲು ಸನ್ನೆಯ ಮೂಲಕ ನಂತರ ಅವರು ನೋಡಿದಂತಹ ಪ್ರಾಣಿ, ಪಕ್ಷಿ, ಮತ್ಯಾವುದನ್ನೇ ಇನ್ನೊಬ್ಬರಿಗೆ ತಿಳಿಸುವ ಉದ್ದೇಶದಿಂದ ಕಲ್ಲಿನ ಮೇಲೆ ಅವುಗಳ ಆಕಾರವನ್ನು ಬರೆದು ತೋರಿಸುತ್ತಿದ್ದ. ಆ ಸಂದರ್ಭದಲ್ಲಿ ಚಿತ್ರ ಕಲೆಯ ಹುಟ್ಟಿರಬಹುದೆಂದು ಹಲವರ ಅನಿಸಿಕೆ, ವಿದ್ವಾಂಸರು ಹೇಳಿದಂತೆ ಮನುಷ್ಯನ ಸಂಪರ್ಕ ಸಾಧನವಾಗಿ ಭಾಷೆ ಹುಟ್ಟುವ ಪೂರ್ವದಲ್ಲಿ ಚಿತ್ರಗಳು ಗುಹೆಗಳಲ್ಲಿ, ಬಂಡೆಗಳ ಮೇಲೆ ಕೊರೆಯಲ್ಪಡುತ್ತಿದ್ದರೆಂದಿದ್ದಾರೆ. ವಿಶ್ವದಲ್ಲಿ ಅತಿ ಪ್ರಾಚೀನ ಚಿತ್ರಕಲೆಯ ಕುರುಹುಗಳು ಸ್ಪೇನಿನ ಗವಿಗಳಲ್ಲಿಯೂ ಫ್ರಾನ್ಸಿನ ಡೋರಡೋನ್ ಪ್ರಾಂತ್ಯದ ಲಾಗ್ರೀಜ್ ಗುಹೆಗಳಲ್ಲಿ ದೊರೆತಿವೆ. ಸುಮಾರು ೨೭೦೦೦ ವರ್ಷಗಳ ಹಿಂದೆ ಅರಿನೇಷಿಯನ್ ನಾಗರೀಕತೆಯ ಕಾಲದಲ್ಲಿ ಮನುಷ್ಯನ ಪ್ರಾಚೀನ ಕಲಾಕೃತಿಗಳು ದೊರೆಯುತ್ತದೆ. ಕ್ರಿ.ಪೂ.೪೦೦೦೦ ದಿಂದ ೧೦೦೦ ವರ್ಷಗಳ ಅವಧಿಯಲ್ಲಿ ಸಹಾರಾದಲ್ಲಿ ಕೃಷಿ, ಯುದ್ಧ, ಮಂತ್ರ, ಮಾಟಗಳಿಗೆ ಸಂಬಂಧಿಸಿದ ಚಿತ್ರಗಳಿದ್ದುವೆಂದು ಡಾ.ಶಿವರಾಮಕಾರಂತರು ವಿವರಿಸುತ್ತಾರೆ."[೪]

### ೧. ಜನಪದ ಚಿತ್ರಕಲೆಯ ವರ್ಗೀಕರಣ

ಕಾಲಕಳೆದಂತೆಲ್ಲಾ ಮನುಷ್ಯನ ಜೀವನವನ್ನು ನಡೆಸಿಕೊಂಡು ಹೋಗುವಾಗ ತನ್ನ ಬೇಸರವನ್ನು ಕಳೆಯಲು ವಿವಿಧ ಪ್ರಕಾರದ ಕಲೆಗಳು ಸೃಷಿವಿಗೊಂಡವು, ಈ ರೀತಿ ಸೃಷಿವಿಗೊಂಡ ಕಲೆಗಳು ಮನುಷ್ಯನನ್ನು ಸೌಂದರ್ಯದಿಂದ ಮುದಗೊಳ್ಳುವಂತೆ ವಿವಿಧ ರೀತಿಯ ವಿನ್ಯಾಸಗಳನ್ನು ತಮ್ಮ ಜೀವನ ಕಲೆಗೆ ಅಳವಡಿಸಿಕೊಂಡರು. ಸೌಂದರ್ಯವನ್ನೇ ಮೂಲವಾಗಿಟ್ಟುಕೊಂಡು ಇಲ್ಲಿ ಜನಪದ ಚಿತ್ರಕಲೆಯನ್ನು ಎರಡು ರೀತಿಯಾಗಿ ವಿಂಗಡಿಸಿದ್ದಾರೆ. i. ಪ್ರಯೋಜನಮೂಲ ಜನಪದ ಚಿತ್ರಕಲೆ, ii. ಮನರಂಜನ ಮೂಲ ಜನಪದ ಚಿತ್ರಕಲೆ,

### i. ಪ್ರಯೋಜನ ಮೂಲ ಜನಪದ ಚಿತ್ರಕಲೆ

ಜನಪದರು ಹಾಸು ಹೊದಿಕೆ ಮನೆ ಗೋಡೆ ಅಂಗಾಂಗಗಳಲ್ಲಿ ಸುಂದರವಾಗಿ ಕಾಣಲು

೦೩. ಡಾ. ಸಿ. ಚಿ. ನಿಂಗಣ್ಣ : ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ ಜಾನಪದ ಅಧ್ಯಯನ, ಪುಟ-೫೧೪

೦೪. ಡಾ.ಎಸ್.ಸಿ.ಪಾಟೀಲ : ಕರ್ನಾಟಕ ಜನಪದ ಚಿತ್ರಕಲೆ, ಪುಟ-೨೭

ತಮಗೆ ಬೇಕಾದಂತೆ ಚಿತ್ರಾಲಂಕಾರಗಳನ್ನು ಸೃಷಿವಿಸಿಕೊಂಡರು. ತಮಗೆ ಬೇಕಾಗುವಂತಹ ಮತ್ತು ಪ್ರಯೋಜನಕಾರಿಯಾಗುವುದರೊಂದಿಗೆ ಕಣ್ಣಿನ ನೋಟಕ್ಕೆ ಶೃಂಗಾರಮಯವಾಗಿಯೂ ಕಾಣುವಂತೆ ಮಾಡಿದುದೇ ಮುಖ್ಯ ಉದ್ದೇಶ. ಈ ಪ್ರಯೋಜನ ಮೂಲ ಜನಪದ ಚಿತ್ರಕಲೆಯಲ್ಲಿ ಹಲವು ಪ್ರಕಾರಗಳನ್ನಾಗಿ ಮಾಡಿಕೊಳ್ಳಬಹುದು.

ಅ. ಗೃಹಾಲಂಕರಣದ ಚಿತ್ರವಿನ್ಯಾಸ, ಆ. ನೆಲೆಗೋಡೆಯ ಮೇಲಿನ ಚಿತ್ರವಿನ್ಯಾಸ, ಇ. ಚರ್ಮದ ಮೇಲಿನ ಚಿತ್ರವಿನ್ಯಾಸ, ಈ. ತಾಳೆಗರಿ, ಕಾಗದ, ಕಡತ, ರಟ್ಟಿನ ಮೇಲೆ ಚಿತ್ರವಿನ್ಯಾಸ, ಉ. ದಾರದ ಸಾಧನದ ಚಿತ್ರವಿನ್ಯಾಸ, ಊ. ಇತರ ಸಾಧನದ ಚಿತ್ರವಿನ್ಯಾಸ.

**ii. ಮನರಂಜನ ಮೂಲ ಜನಪದ ಚಿತ್ರಕಲೆ**

"ಪ್ರಾಚೀನಕಾಲದಿಂದಲೂ ಮನರಂಜನೆಯ ಸಲುವಾಗಿ ಅನೇಕ ಆಟಗಳು ಹುಟ್ಟಿ ಸಮಾಜದಲ್ಲಿ ಪ್ರಚಲಿತದಲ್ಲಿವೆ. ಈ ಆಟಗಳಲ್ಲಿ ಚಿತ್ರಕಲೆಯ ಹಲವಾರು ವಿನ್ಯಾಸಗಳಿಗೆ ಅವುಗಳ ಅನುಕೂಲತೆಗಾಗಿ ಮನೆಯ ಒಳಾಂಗಣ ಆಟಗಳಲ್ಲಿ ಚಿತ್ರಕಲೆ, ಮನೆಯ ಹೊರಾಂಗಣ ಆಟಗಳಲ್ಲಿಯ ಚಿತ್ರಕಲೆ ಎಂದು ವಿಂಗಡಿಸಿರುವುದನ್ನು ಕಾಣುತ್ತೇವೆ."[೫]

**ಅ. ಕಸೂತಿ ಚಿತ್ರಕಲೆ**

"ಕಸೂತಿ ಎಂದರೆ ಬಣ್ಣದ ದಾರಗಳಿಂದ ಬಟ್ಟೆಗಳಿಗೆ ಮಾಡುವ ಹೆಣಿಗೆಯ ಅಲಂಕಾರವೆಂಬ ಅರ್ಥವಿದೆ."[೬] ವಸ್ತ್ರದ ಮೇಲೆ ವಿರಳವಾಗಿ ಚರ್ಮ. ಇತರ ವಸ್ತುಗಳ ಮೇಲೆ ಸೂಜಿ, ದಾರಗಳಿಂದ ಹಣೆದು ಮಾಡಿದ ಅಲಂಕಾರವನ್ನೇ ಕಸೂತಿ ಎನ್ನಬಹುದು. "ಶಿಲಾಯುಗದಲ್ಲಿ ಎಸ್ಕಿಮೊಗಳಲ್ಲಿ ನಿಯೊಂಡರ್‌ತಾಲ ಮನುಷ್ಯನಲ್ಲಿ ಕ್ರೊಮ್ಯಾಗ್ಯನ್ ಗುಹೆಯ ಮನುಷ್ಯರಲ್ಲಿ ಡಾರ್ಡಗ್ನೆ ತಾಗುಲ್ ಲೆಂಡಾ ಸ್ಪೇನ್‌ಗಳ ಪ್ರಾಚೀನ ಗುಹೆಯ ಚಿತ್ರಗಳಲ್ಲಿ ಕಸೂತಿಯಂತಹ ಚಿತ್ರಗಳ ಮಾದರಿಗಳಿರುವುದನ್ನು ಗುರುತಿಸಲಾಗಿದೆ. ಇದಲ್ಲದೆ ಸೂಜಿಯಿಂದ ಹೊಲಿದ ಉಡುಪುಗಳ ಅವಶೇಷಗಳೂ ದೊರೆತಿವೆ. ಈಜಿಪ್ತ್‌ದ ದೇವತೆ ಹಾಗೂ ವೀರಯೋಧರ ಶಿಲ್ಪಗಳ ಉಡುಪುಗಳು ಹಾಗೂ ಮೆಸಪೊಟಮೀಯಾದಲ್ಲಿ ಹೆಣ್ಣುಮಕ್ಕಳ ಉಡುಪುಗಳನ್ನು ಕಸೂತಿಯಿಂದ ಅಲಂಕರಿಸುತ್ತಿದ್ದದ್ದು ಗೊತ್ತಾಗುತ್ತದೆ."[೭]

ಭಾರತದಲ್ಲಿ ಮೊದಲು ಕಸೂತಿ ಕಲೆ ಇದ್ದರೂ ಇದು ರಾಜರ ಆಶ್ರಯಕ್ಕೆ ಒಳಪಟ್ಟಿದ್ದು ಮೊಘಲ್ ಅರಸರ ಕಾಲದಲ್ಲಿ ಈ ರಾಜರು ಕಸೂತಿ ಚಿತ್ರಕಲೆ ಅಲ್ಲದೆ ಎಲ್ಲ ಪ್ರಕಾರದ ಚಿತ್ರಕಲೆಗೂ

---

೦೫. ಡಾ.ಎಸ್.ಸಿ.ಪಾಟೀಲ : ಕರ್ನಾಟಕ ಜನಪದ ಚಿತ್ರಕಲೆ, ಪುಟ-೬೭

೦೬. ಜೆ.ಎ.ಕವಲಿ : ಸಚಿತ್ರ ಕಸ್ತೂರಿ ಕೋಶ, ಪುಟ-೨೧೦

೦೭. ಕನ್ನಡ ವಿಶ್ವಕೋಶ ಸಂಪುಟ-೫, ಪುಟ-೩೨೩

ಮೊಘಲ್ ಅರಸರು ರಾಜಾಶ್ರಯವನ್ನು ಕೊಟ್ಟಿದ್ದರು. ಇವರ ಕಾಲದಲ್ಲಿ ಕಲೆಯು ಹೆಚ್ಚಾಗಿ ಬೆಳೆಯಿತು ಎಂದರೆ ತಪ್ಪಾಗಲಾರದು ಮೊಘಲರ ಕಾಲದಲ್ಲಿ ಫತೇಪುರ ಸಿಕ್ರಿಯಲ್ಲಿ ಸುಂದರವಾದ ಅತ್ಯುತ್ತಮವಾದ ಮೋಹಕ ವಿನ್ಯಾಸದ ಕಸೂತಿ ರಗ್ಗುಗಳು ತಯಾರಾಗುತ್ತಿದ್ದವು. ಇದನ್ನು A in -e- Akbari ಪುಸ್ತಕದಲ್ಲಿ ಇದರ ಬಗ್ಗೆ ವಿವರಿಸಲಾಗಿದೆ. ಮೋಹಕವಾದ ಕಸೂತಿ ವಿನ್ಯಾಸದ ರಗ್ಗುಗಳ ತಯಾರಿಕೆಯಲ್ಲಿ ಮೊಘಲರ ಪಾತ್ರ ಪ್ರಮುಖವಾಗಿತ್ತು.

**ಕಸೂತಿಯ ಪ್ರಕಾರಗಳು**

ಕರ್ನಾಟಕದಲ್ಲಿ ಕಂಡುಬರುವ ಕಸೂತಿಯ ಪ್ರಕಾರಗಳಲ್ಲಿ ಗಾಂವಟಿ, ಮೆಂತೆ, ನೇಯ್ಗೆ, ಮುರುಗಿ ಎಂದು ಮುಂತಾದ ಪ್ರಕಾರಗಳಿವೆ. ಅವುಗಳ ಆಕಾರ ಹಾಗೂ ಮಾಧ್ಯಮಗಳ ರಚನೆಯಲ್ಲಿ ಈ ವರ್ಗೀಕರಣವನ್ನು ಮಾಡುತ್ತಾರೆ.

**ಗಾಂವಟಿ**

ಹಳ್ಳಿಯ ಕಸೂತಿ ಕನ್ನಡ ಕಸೂತಿಯೆಂದು ಕರೆಯಿಸಿಕೊಳ್ಳುವ ಇದು. ಕರ್ನಾಟಕದ ಇತರ ಕಸೂತಿಗಳಿಗಿಂತ ತೀರ ಭಿನ್ನವಾದುದಾಗಿದೆ. ಅತ್ಯಂತ ಸುಂದರವಾದುದೆಂದೂ ನಯನಾಜೂಕಿನದೆಂದೂ ಇದು ಪ್ರಸಿದ್ಧಿ ಪಡೆದಿದೆ. ಸಿದ್ಧವಾದ ಗಾಂವಟಿ ಕಸೂತಿಯ ಆದಿ ಅಂತ್ಯಗಳನ್ನು ಗುರುತಿಸುವುದು ಕಷ್ಟದ ಕೆಲಸ ಕೆಳಗಿನ ಬದಿ ಮತ್ತು ಮೇಲಿನ ಬದಿಗಳೆರಡನ್ನೂ ಬೇಕಾದ ಹಾಗೆ ತಿರುಗಿಸಿ ನೋಡಿದರೂ ಈ ಕಸೂತಿಯ ವಿನ್ಯಾಸ ಒಂದೇ ರೀತಿಯಾಗಿ ಕಾಣಿಸುತ್ತದೆ.

**ಮೆಂತೆ ಕಸೂತಿ**

ಈ ಕಸೂತಿಯ ಸಾಲುಗಳು ಮೆಂತೆಕಾಳಿನೋಪಾದಿಯಲ್ಲಿರುವುದರಿಂದ ಇದಕ್ಕೆ ಮೆಂತಿ ಕಸೂತಿಯೆಂಬ ಹೆಸರು ಪ್ರಾಪ್ತವಾಗಿದೆ.

**ನೇಯ್ಗೆ ನೇಗಿ ಕಸೂತಿ**

ನೇಯ್ಗೆ ಕಸೂತಿಯನ್ನು ಬಟ್ಟೆಯ ಮೇಲಿರುವ ಅಡ್ಡ ಮತ್ತು ಉದ್ದಗೆರೆಗಳಲ್ಲಿ ಬಟ್ಟೆಯ ಅಡ್ಡ ಎಳೆಗಳೊಡನೆ ನೇಯ್ದಂತೆ ಹಾಕುತ್ತಾರೆ. ಹೀಗಾಗಿ ಕಸೂತಿಯ ಚಿತ್ರ ವಿನ್ಯಾಸಗಳು ನೇಯ್ದಂತೆ ಕಾಣಿಸುವುದು ಸಹಜ.

**ಮುರುಗಿ ಕಸೂತಿ**

ಹೆಣಿಕೆ ಮುರುಗಿ ಮುರುಗಿಯಾಗಿರುವುದರಿಂದ ಈ ಕಸೂತಿಗೆ ಮುರುಗಿ ಕಸೂತಿ ಎಂಬ ಹೆಸರಿದೆ.[೮]

೦೮. ಡಾ.ಎಸ್.ಸಿ.ಪಾಟೀಲ : ಕರ್ನಾಟಕ ಜನಪದ ಚಿತ್ರಕಲೆ, ಪುಟ–೧೪೬

**ಧಾರವಾಡದ ಕಸೂತಿ**

ಕರ್ನಾಟಕ ಕಸೂತಿ ಚಿತ್ರಕಲೆಯು ಭಾರತದ ಕಸೂತಿ ಕ್ಷೇತ್ರದಲ್ಲಿ ಒಂದು ವಿಶೇಷವಾದ ಸ್ಥಾನವನ್ನು ಹೊಂದಿದೆ. ತನ್ನದೇ ಆದಂತಹ ಒಂದು ವಿಶೇಷ ಸುಂದರತೆ, ಸರಳತೆ ಇದೆ ಎಂದರೆ ತಪ್ಪಾಗಲಾರದು. ಕಸೂತಿ ಕಲೆಯು ಅದರಲ್ಲೂ ಉತ್ತರ ಕರ್ನಾಟಕದಲ್ಲಿ ಒಂದು ಜಾನಪದ ಕಲೆಯಾಗಿ ಬೇರೂರಿದೆ. ಉತ್ತರ ಕರ್ನಾಟಕ ಅದರಲ್ಲೂ ಮುಖ್ಯವಾಗಿ ಧಾರವಾಡ ಹುಬ್ಬಳ್ಳಿ, ಇಳಕಲ್ಲು, ಬಾದಾಮಿ, ಗುಳೇದಗುಡ್ಡ, ಬೆಳಗಾಂವಿಗಳಲ್ಲಿ ಕೇಂದ್ರೀಕೃತವಾಗಿದೆ. ಆದರೆ ಈಗ ಈ ಕಸೂತಿ ಕಲೆಯು ಧಾರವಾಡವನ್ನು ಆವರಿಸಿಕೊಂಡಿದೆ ಎನ್ನಬಹುದು. ಧಾರವಾಡ ಪೇಢೆ ಮತ್ತು ಧಾರವಾಡ ಕಸೂತಿ ಎರಡು ಸಮಾನ ಪದಗಳಾಗಿವೆ ಎಂದರೂ ತಪ್ಪಾಗಲಾರದು. ವಾಸ್ತವದಲ್ಲಿ ಧಾರವಾಡದ ಕಸೂತಿ ಎಂದೇ ಕರೆಯುತ್ತಾರೆ. ಧಾರವಾಡದ ಕಸೂತಿಯು ಕರ್ನಾಟಕದಲ್ಲಿ ಅಷ್ಟು ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ.

ಉತ್ತರ ಕರ್ನಾಟಕದ ಹಳ್ಳಿ ಮಹಿಳೆಯರು ತಮ್ಮ ತಲೆಯ ಮೇಲೆ ಸೆರಗನ್ನು ಹೊತ್ತುಕೊಳ್ಳುವುದರಿಂದ ಸೀರೆಯ ಸೆರಗು ಸುಂದರವಾಗಿ ಕಾಣಲು ಕಸೂತಿಯನ್ನು ಹಾಕುತ್ತಾರೆ. ಕಸೂತಿ ಹಾಕಿದ ಭಾಗವು ಅವರ ತಲೆ ಭುಜಗಳನ್ನು ಆವರಿಸುತ್ತದೆ. ನೋಡಲು ತುಂಬಾ ಸುಂದರವಾಗಿ ಕಾಣುತ್ತದೆ. ಕಸೂತಿ ಕಲೆಯು ಹೆಚ್ಚಾಗಿ ಮಹಿಳೆಯರ ಬಿಡುವಿನ ವೇಳೆ ಕಳೆಯಲು ಮತ್ತು ತಮ್ಮ ಜೊತೆಗೆ ವಂಶಪಾರಂಪರ್ಯವಾಗಿ ಬಂದ ಕಲೆಯನ್ನು ಉಳಿಸುವ ಪ್ರಯತ್ನ ಕೂಡ ಆಗಿರುತ್ತದೆ. ಅದರ ಜೊತೆಗೆ ಸೌಂದರ್ಯ ಪ್ರಜ್ಞೆ ಇವರನ್ನು ಕಸೂತಿ ಕಲೆಯತ್ತ ತೊಡಗಿಸುತ್ತದೆ. ಹಳ್ಳಿಯ ಹೆಣ್ಣು ಮಕ್ಕಳು ನೈಸರ್ಗಿಕವಾಗಿ ಕಂಡುಬರುವ ಗಿಡ, ಮರ, ಹೂವು, ಬಳ್ಳಿ, ನವಿಲು, ಗಿಳಿಯ ಮತ್ತು ವಿವಿಧ ವಿನ್ಯಾಸದ ನಕ್ಷಾ ಚಿತ್ರಗಳನ್ನು ವಿವಿಧ ವರ್ಣ ಸಂಯೋಜನೆಗಳ ಮೂಲಕ ಕಸೂತಿಯಲ್ಲಿ ಚಿತ್ತಾರ ಮೂಡಿಸುತ್ತಾರೆ.

ಹುಟ್ಟಿದ ಕೂಸಿನ ಕುಂಚಿಗೆ ಅದರ ಹಾಸುವ ಮತ್ತು ಹೊಚ್ಚುವ ಬಟ್ಟೆಗಳಿಗೆ ಕಸೂತಿಯನ್ನು ಹಾಕುತ್ತಾರೆ. ಕರಿಚಂದ್ರಕಾಳಿ ಸೀರೆ, ಇಳಕಲ್ಲ ಸೀರೆ, ಗುಳೇದಗುಡ್ಡದ ಕುಬುಸದ ಕಣದ ಮೇಲೆ ಹಾಕುತ್ತಿದ್ದರು. ಕಾಲ ಬದಲಾದಂತೆ ಅಭಿರುಚಿ ಮತ್ತು ಆಸ್ತಕಿಗಳು ಬದಲಾಗುತ್ತವೆ. ಹೊಸ ಪ್ರಯೋಗದತ್ತ ಮನಸ್ಸು ತನ್ನನ್ನು ತಾನೆ ಸೆಳೆದುಕೊಳ್ಳುತ್ತದೆ. ಆಗ ಕಣ್ಣಿಗೆ ಕಂಡ ವಸ್ತುಗಳು ಪ್ರಯೋಗವಾಗಲು ತೊಡಗುತ್ತವೆ. ಬದಲಾವಣೆಯ ಗಾಳಿ ಕಸೂತಿಯನ್ನು ಸಹ ತನ್ನ ಅಧೀನದಲ್ಲಿ ಮಾಡಿಕೊಂಡಿದೆ. ಕಸೂತಿಯನ್ನು ಈಗ ಬೆಡ್‌ಶೀಟ್, ತಲೆದಿಂಬು, ಕುಶನ್ ಕವರು, ಟೊಪ್ಪಿಗೆ, ಗಂಡಸರ, ಷರ್ಟು, ಕುರ್ತಾ, ಕೈವಸ್ತ್ರಗಳ ಮೇಲು ಕಸೂತಿಯ ವಿನ್ಯಾಸಗಳನ್ನು ಬಳಸತೊಡಗಿದ್ದಾರೆ. ದಿನ ನಿತ್ಯ ತೊಡುವ ಸೀರೆಯಲ್ಲದೆ ಸೆರಗಿನ ಮೇಲೆ ಒಂದು ಬಳ್ಳಿ, ಕೆಳಗಡೆ ಒಂದು ಹೂವಿನ

ಚಿತ್ರವನ್ನು ಹಾಕುತ್ತಿದ್ದರು. ಧಾರವಾಡದ ಕಸೂತಿಯು ಇತರ ಕಸೂತಿಗಳಂತೆ ಅಲ್ಲ. ಇದು ಅತ್ಯಂತ ಕಷ್ಟದ ಕೈ ಹೊಲಿಗೆಯಾಗಿದ್ದು ಇದನ್ನು ರಚಿಸಲು ಯಾವುದೇ ರೇಖಾಚಿತ್ರಗಳನ್ನು ಸೀರೆಯ ಮೇಲೆ ಹಾಕುವುದಿಲ್ಲ. ನೇರವಾಗಿ ಧಾರದಿಂದಲೇ ಹಾಕುತ್ತ ಹೋಗುತ್ತಾರೆ. ಹೀಗಾಗಿ ಸಾಂಪ್ರದಾಯಿಕ ಶೈಲಿಯಲ್ಲಿ ಸೀರೆಯೊಂದನ್ನು ಕಸೂತಿ ಹಾಕಬೇಕಾದರೆ ಕನಿಷ್ಟ ೬ ರಿಂದ ೮ ತಿಂಗಳು ಬೇಕಾಗುತ್ತದೆ. ಮೊದಲಿಗೆ ವಿನ್ಯಾಸಕ್ಕೆ ಅನುಗುಣವಾಗಿ ಬಟ್ಟೆಯ ಎಳೆಗಳನ್ನು ಎಣಿಸಿ ನಿಖರವಾದ ಹೊಲಿಗೆಯನ್ನು ಹಾಕುತ್ತಾರೆ. ಈ ರೀತಿಯಾಗಿ ಹಾಕಿದ ಅತೀ ಸೂಕ್ಷ್ಮ ಹೊಲಿಗೆಯು ಕಸೂತಿಗೆ ಒಂದು ವಿಶೇಷವಾದ ರೂಪವನ್ನು ಕೊಡುತ್ತದೆ.

**ಧಾರವಾಡದ ಕಸೂತಿಯ ಚಿತ್ರವಿನ್ಯಾಸಗಳು**

ಇಲ್ಲಿನ ಕಸೂತಿ ಕಲೆಯ ಮನುಷ್ಯ ಪ್ರಕೃತಿಯೊಂದಿಗೆ ಪ್ರಾಣಿ ಪಕ್ಷಿಗಳೊಂದಿಗೆ, ದೇವ ದೇವತೆಗಳೊಂದಿಗೆ, ಹೆಣ್ಣಿನೊಂದಿಗೆ ಹೊಂದಿದ ನಿಲುವನ್ನೇ ತೋರಿಸುವ ನಿಲುವುಗನ್ನಡಿಯಾಗಿದೆ. ಮಾನವ ದಿನಚರಿಯ ವಿವಿಧ ರೂಪುರೇಷೆಗಳು ಕಸೂತಿ ನಕ್ಷೆಗಳಲ್ಲಿ ಪ್ರತಿಬಿಂಬಿತವಾಗಿವೆ.

ನಿಸರ್ಗದ ಗಿಡ, ಹೂ, ಬಳ್ಳಿ, ಪ್ರಾಣಿ ಪಕ್ಷಿಗಳು ನಕ್ಷೆಗಳು ಅತಿ ಹೆಚ್ಚಿನ ಮಹತ್ವವನ್ನು ನೀಡಲಾಗಿದೆ. ದ್ರಾಕ್ಷಿ ಬಳ್ಳಿ, ಮೆಂತ್ಯ ಬಳ್ಳಿ, ತೊಂಡೆ ಬಳ್ಳಿ, ಬಟಗಡ್ಲಿ ಬಳ್ಳಿ, ಮುತ್ತಿನ ಬಳ್ಳಿ, ಚೆನ್ನಂಗಿ ಬಳ್ಳಿ, ತೆಂಗಿನ ಹೂವಿನ ಪಟ್ಟಿ, ಗುಂಡಾಳು ಹಾಗೂ ಗೋಡಂಬಿ ಪಟ್ಟಿಗಳನ್ನು ಯಾವುದೇ ಬಟ್ಟೆಯ ಅಂಚುಗಳಿಗೆ ಸಹಹಾಕಲು ಬಳಸುತ್ತಾರೆ. ಹೂವುಗಳಲ್ಲಿ ಕಮಲ ಹೂವಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಲಾಗಿದೆ. ಇದು ಲಕ್ಷ್ಮೀದೇವಿಯ ಪ್ರತೀಕವೆಂದೇ ನಂಬುತ್ತಾರೆ.

ಧಾರ್ಮಿಕತೆ ಹಾಗೂ ಮಂದಿರಗಳ ಪ್ರಭಾವದಿಂದ, ದೇವಸ್ಥಾನದ ಗೋಪುರಗಳು, ರಥಗಳು, ತೇರು, ಪಲ್ಲಕ್ಕಿ, ದೇವದೇವತೆಗಳು ದೀಪಸ್ತಂಭ, ಶಿವಲಿಂಗ, ಶಿವನ ಬಾಸಿಂಗ, ನಂದಿ, ಮನುಷ್ಯಾಕೃತಿ, ಸ್ವಸಿಕ್ತ, ಹನುಮಂತ, ಸೂರ್ಯ, ಶಂಖ, ರಾಮನ ತೊಟ್ಟಿಲು, ಕಾಳಿಂಗ ಕೊಳ, ಅಪ್ಪಕೊಳ, ರಾಮನ ಅಳಿಲು ಇತ್ಯಾದಿ ನಕ್ಷೆಗಳನ್ನು ಬಿಡಿಸುತ್ತಾರೆ. ಪಕ್ಷಿಗಳಲ್ಲಿ ನವಿಲು, ಗಿಳಿ, ಗುಬ್ಬಿ, ಪಾರಿವಾಳ ಇಣಚೆ, ಹಂಸ ಇತ್ಯಾದಿಗಳನ್ನು ಬಿಡಿಸುತ್ತಾರೆ. ಪ್ರಾಣಿಗಳಲ್ಲಿ ಸಿಂಹ, ಹುಲಿ, ಕುದುರೆ, ಆನೆಗಳನ್ನು ಬಿಡಿಸುತ್ತಾರೆ.

ಕರ್ನಾಟಕಕ್ಕಿಂತ ಮುಂಬೈ, ದೆಹಲಿ ಮಾರುಕಟ್ಟೆಗಳಲ್ಲಿ ಕರ್ನಾಟಕ ಕಸೂತಿಯು ಮೇಲುಗೈಯಾಗಿದೆ. ವಿವಿಧ ನಕ್ಷೆ, ಆಕರ್ಷಕ ನವೀನ ವಿನ್ಯಾಸಗಳಲ್ಲಿ ವರ್ಣರಂಜಿತ ನೂಲುಗಳಿಂದ ಬಿಡಿಸಿದ ಕಸೂತಿಯ ಸೀರೆಗಳು ನೋಡಲು ಕಣ್ಣಿಗೆ ಮೋಹಕ ಹಾಗೂ ಸುಂದರವಾಗಿದ್ದು, ಸೀರೆಯ ಬೆಲೆಯ ಅದರ ಮೂಲ ಬೆಲೆಗಿಂತ ಮೂರು ಅಥವಾ ನಾಲ್ಕು ಪಟ್ಟು ಹೆಚ್ಚಾಗಿದ್ದರೂ ಕೂಡಾ ಮಾರಾಟವಾಗುತ್ತವೆ. "ಕಸೂತಿ ಕಲೆಯ ಕಲಾತ್ಮಕತೆಯಲ್ಲಿ ಹಿರಿಮೆಯನ್ನು ಕಂಡರೂ

ಮಾರುಕಟ್ಟೆಯ ದಾರಿಯಲ್ಲಿ ತನ್ನ ಬೆಲೆಯನ್ನು ಕಳೆದುಕೊಂಡಿದೆ. ಕರ್ನಾಟಕ ರಾಜ್ಯ ಅಭಿವೃದ್ಧಿ ನಿಗಮದವರು ನಶಿಸುತ್ತಿರುವ ಈ ಕಲೆಯನ್ನು ಉಳಿಸಿ ಬೆಳೆಸಲು ಶ್ರಮಿಸುತ್ತಿದ್ದಾರೆ. ಇತರ ಸಂಸ್ಥೆಗಳಾದ ಜನತಾ ಶಿಕ್ಷಣ ಸಮಿತಿ ಧಾರವಾಡ, ವಿನಯಾ ಹ್ಯಾಂಡಿಕ್ರಾಫ್ಟ್ ಧಾರವಾಡ, ಮಹಿಳಾ ವಿದ್ಯಾಪೀಠ ಹುಬ್ಬಳ್ಳಿ, ಹಾಗೂ ಇತರ ಸಹಕಾರಿ ಸಂಘಗಳು ಕಸೂತಿಯನ್ನು ಅಲ್ಪಾವಧಿ ಮತ್ತೆ ೧೦ ತಿಂಗಳ ತರಬೇತಿಗಳನ್ನು ಪ್ರಾರಂಭ ಮಾಡಿವೆ."[೯]

ಹೀಗೆ ವಿವಿಧ ನಕ್ಷೆ ವಿನ್ಯಾಸಗಳನ್ನು ತಮ್ಮ ಪ್ರಾದೇಶಿಕತೆಯ ಆಚರಣೆಯಲ್ಲಿ ಅಳವಡಿಸಿ ಕೇವಲ ಬಣ್ಣ ಬಣ್ಣದ ದಾರದಿಂದ ಒಂದು ವಿಶಿಷವಿವಾದ ಕಲಾ ಪರಂಪರೆಯಾಗಿ ಧಾರವಾಡದ ಕಸೂತಿ ಬೆಳೆಯುತ್ತಿದೆ. ಹೊಸತನವನ್ನು ಸ್ವಾಗತಿಸುವ ಭರದಲ್ಲಿ ನಾವು ಐತಿಹಾಸಿಕ ಪ್ರಖರತೆ ಉಳ್ಳ ಕಲೆಗಳನ್ನು ಕಡೆಗಣಿಸದೆ ಅವುಗಳನ್ನು ಮುತುವರ್ಜಿ ವಹಿಸಿ ಕಾಪಾಡಿಕೊಂಡು ಹೋಗುವ ಕಾರ್ಯದತ್ತ ಮುಖ ಮಾಡಬೇಕಿದೆ.

**ಆ. ರಂಗೋಲಿ ಚಿತ್ರಕಲೆ**

ಮಾನವನ ಬದುಕಿನಲ್ಲಿ ಚಿತ್ರಕಲೆಯ ಪ್ರವೇಶದೊಂದಿಗೆ ರಂಗೋಲಿ ಪ್ರವೇಶ ಪಡೆದಿದೆ. ಸಂತೋಷಕುಮಾರ ಗುಲ್ವಾಡಿಯವರು ರಂಗೋಲಿಯ ಪ್ರಾಚೀನತೆಯನ್ನು ಸುಮಾರು ೫೦೦೦ ವರ್ಷಗಳಷ್ಟು ಹಿಂದೆ ಎಳೆದು ಪರಿಚಯಾತ್ಮಕ ಲೇಖನ ಬರೆದಿದ್ದಾರೆ. ಆದರೆ ಅದಕ್ಕಾಗಿ ಆಧಾರ ಸೂಚಿಗಳನ್ನು ಅವರು ಕೊಟ್ಟಿಲ್ಲ.[೧೦]

ರಂಗೋಲಿ ಎಂದರೆ ರಂಗವೆಂದರೆ ಬಣ್ಣ, ವಲ್ಲಿ ಎಂದರೆ ಬಳ್ಳಿ ಎಂದರ್ಥ ಬಣ್ಣದ ಸಾಲು ರಂಗೋಲಿ ಪುಡಿ ಬಣ್ಣಗಳಿಂದ ರಚಿಸಿದ ಬಳ್ಳಿ ಚಿತ್ರವೇ ರಂಗೋಲಿ ಬಣ್ಣದ ಗೆರೆಗಳ ಸಮೂಹವೆಂದು ಬಣ್ಣಗಳ ವೃಂದವೆಂದೂ ಇದನ್ನು ಅರ್ಥೈಸುತ್ತಾರೆ. ರಂಗೋಲಿಯು ರಂಗವಲ್ಲಿಯೆಂದು ಪ್ರಸಿದ್ಧವಾಗಿದೆ.

ವಾತ್ಸಾಯನನ ೬೪ ಕಲೆಗಳಲ್ಲಿ ತುಂಡುಲಬಲಿ ಕುಸುಮವಿಕಾರವು ೬ನೆಯ ಕಲೆಯಾಗಿದ್ದು ಈ ಕಲೆಯ ಬಗೆಗೆ ವಿದ್ವಾಂಸರು ಚರ್ಚಿಸಿದ್ದಾರೆ. ಯಶೋಧರ ಪಂಡಿತನು ಇದರ ಅರ್ಥವನ್ನು ಸರಸ್ವತಿ ಕಾಮದೇವ ದೇವಾಲಯಗಳಲ್ಲಿ ಅಕ್ಕಿಯಿಂದ ರಚಿಸುತ್ತಿದ್ದ ಸುಂದರವಾದ ಕಲಾಕೃತಿಗಳು ಎನ್ನುತ್ತಾನೆ.[೧೧]

ದೀಪಾವಳಿಯ ಸಂದರ್ಭದಲ್ಲಿ ಬಲಿಚಕ್ರವರ್ತಿ ಕುರುಹಾಗಿ ರಂಗೋಲಿಯನ್ನು ಹಾಕಲಾಗುತ್ತದೆ. ಇಲ್ಲಿ ವಿದ್ವಾಂಸರು ಹೇಳುವ 'Divali as the day on which Raja Bali,

---

೦೯. ವಿಜಯಾ ಹಿರೇಮಠ : ಕನ್ನಡ ನಾಡಿನ ಕಸೂತಿ, ಪುಟ-೨೪

೧೦. ತರಂಗ, ೨೨ ಸೆಪ್ಟಂಬರ್, ಪುಟ-೫

೧೧. Sixty Four Arts in Ancient India, P-100

was deprived of his empire on earth. In Maharastra woman Prepare effigies of Bali either in rice floor or cow-dung according to grade worship them and Repeat the Blessing May all evils disappear and Raja Bali's Empire be restored[೧೨]

ಕರ್ನಾಟಕದಲ್ಲಿ ಬಲಿಚಕ್ರವರ್ತಿಯ ಕುರುಹಾಗಿ ರಂಗೋಲಿ ಬರೆಯುವ ಕಲೆ ಪ್ರಾರಂಭವಾಗಿರುವ ಕುರಿತು ಜನಪದರಲ್ಲಿ ಕಥೆಯೊಂದು ಹೀಗಿದೆ. ಬಲಿ ಚಕ್ರವರ್ತಿ ಧರ್ಮಿಷ್ಟನಾದ ನಿಷಾವಿವಂತನಾದ ರಾಜ ಇವನ ಆಳ್ವಿಕೆಯಲ್ಲಿ ಭೂಮಿ ಎಷ್ಟು ಸಂಪದ್ಭರಿತವಾಗಿತ್ತೆಂದರೆ ಹಾಲಿನ ಹೊಳೆ ಹರಿಯುತ್ತಿತ್ತಂತೆ ಆದರೂ ರಾಕ್ಷಸ ಸಂಹಾರವಾಗಲೇಬೇಕು. ಅದಕ್ಕಾಗಿಯೇ ಅವತರಿಸಿದ್ದಾನೆ. ಮಹಾವಿಷ್ಣು ವಾಮನನ ಅವತಾರ ತಾಳಿ, ಬಲಿಚಕ್ರವರ್ತಿ ನಡೆಸುತ್ತಿದ್ದ ಯೋಗವನ್ನು ಸಮೀಪಿಸಿ ಮೂರಡಿ ನೆಲ ಕೇಳಿದ ಬಲಿಚಕ್ರವರ್ತಿ ಕೊಡುತ್ತೇನೆ ಎಂದ ಆಗ ಕೂಡಲೇ ವಾಮನಾಗಿದ್ದವನು ತ್ರಿವಿಕ್ರಮನಾಗಿ ಬೆಳೆದು ಒಂದು ಪಾದದಿಂದ ಭೂಮಿಯನ್ನು ಇನ್ನೊಂದು ಪಾದದಿಂದ ಆಕಾಶವನ್ನು ಅಳೆದು ಮೂರನೆಯ ಪಾದವನ್ನು ಎಲ್ಲಿಡಲಿ ಎಂದ. ತನ್ನ ತಲೆಯನ್ನೇ ಒಡ್ಡಿದ ಬಲಿ ಚಕ್ರವರ್ತಿಯ ತಲೆಯ ಮೇಲೆ ಆಪಾದವನ್ನಿಟ್ಟು ಅವನನ್ನು ಪಾತಳಕ್ಕೆ ತುಳಿದನು. ತ್ರಿವಿಕ್ರಮ ಅನಂತರ ಅವನ ಭಕ್ತಿಗೆ ಮೆಚ್ಚಿ ಅವನ ಮನೆಬಾಗಿಲು ಈಗಲೂ ಕಾಯುತ್ತಿದ್ದಾನೆಂಬ ಭಾವನೆಯಿದೆ.[೧೩] ಈಗಲೂ ಸಹ ಬಲಿಪಾಡ್ಯಮಿಗೆ ಬಲಿಚಕ್ರವರ್ತಿ ಬರುತ್ತಾನೆಂಬ ನಂಬಿಕೆಯಿಂದ ಮನೆಯ ಮುಂದೆ ಅವನ ಚಿತ್ರವನ್ನು ಸಗಣಿಯಿಂದ ತೆಗೆದು ಹಳದಿ ಹೂಗಳಿಂದ ಅಲಂಕರಿಸಿ ಅದರ ಸುತ್ತಲೂ ಹಾಲನ್ನು ಹರಿಸುತ್ತಾರೆ. ಈ ಕಥೆಯ ಹಿನ್ನೆಲೆಯಲ್ಲಿ ಸಮೃದ್ಧಿಯ ಸಂಕೇತವಾಗಿ ರಂಗೋಲಿ ಹಾಕಲು ಪ್ರಾರಂಭಿಸಿರುವುದು.

ರಂಗೋಲಿ, ರಂಗವಲ್ಲಿ ಎಂದು ವಿವಿಧ ಹೆಸರುಗಳಿಂದ ಕರೆಸಿಕೊಳ್ಳುವ ಈ ಕಲೆ ಎಂದು ಮಾನವ ಒಂದೆಡೆ ನೆಲೆ ನಿಂತು ಜೀವನ ಆರಂಭಿಸಿದನೋ ಅಂದಿನಿಂದಲೆ ಮಾನವನ ಜೊತೆಗೆ ಬೆಳೆದು ಬಂದಿದೆ. ಗಂಡಸರು ಮತ್ತು ಹೆಂಗಸರು ರಂಗೋಲಿ ಹಾಕುತ್ತಿದ್ದರು ಮಹಿಳೆಯರಿಗೆ ರಂಗೋಲಿ ಕಲೆ ಸಹಜವಾಗಿ ಒಲಿದಂಥದ್ದು. ರಂಗೋಲಿಗೆ ಒಳ್ಳೆಯ ಸಂಪ್ರದಾಯಕ್ಕೆ ಅಳವಡಿಸಿಕೊಂಡಿರುವ ಜನರು ರಂಗೋಲಿಯನ್ನು ಅಕ್ಕಿಹಿಟ್ಟು, ಅರಿಶಿಣ, ಕುಂಕುಮ ಇವುಗಳ ಜೊತೆಗೆ ಇತ್ತೀಚ್ಚಿನ ದಿನಗಳಲ್ಲಿ ಕಲ್ಲಿನ ಪುಡಿಯಿಂದ ನಮ್ಮ ಹಳ್ಳಿಗಳಲ್ಲಿ ರಂಗೋಲಿ ಹಾಕುವುದನ್ನು ಕಾಣುತ್ತೇವೆ. ಹೀಗೆ ಹಾಕುವುದರಿಂದ ಜನರು ಮಾಡಿದಂತಹ ಅನೇಕ ಪಾಪಗಳು ನಾಶವಾಗುತ್ತವೆ ಎಂಬುವ ಹಿನ್ನೆಲೆಯಲ್ಲಿ ಈ ರಂಗೋಲಿಯನ್ನು ಬಿಡಿಸುತ್ತಿದ್ದರು. ವಿಶೇಷವಾಗಿ ಜನರಲ್ಲಿ ರಂಗೋಲಿ ಬಿಡಿಸುವುದರಿಂದ ಮನೆಗೆ ಬಂದವವರೆಲ್ಲರೂ ದೇವರ ಸ್ವರೂಪದಲ್ಲಿದ್ದು ಅವರು ನಮ್ಮ ಮನೆಯ

೧೨. Indian Antiquary, P-237, Vol-32

೧೩. ಡಾ. ಎಸ್. ಸಿ. ಪಾಟೀಲ : ಕರ್ನಾಟಕ ಜನಪದ ಚಿತ್ರಕಲೆ, ಪುಟ–೨೨೭

ಅಂಗಳದ ರಂಗೋಲಿ ತುಳಿದು ಬಂದರೆ ಶುಭಕರ ಎಂಬ ನಂಬಿಕೆ ಇಂದಿಗೂ ನಮ್ಮಲ್ಲಿದೆ. ಆದರೆ ಆಧುನಿಕ ಕಾಲದಲ್ಲಿ ಈಗಿನ ಹೆಣ್ಣು ಮಕ್ಕಳು ಸೌಂದರ್ಯದ ಹಿನ್ನೆಲೆಯಲ್ಲಿ ರಂಗೋಲಿ ಹಾಕುವುದನ್ನು ಕಾಣುತ್ತೇವೆ.

ರಂಗೋಲಿಯಲ್ಲಿ ಹಲವು ಭಾಗಗಳನ್ನಾಗಿ ವಿಂಗಡಿಸಿದ್ದಾರೆ.

೧. ನಿತ್ಯದ ರಂಗೋಲಿ

೨. ಹಬ್ಬ ಹರಿದಿನಗಳ ರಂಗೋಲಿ

೩. ಸ್ಪರ್ಧಾ ರಂಗೋಲಿ

೪. ಶುಭ ಕಾರ್ಯಗಳ ರಂಗೋಲಿ

೫. ಒಕ್ಕಲುತನದಲ್ಲಿ ರಾಶಿ ಪೂಜೆ ರಂಗೋಲಿ

೬. ಸಮಾಧಿಯಲ್ಲಿ ರಂಗೋಲಿ

**೧. ನಿತ್ಯದ ರಂಗೋಲಿ**

ಪ್ರತಿ ದಿನ ನಸುಕಿನಲ್ಲಿ ನಮ್ಮ ತಾಯಂದಿರು ಎದ್ದು ಮನೆ ಅಂಗಳ ಗೂಡಿಸಿ ಸಾರಿಸಿ ಯಾವುದಾದರೂ ಒಂದು ತರಹದ ಚಿತ್ರವನ್ನು ರಂಗೋಲಿಯಲ್ಲಿ ಹಾಕುತ್ತಿದ್ದರು. ಪ್ರತಿದಿನ ಹಾಕುವ ರಂಗೋಲಿಗಳಲ್ಲಿ ಹೆಚ್ಚು ಸಮಯ ಸಿಕ್ಕರೆ ಕಲಾತ್ಮಕವಾದ ವಿನ್ಯಾಸಗಳನ್ನು ಹಾಕುತ್ತಾರೆ. ರಂಗೋಲಿಯಾಕುವುದಕ್ಕೆ ಸಮಯವಿಲ್ಲದ ಸಂದರ್ಭದಲ್ಲಿ ಸಣ್ಣ ಸಣ್ಣದಾದಂತಹ ಸುಳುವುಗಳನ್ನು ಚಿತ್ರಿಸುತ್ತಾರೆ. ಪ್ರಸ್ತುತ ಸಂದರ್ಭದಲ್ಲಿ ರಂಗೋಲಿ ಎನ್ನುವುದು ಸೌಂದರ್ಯ ದೃಷಿವಿಯಿಂದಾದರೂ ಕಡಿಮೆಯಾಗುತ್ತಿರುವುದನ್ನು ಕಾಣುತ್ತೇವೆ.

**೨. ಹಬ್ಬ ಹರಿದಿನಗಳಲ್ಲಿ ರಂಗೋಲಿ**

ಹಬ್ಬ-ಹರಿದಿನಗಳಲ್ಲಿ ನಮ್ಮ ಜನಪದ ತಾಯಂದಿರು ಆಯಾ ಹಬ್ಬಗಳಲ್ಲಿನ ಪೌರಾಣಿಕ ಕಥೆಗಳ ಹಿನ್ನೆಲೆಯಲ್ಲಿ ರಂಗೋಲಿಯನ್ನು ರಚಿಸುವುದನ್ನು ಕಾಣುತ್ತೇವೆ. ಮಣ್ಣೆತ್ತಿನ ಅಮವಾಸೆ ದಿನ ಬಸವಣ್ಣನ ಚಿತ್ರವನ್ನು ನಾಗರ ಪಂಚಮಿ ದಿನ ನಾಗಪ್ಪನನ್ನು ಗಣಪತಿಯ ಹಬ್ಬದಂದು ಗಣಪತಿಯನ್ನು ಜೋಕುಮಾರನ ಹಬ್ಬದಂದು ಜೋಕುಮಾರನನ್ನು ಬನ್ನಿ ಮುಡಿಯುವ ಹಬ್ಬದಂದು ಶಕ್ತಿ ದೇವತೆಯ ಚಿತ್ರ ದೀಪಾವಳಿ ದಿನದಂದು ಪಾಂಡವರ ದೀಪ, ಗೌರಿ ಹುಣ್ಣಿಮೆ ದಿನದಂದು ಗಂಗೆ, ಗೌರಿ, ಶಿವ, ಆಯಾ ಹುಣ್ಣಿಮೆಗಳಂದು ಚಂದ್ರನ ಇಲ್ಲವೇ ಸ್ಥಳೀಯ ದೇವರುಗಳ ಚಿತ್ರಗಳು ಶಿವರಾತ್ರಿಯಂದು ಶಿವನ ಹೋಳಿ ಕಾಮಣ್ಣರ ಚಿತ್ರಗಳನ್ನು ರಂಗೋಲಿಯಲ್ಲಿ ಬಣ್ಣ ಬಣ್ಣಗಳಿಂದ ಬಿಡಿಸಿ ಮನೆಗೆ ಬರುವವರ ಮನೆ ಮುಂದೆ ಹೋಗುವವರ ಮನಸ್ಸಿಗೆ ಸಂತೋಷವಾಗುವಂತೆ ರಚಿಸಿರುತ್ತಾರೆ.

**೩. ಸ್ಪರ್ಧಾ ರಂಗೋಲಿ**

ರಾಷ್ಟ್ರೀಯ ಹಬ್ಬಗಳ ಸಂದರ್ಭದಲ್ಲಿ ಸ್ವಾತಂತ್ರ್ಯೋತ್ಸವ ದಿನ ಸ್ವಾತಂತ್ರ್ಯ ಹೋರಾಟಗಾರರ ಚಿತ್ರಗಳು ಮತ್ತು ಸ್ವಾತಂತ್ರ್ಯಕ್ಕಾಗಿ ಹೋರಾಡಿದಂತಹ ಹಲವಾರು ಗಣ್ಯರುಗಳ ಚಿತ್ರಗಳನ್ನು ಇಲ್ಲಿ ರಚಿಸಲಾಗುತ್ತದೆ.

**೪. ಶುಭ ಕಾರ್ಯಗಳ ರಂಗೋಲಿ**

ಮನೆಗಳಲ್ಲಿ ಯಾವುದೇ ಒಂದು ಶುಭ ಕಾರ್ಯಗಳು ನಡೆಯುವಂತಹ ಸಂದರ್ಭದಲ್ಲಿ ಆಯಾ ಕಾರ್ಯಗಳಿಗನುಸಾರವಾಗಿ ಆ ಕಾರ್ಯಗಳಿಗೆ ಸಂಬಂಧಿಸಿದಂತೆ ವಿವಿಧ ಚಿತ್ರಗಳನ್ನು ಈ ರಂಗೋಲಿಯ ಮೂಲಕ ವ್ಯಕ್ತಪಡಿಸುತ್ತಾರೆ. ಇದಲ್ಲದೇ ಜಾತ್ರೆಗಳಲ್ಲಿ ಮತ್ತು ಉತ್ಸವಗಳಲ್ಲಿ ಆಯಾ ದೇವರ ಮತ್ತು ಮಠಾಧೀಶರುಗಳ ಚಿತ್ರಗಳನ್ನು ರಂಗೋಲಿಯ ರೂಪದಲ್ಲಿ ರಚನೆ ಮಾಡುವುದನ್ನು ಕಾಣುತ್ತೇವೆ.

**೫. ಒಕ್ಕಲುತನದ ಸಂದರ್ಭದಲ್ಲಿ ರಂಗೋಲಿ**

ನಮ್ಮ ರೈತರು ಕಣ ಮಾಡುವ ಮೊದಲು ಕಣ ಮಾಡುವ ಹೊಲದ ಮಣ್ಣು ತೆಗೆದು ತಿಳಿ ಮಣ್ಣಿನ ಮೇಲೆ ನೀರು ಹೊಡೆದು ದನ ಕರುಗಳಿಂದ ತುಳಿಸಿ ಪಾಲಿಸಿ ಕಣ ಮಾಡುತ್ತಾರೆ. ಹಾಗೆ ತೆಗೆದ ಮಣ್ಣನ್ನು ಮೂರು ದಾರಿ ಕೊಡುವಲ್ಲಾಗಲಿ ಇಲ್ಲವೆ ಕಣದ ಪಕ್ಕದ ದಾರಿಯಲ್ಲಿ ಅಡ್ಡಲಾಗಿ ಈ ಕಣದ ಹೊಲದ ಮಣ್ಣನ್ನೇ ಬುಟ್ಟಿಯಲ್ಲಿ ತಂದು ಅಡ್ಡಲಾಗಿ ಹಾಕುತ್ತಿದ್ದರು. ಇದನ್ನು ನೋಡಿದ ಆಯಾಗಾರರು ಪಕ್ಕದಲ್ಲೇ ಕಣ ಇದೆ ಎಂದು ಅಲ್ಲಿಗೆ ಹೋಗಿ ವರ್ಷದ ಧಾನ್ಯದ ಕಾಳು ಕಡಿ ತರಲು ಬೇಕೆಂದು ಹೋಗುತ್ತಿದ್ದರು. ಇನ್ನು ತೋರಿದ ರಾಶಿ ಸಣ್ಣದ ಬಳಿಕ ರಾಶಿ ಪೂಜೆ ಮಾಡುವಾಗ ಈ ರಾಶಿಗೆ ಕಣ್ಣಿನ ನೆದೆರು ಹತ್ತಬಾರದೆಂದು ಜೋಳದ ಕಂಕಿಗಳನ್ನು ಸುಟ್ಟು ಅದರ ಕರಿಬಂಟನನ್ನು ಮತ್ತು ಬೂದಿಯನ್ನು ಬಳಸಿಕೊಂಡು ಈ ರಾಶಿಗೆ ಸುತ್ತಲೂ ದೇವರುಗಳ ರಂಗೋಲಿ ಚಿತ್ರಗಳನ್ನು ಬಿಡಿಸುತ್ತಿದ್ದರು.

**೬. ಸಮಾಧಿಯಲ್ಲಿ ರಂಗೋಲಿ**

ಮಾನವ ಸತ್ತಾಗ ಆತನ ಅಂತ್ಯಕ್ರಿಯೆಗೆ ಕುಣಿ ತೆಗೆಯುತ್ತಾರೆ. ಈ ಕುಣಿಯ ಸುತ್ತೆಲ್ಲ ಶಿವನ ದೀಪದ ಬಸವಣ್ಣನ ಪ್ರಾದೇಶಿಕವಾಗಿ ಆ ದೇವರುಗಳ ಚಿತ್ರಗಳನ್ನು ರಂಗೋಲಿ ಪುಡಿಯಿಂದ ಬಿಡಿಸುತ್ತಾರೆ. ಕುಣಿಗಳ ಅಕ್ಕ ಪಕ್ಕ ದೀಪ ಹಚ್ಚಿಡುತ್ತಾರೆ. ಹೀಗೆ ರಂಗೋಲಿ ಕಲೆ ಸಮಾಧಿಯಲ್ಲಿ ಜೀವಂತಿಕೆಯಲ್ಲೂ ಮಾನಸಿಕ ನೆಮ್ಮದಿಯಲ್ಲೂ ನಮ್ಮೊಂದಿಗೆ ಬೆಳೆದು ಬಂದ ಕಲೆಯಾಗಿದೆ.[೧೪]

೧೪. ಪ್ರಜಾವಾಣಿ ಮೆಟ್ರೋ, ೬ ಫೆಬ್ರವರಿ ೨೦೧೩, ಪುಟ-೩

ವಿಶೇಷವಾಗಿ ಧಾರವಾಡ ಜಿಲ್ಲೆಯ ಕೃಷಿ ಪ್ರಧಾನವಾದ ಜಿಲ್ಲೆಯಾಗಿದೆ. ಕೃಷಿಯಲ್ಲಿ ತೊಡಗಿದ ಜನರು ಜನಪದ ಕಲೆಯನ್ನು ಉಳಿಸಿಕೊಂಡ ಬರುತ್ತಿದ್ದಾರೆ. ಕೆಲ ಆಚರಣೆಗಳು, ನೇರವಾಗಿ ಜನರನ್ನು ಕಲೆ ಮತ್ತು ಸಂಪ್ರದಾಯವನ್ನು ಒಟ್ಟಿಗೆ ನಡೆಸಲು ಅನುಕೂಲ ಮಾಡಿಕೊಡುತ್ತವೆ. ಇಲ್ಲಿಯ ರಂಗೋಲಿಯು ಇಂದಿಗೂ ಕೂಡ ತನ್ನ ಹಳೆಯ ಸಾಂಪ್ರದಾಯಿಕ ನೆಲೆಯಲ್ಲಿಯೆ ದಿನನಿತ್ಯವು ರಚನೆಗೊಳ್ಳುತ್ತದೆ. ಜನರು ಆಧುನಿಕ ಕಲೆಯತ್ತ ಒಲವು ತೋರಿದರೂ ರಂಗೋಲಿಯ ವಿಷಯ ಬಂದಾಗ ಮಾತ್ರ ಹಳೆಯ ಮತ್ತು ಜನಪದ ರೀತಿಯಲ್ಲಿ ರಂಗೋಲಿ ರಚಿಸುವುದು ಇಲ್ಲಿನ ವಿಶೇಷವಾಗಿದೆ.

ಸಿದ್ಧಾರೂಢರ ಮಠದಲ್ಲಿ ನಡೆಯುವ ಎಲ್ಲಾ ವಿಶೇಷ ಕಾರ್ಯಕ್ರಮದಲ್ಲಿ ರಂಗೋಲಿಯ ಒಂದು ಭಾಗವಾಗಿರುತ್ತದೆ. ಮಠಸ್ವಾಮಿಗಳ ಭಾವ ಚಿತ್ರಗಳನ್ನು ರಂಗೋಲಿಯಲ್ಲಿ ಬಿಡಿಸಿದರು. ಉಳಿದೆಡೆ ಸಾಂಪ್ರದಾಯಿಕ ಚುಕ್ಕೆ ಮತ್ತು ಚುಕ್ಕೆ ರಹಿತ ರಂಗೋಲಿಯ ಹಿನ್ನೆಲೆಯಿಂದ ಪೂರ್ಣಗೊಳಿಸುತ್ತಾರೆ. ರಂಗೋಲಿ ಹಾಕಲು ಹೊಸ ಹೊಸ ಪರಿಕರಗಳನ್ನು ಕಲಾವಿದರೇ ಕಂಡುಹಿಡಿದಿದ್ದಾರೆ. ಹುಬ್ಬಳ್ಳಿಯ ಶ್ರೀ ದಿನೇಶ ಚಿಲ್ಲಾಳರು ಕುಡಿಯುವ ನೀರಿನ ಬಾಟಲಿಯ ಮುಚ್ಚಳಕ್ಕೆ ರಂಧ್ರವನ್ನು ಕೊರೆದು ಅದರಲ್ಲಿ ರಂಗೋಲಿಯನ್ನು ತುಂಬಿ ಅದನ್ನು ಬಳಪದಂತೆ ಮಾಡಿಕೊಂಡು ರಂಗೋಲಿಯನ್ನು ರಚಿಸುತ್ತಾರೆ.

ಸಿದ್ಧಾರೂಢರ ಮಠದ ಆವರಣವನ್ನೆಲ್ಲ ರಂಗೋಲಿಯ ವಿವಿಧ ಬಳ್ಳಿ, ಗಿಡ, ಹೂವು ನಕ್ಷೆಗಳಿಂದ ಸಿಂಗರಿಸಿ ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಧಾರವಾಡ ಜಿಲ್ಲೆಯಲ್ಲಿ ಶ್ರಾವಣದ ಮಾಸದಲ್ಲಿ ಎಲ್ಲ ಮಠ ದೇವಸ್ಥಾನಗಳಲ್ಲಿ ಮಹಿಳೆ ಪುರುಷರು, ಮಕ್ಕಳು ದೇವರಿಗೆ ತಮ್ಮ ಸೇವೆಯನ್ನು ಸಲ್ಲಿಸಲು ರಂಗೋಲಿಯನ್ನು ಮಾಧ್ಯಮವಾಗಿಸಿಕೊಳ್ಳುತ್ತಾರೆ. ತಮ್ಮ ಅನುಕೂಲಕ್ಕೆ ತಕ್ಕಂತೆ ಒಂದು ಈ ಸ್ಥಳಗಳಲ್ಲಿ ರಂಗೋಲಿ ಹಾಕಿ ತೃಪ್ತರಾಗುತ್ತಾರೆ. ಈ ಆಚರಣೆಗಳು ಇಲ್ಲಿ ವಿಶೇಷವಾಗಿ ನಡೆಯುತ್ತವೆ. ರಂಗೋಲಿಯನ್ನು ಆಧುನಿಕ ಕಾಲದ ಹೆಣ್ಣುಮಕ್ಕಳು ರಂಗೋಲಿ ಪುಡಿಯಿಂದ ಅಷ್ಟೇ ಅಲ್ಲದೇ ಹೂವು, ಹಣ್ಣು, ಬೇರೆ ಬೇರೆ ವಸ್ತುಗಳಿಂದ ಬಳಸಿಕೊಂಡು ವಿಶಿಷವಿ ಸಂದರ್ಭದಲ್ಲಿ ಪ್ರದರ್ಶನ ಕಲೆಯಾಗಿ ಬೆಳೆಸುತ್ತಿದ್ದಾರೆ. ಒಟ್ಟಾರೆಯಾಗಿ ಹೇಳಬೇಕಾದರೆ ಮಾನವನ ನೆಮ್ಮದಿ, ಸಮೃದ್ಧಿ, ಸೌಭಾಗ್ಯವನ್ನು ತಂದುಕೊಡುವಂತಹ ಕಲೆ ಎಂದರೆ ಈ ರಂಗೋಲಿ ಕಲೆಯಾಗಿದೆ.

**ಮೆಹಂದಿ ಅಥವಾ ಮದರಂಗಿ ಚಿತ್ರಕಲೆ**

"ಮದರಂಗಿಯ ಪ್ರಾಚೀನ ಉಲ್ಲೇಖಗಳು ಕ್ರಿ.ಶ.೩ನೆಯ ಶತಮಾನದ ಸುಶ್ರುತ ಸಂಹಿತಾ ಗ್ರಂಥದಲ್ಲಿ ಕಂಡುಬರುವ ಹರೀತಕೀಚೂರ್ಣಂ ಅರಿಷ್ಟಪತ್ರಂ ಚೂತತ್ವಚಂ ದಾಡಿಂಪುಷ್ಪವ್ವಂತಕಂ

ಪತ್ರಂ ಚ ದದ್ಯಾತ್ ಮದಯಂತಿ ಕಾಯಾಲೋಪೋ ಅಂಗರಾಗೋನರದೇವ ಯೋಗ್ಯಾಹ[೧೫] ಈ ಶ್ಲೋಕದಲ್ಲಿ ಅರಳಿ ಕಾಯಿ ಚೂರ್ಣ, ರಿಟ್ಟ ತಪ್ಪಲ ಮಾವಿನ ತೋಟಿ, ದಾಳಿಂಬೆ ಹೂವಿನ ಕೆಳಭಾಗ ಮದರಂಗಿಯ ತೊಪ್ಪಲುಗಳನ್ನು ಶರೀರಕ್ಕೆ ಹಚ್ಚಿಕೊಳ್ಳುವ ವಿಷಯ ನಿರೂಪಿತವಾಗುತ್ತದೆ. ಆಯುರ್ವೇದಿಯ ಶಬ್ದಕೋಶದಲ್ಲಿ ಅಂಗರಾಗವೆಂದರೆ ಗಾತ್ರ ರಂಜನ ಎಂದರೆ ಅವಯವಗಳಿಗೆ ಬಣ್ಣಕೊಡುವುದು ಎಂಬ ಅರ್ಥವಿದೆ.[೧೬] ಸಂಸ್ಕೃತ ನಿಘಂಟಿನಲ್ಲಿ ಅಂಗರಾಗಕ್ಕೆ Application of Unguments of or of the body cosmaties ಎಂದು ಹೇಳಲಾಗಿದೆ.[೧೭]

ಕನ್ನಡ ಕಾವ್ಯಗಳಲ್ಲಿ ಮದುವೆಯಂತಹ ಸಂದರ್ಭಗಳಲ್ಲಿ ವಧುವಿನ ಅಲಂಕಾರ ಮಾಡಿದ ವರ್ಣನೆಯಲ್ಲಿ ಮದರಂಗಿಯನ್ನು ಹೋಲುವ ವಿವರ ಬರುತ್ತದೆ. ಪಂಪನ ಆದಿಪುರಾಣದಲ್ಲಿ ರಾಜಕುಮಾರಿ ಶ್ರೀಮತಿಯನ್ನು ಅಲಂಕರಿಸಿದ ವಿವರ ಹೀಗಿದೆ. ಕತ್ತುರಿಯೇಳ್ ಅಂಟಿದ ಪರಿಜಿಯಂ ಪರಿಜೆಯಾಲ್ ಪರಿಜಿಯಂ ಪಡೆದ ಮರವಟ್ಟಿಯಂ ಮರವಟ್ಟಿಯೋಳ್ ಒಡುಬಟ್ಟು ವಿಪುಳ ಕಪೋಳ ತಳ ಲಿಖಿತ ವಿಚಿತ್ರ ಪತ್ರ ಲೇಖಯಂ[೧೮] ಇಲ್ಲಿ ಪಂಪ ವ್ಯಕ್ತಪಡಿಸುವ ಕಪೋಳತಳ ಲಿಖಿತ ವಿಚಿತ್ರ ಪತ್ರಲೇಖಿಯಂ ಎಂಬವು ಮದರಂಗಿ ಚಿತ್ರಕಲೆಯನ್ನು ಕುರಿತು ಹೇಳುತ್ತದೆ.

ಮದರಂಗಿ ಎಂಬ ಒಂದು ಕಲೆಯ ಸೌಂದರ್ಯದ ಹಿನ್ನೆಲೆಯಲ್ಲಿ ಆಧುನಿಕ ಕಾಲದಲ್ಲಿ ಹೇರಳವಾಗಿ ಬೆಳೆಯುತ್ತಿದೆ. ಪ್ರತಿಯೊಬ್ಬ ಹೆಣ್ಣು ಮಕ್ಕಳು ಹೆಚ್ಚಾಗಿ ಮದರಂಗಿಯ ಹಚ್ಚಿಕೊಳ್ಳುತ್ತಾರೆ. ಅದೇ ಪ್ರಸ್ತುತ ಸಂದರ್ಭದಲ್ಲಿ ಗಂಡಸರು ಕೂಡಾ ಮದರಂಗಿಯನ್ನು ಹಚ್ಚಿಕೊಳ್ಳುವುದನ್ನು ನೋಡುತ್ತೇವೆ. ಮದರಂಗಿಯನ್ನು ಮದುವೆಯ ಸಂದರ್ಭದಲ್ಲಿ ಹೆಣ್ಣು ಮತ್ತು ಗಂಡಿಗೆ ಹಲವು ವಿನ್ಯಾಸಗಳೊಳಗೊಂಡ ಮದರಂಗಿಯನ್ನು ಹಚ್ಚುತ್ತಾರೆ.

**ಮದರಂಗಿಯ ಚಿತ್ರ ವಿನ್ಯಾಸಗಳ ವರ್ಗೀಕರಣ**

ದಕ್ಷಿಣ ಭಾರತದಲ್ಲಿ ಜನಪದ ಕಲೆಯಾಗಿ ಪರಿಗಣಿತವಾಗುವ ಮದರಂಗಿಯ ಚಿತ್ರಕಲೆ ಇನ್ನೂ ತನಕ ಅಧ್ಯಯನದ ವಿಷಯವಾಗಿ ಅಭ್ಯಸಿಸಲ್ಪಟ್ಟಿಲ್ಲ. ಮದರಂಗಿಯ ಚಿತ್ರಕಲೆಯನ್ನು ಅಧ್ಯಯನದ ದೃಷಿವಿಯಿಂದ ಧಾರ್ಮಿಕ ಧಾರ್ಮಿಕೇತರದ ಮದರಂಗಿಯ ಚಿತ್ರಕಲೆಯೆಂದು ವಿಂಗಡಿಸಬಹುದಾಗಿದೆ. ಅದರಲ್ಲಿಯೇ ಸ್ತ್ರೀ ಪುರುಷರ ವರ್ಗೀಕರಣವನ್ನು ಮಾಡಿಕೊಳ್ಳಬಹುದು. ಈ ವರ್ಗೀಕರಣವನ್ನು ವಿವರವಾಗಿ ಹೀಗೆ ರೇಖಿಸಬಹುದಾಗಿದೆ. ಮದರಂಗಿ ಕಲೆಯಲ್ಲಿ ಧಾರ್ಮಿಕ ಚಿತ್ರವಿನ್ಯಾಸ ಹಾಗೂ ಧಾರ್ಮಿಕೇತರ ಚಿತ್ರವಿನ್ಯಾಸಗಳಿವೆ. ಧಾರ್ಮಿಕ ಚಿತ್ರವಿನ್ಯಾಸದಲ್ಲಿ ಸ್ತ್ರೀಯರ

೧೫. ಜೆ.ಟಿ.ಆಚಾರ್ಯ (ಸಂ) : ಸುಶ್ರುತ ಸಂಹಿತ ಚಿಕಿತ್ಸಾಸ್ಥಾನ (ಸಂಸ್ಕೃತ), ಅ – ೨೫, ಶೋಕ್ಲ – ೪೩

೧೬. ವೇಣಿ ಮಾಧವ ಶಾಸ್ತ್ರಿ ಮತ್ತು ಎನ್.ಎಚ್.ಜೋಶಿ (ಸಂ) : ಆಯುರ್ವೇದಿಯ ಶಬ್ದಕೋಶ, ಪುಟ – ೧೫

೧೭. ಶ್ರೀಧರ ಮೂರ್ತಿ : ೬೪ ಕಲೆಗಳು, ಪುಟ – ೧೦

೧೮. ಕೆ.ಜಿ.ಕುಂದಣಗಾರ (ಸಂ) : ಆದಿಪುರಾಣ (೪ – ೪೧)

ಚಿತ್ರ, ಪುರುಷರ ಚಿತ್ರ, ಮದುವೆ ಹಾಗೂ ಉತ್ಸವದ ಚಿತ್ರಗಳಿವೆ. ಧಾರ್ಮಿಕೇತರ ಚಿತ್ರವಿನ್ಯಾಸದಲ್ಲಿ ಭೂಮಿತಿ ಆಕೃತಿ ಪ್ರಧಾನ ಚಿತ್ರಗಳಿವೆ.

**ಮದರಂಗಿಯ ವಿವಿಧ ಚಿತ್ರವಿನ್ಯಾಸಗಳು**

ಮದರಂಗಿಯ ಚಿತ್ರವಿನ್ಯಾಸಗಳು ಕಂದು ಬಣ್ಣದಲ್ಲಿರುತ್ತದೆ. ಮದರಂಗಿಯ ಬಣ್ಣದಲ್ಲಿ ಮಿಶ್ರಣಗೊಂಡ ಅಂಶಗಳು ಚರ್ಮದಲ್ಲಿ ಚೆನ್ನಾಗಿ ಬೆರೆತುಕೊಂಡು ಹಲವು ದಿನಗಳವರೆಗೆ ಚಿತ್ರಗಳು ಮಾಸದಂತೆ ಉಳಿದುಕೊಳ್ಳುತ್ತವೆ. ಇಲ್ಲಿ ಮಾನವಾಕೃತಿಗಳಿಗೆ ಪ್ರಾಮುಖ್ಯತೆಯಿರುವುದಿಲ್ಲ. ಬಳ್ಳಿ, ಹೂವಿನ, ಭೂಮಿತಿ, ನಕ್ಷೆ ಆಕೃತಿ ಪ್ರಧಾನವಾದ ಸುಳುವುಗಳೊಂದಿಗೆ ಸ್ವಸ್ತಿಕ, ಶ್ರೀ, ಶುಭ, ಲಾಭ, ಓಂ, ಸೂರ್ಯ, ಅರ್ಧಚಂದ್ರ ಇತ್ಯಾದಿ ಸಂಕೇತಗಳನ್ನು ಹೆಚ್ಚು ಚಿತ್ರಿಸಿರುತ್ತಾರೆ. ವಿವಿಧ ಆಭರಣಗಳ ಹೂವಿನ ಸಾಲುಗಳ ಸಾಂಕೇತಿಕ ಮಾದರಿಯ ಚಿತ್ರವಿನ್ಯಾಸಗಳೂ ಮದರಂಗಿ ಕಲೆಯಲ್ಲಿ ಕಾಣಸಿಗುತ್ತವೆ.

**ಮದರಂಗಿಯ ಉಪಯುಕ್ತತೆ**

"ಮದರಂಗಿಯನ್ನು ಸೌಂದರ್ಯದ ಸಾಧನವಾಗಿ ಕಂಡಂತೆ ವೈದ್ಯಕೀಯ ಚಿಕಿತ್ಸೆಗಾಗಿಯೂ ಬಳಸುತ್ತಾರೆ. ಒಲವಿನ ಪ್ರತೀಕವಾದ ಮದರಂಗಿ ವಿಷ್ಣು ಪ್ರಕೃತಿಯವರಿಗೆ ತಂಪು ನೀಡುತ್ತದೆ. ಇದು ಚರ್ಮರೋಗಗಳ ನಿವಾರಣೆ ಮಾಡುವುದಲ್ಲದೆ ಶರೀರದ ಸ್ವಾಸ್ಥ್ಯವನ್ನು ಕಾಪಾಡುತ್ತದೆ. ಚರ್ಮರೋಗಗಳು ವಿಶೇಷವಾಗಿ ಅಂಗೈ ಅಂಗಾಲಿನಿಂದ ಹರಡುತ್ತದಂತೆ. ಹೀಗಾಗಿ ಅಂಗೈ ಮತ್ತು ಅಂಗಾಲಿಗೆ ಮದರಂಗಿ ಹಚ್ಚಿಕೊಳ್ಳುವುದರಿಂದ ಬಿಳಪು ತೊನ್ನು, ಕುಷ್ಠರೋಗಗಳು ದೂರವಾಗುವುದೆಂದು ಹೇಳುತ್ತಾರೆ. ಮದರಂಗಿಯನ್ನು ತಲೆಗೂ ಹಚ್ಚುತ್ತಾರೆ. ಇದರಿಂದ ತಲೆ ತಂಪಾಗುತ್ತದೆ. ಕಣ್ಣು ಉರಿ ಕೂಡ ಕಡಿಮೆಯಾಗುತ್ತದೆ. ಕೂದಲು ಉದುರುವುದು ನಿಲ್ಲುತ್ತದೆ. ಸಂತಾನವಿಲ್ಲದ ಸ್ತ್ರೀಯರಿಗೆ ಸಂತಾನ ಭಾಗ್ಯ ಲಭಿಸುತ್ತದೆಯೆಂಬ ವಿಶ್ವಾಸ ಕೂಡ ಜನಪದರಲ್ಲಿದೆ."[೧೯]

ಮದರಂಗಿ ಕಲೆ ಇಂದು ನಗರದ ಒಂದು ವ್ಯಾಪಾರಿ ಮನೋಭಾವದ ಒಂದು ವಸ್ತುವಾಗಿದೆ. ಅದನ್ನು ಜನ ಜನಪದದ ಕಲೆಯಾಗಿ ಸೌಭಾಗ್ಯದ ಸಂಕೇತವಾಗಿ ನೋಡದೆ ಅದನ್ನು ಕೇವಲ ಫ್ಯಾಶನ್ ಆಗಿ ಬಳಸುತ್ತಿರುವುದರಿಂದ ನಿಜಕ್ಕೂ ದುಖಃದ ಸಂಗತಿ ಆದರೆ ಒಂದೆಡೆ ಈ ಕಲೆಯ ಅಂತರಾಷ್ಟ್ರೀಯ ಮಟ್ಟದಲ್ಲೂ ಮಿಂಚುತ್ತಿದೆ. ಇದು ಫ್ಯಾಶನ್ ಯುಗದ ಒಂದು ರೂಪವಾಗಿದೆ.

ಮದರಂಗಿಯು ಪ್ರೀತಿ ಪ್ರೇಮದ ಸಂಕೇತವಾಗಿ ಸೌಭಾಗ್ಯದ ಕುರುಹಾಗಿ ಜನಪದ ಕಲೆಯಾಗಿ ಬೆಳೆಯುಬೇಕು. ಅದು ಇಂದು ಬ್ಯೂಟಿಪಾರ್ಲರ್‌ಗಳಲ್ಲಿ ದೊರೆಯುವ

೧೯. ಡಾ.ಎಸ್.ಸಿ.ಪಾಟೀಲ : ಕರ್ನಾಟಕ ಜನಪದ ಚಿತ್ರಕಲೆ, ಪುಟ-೧೨೩

ಸಾಧನವಾಗುತಿರುವುದು ದುಃಖದ ಸಂಗತಿ, ತನ್ನ ವರ್ಣಮಯ ಬಣ್ಣವನ್ನು ಕಳೆದುಕೊಳ್ಳುವ ಅವಸಾನದ ಅಂಚಿನಲ್ಲಿ ಈ ಕಲೆ ಇದೆ ಎನ್ನಬಹುದು.

**ಈ. ಹಚ್ಚೆ ಚಿತ್ರಕಲೆ**

ಪ್ರಾಚೀನ ಕಾಲದಿಂದಲೂ ಗ್ರಾಮೀಣ ಭಾಗದಲ್ಲಿ ಈ ಹಚ್ಚೆ ಹೆಚ್ಚು ಪ್ರಸಿದ್ಧಿಯನ್ನು ಪಡೆದ ಕಲೆಯಾಗಿದೆ. ಆದಿವಾಸಿಗಳು ಹೆಚ್ಚಾಗಿ ಈ ಹಚ್ಚೆಯನ್ನು ತಮ್ಮ ಮೈ ಮೇಲೆ ಹಾಕಿಸಿಕೊಳ್ಳುತ್ತಿದ್ದರು. ಜಗತ್ತಿನಲ್ಲಿ ಎಲ್ಲಾ ಭಾಗಗಳಲ್ಲೂ ಹಚ್ಚೆ ಹೊಯ್ಯಿಸಿಕೊಳ್ಳುವ ಸಂಪ್ರದಾಯವಿದೆ. ಈ ಜನಪದ ಕಲೆ ಜನರ ಬದುಕಿನಲ್ಲಿ ಹಲವು ನಂಬಿಕೆಗಳಂತೆ ಬೆಳೆದುಬಂದಿದೆ. ಇಂದು ಹಚ್ಚೆ ಸಂಪ್ರದಾಯ ಕ್ರಮೇಣ ಮಾಯವಾಗುತ್ತಿದೆ. ಆದರೂ ಜನಪದ ವೈಶಿಷ್ಟ್ಯ ಕಲೆಯಾಗಿ ಆಧುನಿಕತೆಯ ಸ್ವರೂಪ ಪಡೆದುಕೊಂಡಿದೆ. ಪ್ರಾದೇಶಿಕವಾಗಿ ಈ ಕಲೆಯನ್ನು ಅನೇಕ ಹೆಸರುಗಳಿಂದ ಕಲೆಯುವ ರೂಢಿ ಇದೆ. ಹಚ್ಚೆ ಅಚ್ಚೆ, ಹಂಚೆ, ಹಚ್ಚೆ, ಹಣಚೆ ಎಂಬ ಪದಗಳ ಆಯಾ ಪ್ರಾದೇಶಿಕ ಹಿನ್ನೆಲೆಯಲ್ಲಿ ಬಳಕೆಯಾಗುತ್ತದೆ. ಅಣೇ ಎಂದರೆ ಲೇಪಿಸು ಅಥವಾ ಅಂಟು ಎಂಬ ಅರ್ಥ ನಿಷ್ಪನ್ನುಗೊಳ್ಳುತ್ತದೆ ಎಂದು ಕೆಲವರ ಅಭಿಪ್ರಾಯ. ಈ ಅಣಚೆ ಎಂಬ ಪದಕ್ಕೆ ನಮ್ಮ ಪೂರ್ವಿಕರು ಮುತ್ತೈದೆ ಸುಮಂಗಲೆ, ಗರತಿ ಎನ್ನುವ ವಿಶಾಲ ಅರ್ಥವನ್ನು ನೀಡಿದ್ದಾರೆ.

ಕರ್ನಾಟಕದಲ್ಲಿ ಹಚ್ಚೆ ಹಾಕುವ ಕೆಲವೊಂದು ಸಮುದಾಯಗಳಿವೆ. ಕೊರವಂಜಿ, ಕೊರವರು, ಜೋಗಿಗಳು ಮುಂತಾದ ಜನ ಸಮುದಾಯಗಳು ಹಳ್ಳಿ ಹಳ್ಳಿಗೆ ತೆರಳಿ ಮೇಲೆ ಪ್ರಸ್ತಾಪಿಸಿದ ಮಾದರಿಯಲ್ಲಿ ಹಚ್ಚೆಯನ್ನು ಹಾಕುತ್ತಾರೆ. ಅವಸಾನದ ಅಂಚಿನಲ್ಲಿ ತಲುಪಿದ ಸಾಂಪ್ರದಾಯಿಕ ಕಲೆಗಳಲ್ಲಿ ಸಾಂಪ್ರದಾಯಿಕ ಹಚ್ಚೆ ಕಲೆಯು ಒಂದಾಗಿದೆ ಎನ್ನಬಹುದು. ಸಾಂಪ್ರದಾಯಿಕ ಹಚ್ಚೆಯನ್ನು ನಾವು ಕೇವಲ ಹಿರಿಯ ಮಹಿಳೆಯರ ಕೈಗಳಲ್ಲಿ ಮಾತ್ರ ಕಾಣಬಹುದು. ಇಂದಿನ ಮಹಿಳೆಯರು ಕೂಡ ಹಚ್ಚೆಯನ್ನು ಕೇವಲ ಸಾಂಕೇತಿಕ ರೂಪದಲ್ಲಿ ಬಳಸುತ್ತಿದ್ದಾರೆ. ಹಣೆಯ ಮೇಲೊಂದು ಬೊಟ್ಟು, ಕೈ ಬೆರಳ ಮೇಲೊಂದು ಬೊಟ್ಟಾಗಿ ಹಚ್ಚೆ ಕಲೆಯು ತನ್ನ ಕುರುಹನ್ನು ಉಳಿಸಿಕೊಂಡಿವೆ. ಇಂದಿನ ಗ್ರಾಮೀಣ ಮಹಿಳೆಯರು ಕೂಡ ಈ ರೀತಿಯನ್ನು ಅನುಸರಿಸುತ್ತಿದ್ದಾರೆ.

ಧಾರವಾಡ ಜಿಲ್ಲೆಯ ಹಚ್ಚೆಯು ಕೂಡಾ ಇದಕ್ಕೆ ಹೊರತಾಗಿಲ್ಲ. ಗ್ರಾಮೀಣ ಭಾಗದ ಮಹಿಳೆಯರು ಸಾಂಕೇತಿಕವಾಗಿ ಹಚ್ಚೆಯನ್ನು ಹಾಕಿಸಿಕೊಳ್ಳುತ್ತಿದ್ದಾರೆ. ಇಲ್ಲವೇ ಕೈ ಮೇಲೆ ಒಂದು ಚಿಕ್ಕನಕ್ಷೆ, ಹೂವು ಅಥವಾ ಪತಿ, ಗೆಳತಿ, ದೇವರ ಹೆಸರುಗಳನ್ನು ಬರೆಯಿಸಿಕೊಂಡಿರುವುದು ಗಮನಕ್ಕೆ ಬರುತ್ತದೆ. ಗ್ರಾಮೀಣ ಭಾಗದ ಪುರುಷರು ಕೈ ಮೇಲೆ ಹೆಸರನ್ನು ನಕ್ಷೆಯನ್ನು ಅಥವಾ ಹನುಮನ ಚಿತ್ರವನ್ನು ಬರೆಯಿಸಿಕೊಂಡಿರುವುದು ಕಂಡುಬರುತ್ತದೆ. ನಗರದ ಯುವಕ ಯುವತಿಯರು ಹೊಸ ಬದಲಾವಣೆಯ ಆಚರಣೆಯಲ್ಲಿ ಟ್ಯಾಟು ಹಾಕಿಸಿಕೊಳ್ಳಲು ಮುಗಿಬೀಳುತ್ತಿದ್ದಾರೆ. ಇಂದಿನವರೆಗೆ

ಚಿತ್ರ ವಿಚಿತ್ರ ರೀತಿಯ ನಕ್ಷೆ, ಚೇಳು,ಏಡಿಯ ವಿನ್ಯಾಸದ ಯಾವುದೇ ಲೋಗೋಗಳನ್ನು ಮುಖ ಕೈ, ಕಾಲು ಬೆನ್ನ ಮೇಲೆ ಹಾಕಿಸಿಕೊಳ್ಳುತ್ತಿದ್ದಾರೆ. ರೀತಿ ನೀತಿ ಬದಲಾದರು ಒಂದು ವಿಷಯ ಮುಖ್ಯವಾಗುತ್ತದೆ. ಆಚರಣೆಯ ಮೂಲ ಉದ್ದೇಶವು ಇಲ್ಲಿ ಬದಲಾಗದೆ, ಹೊಸತನದಲ್ಲಿ ಹಳೆಯ ಆಚರಣೆ ತನ್ನ ಸ್ವರೂಪವನ್ನು ಬದಲಾಯಿಸಿ ಒಂದು ಹೊಸ ಪರಂಪರೆಯನ್ನು ಕಟ್ಟಿಕೊಟ್ಟಿವೆ. ಸಾಂಪ್ರದಾಯಿಕ ಹಚ್ಚೆ ಕಾಣದಾದರೂ ಟ್ಯಾಟು ಎನ್ನುವ ಹೊಸ ವಿನ್ಯಾಸದ ಹೊಸ ಕಲೆಯೆಂದು ಬೆಳೆಯುವ ಹಂತದಲ್ಲಿದೆ ಎನ್ನಬಹುದು.

**ಉ. ಕಲಘಟಗಿಯ ಚಿತ್ರಕಲೆ**

ಧಾರವಾಡದಿಂದ ಪಶ್ಚಿಮಕ್ಕೆ ಸುಮಾರು ೩೦ ಕಿ.ಮೀ ದೂರದಲ್ಲಿರುವ ಒಂದು ತಾಲ್ಲೂಕು ಸ್ಥಳ ಕಲಘಟಗಿ. ಇದು ಮಲೆನಾಡು ಮತ್ತು ಬೆಳವಲನಾಡು ಎರಡು ಪ್ರದೇಶದ ಭೂಗುಣ ಮತ್ತು ಹವಾಗುಣವನ್ನು ಹೊಂದಿದೆ. ವ್ಯವಸಾಯವೇ ಇಲ್ಲಿಯ ಮುಖ್ಯ ಉದ್ಯೋಗ, ಕಲಘಟಗಿ ಜನಪದ ಕಲೆಯನ್ನು ಬೆಳೆಸಿಕೊಂಡು ಬಂದ ನಾಡು. ಮುಖ್ಯವಾಗಿ ಕಲಘಟಗಿಯಲ್ಲಿಯ ವಿಶೇಷತೆ ಎಂದರೆ ತೊಟ್ಟಿಲು ತಯಾರಿಕೆ, ಕಿಟ್ಟದ ಗೊಂಬೆಗಳ ಆಟಿಕೆಗಳ ತಯಾರಿಕೆ, ಬಣ್ಣ ಲೇಪನದ ವಿಶೇಷ ತಂತ್ರದಿಂದಲೇ ವಿಖ್ಯಾತಿಯನ್ನು ಪಡೆದಿದೆ. ಈ ಪ್ರಾಂತದಲ್ಲಿ ದೊರೆಯುವ ನೈಸರ್ಗಿಕವಾದ ಕಲ್ಲು ಮಣ್ಣ, ಗಿಡಮೂಲಿಕೆಗಳಿಂದ ಸ್ವತಃ ಬಣ್ಣಗಳನ್ನು ತಯಾರಿಸಿಕೊಳ್ಳುತ್ತಾರೆ. ಈ ಸಂಪ್ರದಾಯ ಹಿಂದಿನಿಂದ ಬೆಳೆದು ಬಂದಿದ್ದು. ಈಗಲೂ ಈ ಸಂಪ್ರದಾಯವನ್ನು ಮುಂದುವರಿಸಿಕೊಂಡು ಬಂದಿದ್ದಾರೆ.

ಕಲಘಟಗಿಯಲ್ಲಿ ಈಗ ಕೇವಲ ಎರಡು ಮನೆತನಗಳು ಮಾತ್ರ ಉಳಿದುಕೊಂಡಿವೆ. ಇದೇ ಸಾಹುಕಾರ ಮನೆತನಗಳು, ಈ ಮನೆತನದಲ್ಲಿ ಈಗ ದಿ.ಪಿರಾಜಿ ಸಾಹುಕಾರ ಇವರ ಮಕ್ಕಳಾದ ಗಂಗಾಧರ ಪಿರಾಜಿ ಸಾಹುಕಾರ ಇವರು ಮತ್ತು ಇವರ ಮಕ್ಕಳು ಈಗ ಈ ಕಲೆಯನ್ನು ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಇವರು ಕಲೆಯನ್ನು ನಂಬಿ ಬದುಕುತ್ತಿರುವ ಜನ. ಇವರು ಅನೇಕ ಸಂಪ್ರದಾಯಗಳನ್ನು ಈಗಲೂ ತುಂಬಾ ಕಟ್ಟುನಿಟ್ಟಿನಿಂದ ನಡೆಯಿಸಿಕೊಂಡು ಬರುತ್ತಿದ್ದಾರೆ. ಇವರು ಮೂಲವಾಗಿ ದೇವಿಯ ಆರಾಧಕರು. ದೇವರ ಮತ್ತು ದೇವಸ್ಥಾನಕ್ಕೆ ಸಂಬಂಧಿಸಿದ ಪರಿಕರಗಳನ್ನು ತಯಾರಿಸುವಾಗ ಅತ್ಯಂತ ಶ್ರದ್ಧೆ ಮತ್ತು ಮಡಿವಂತಿಕೆಯಿಂದ ದೇವರಪಲ್ಲಕ್ಕಿ ದೇವರ ಪೀಠಗಳು, ದೇವರ ಮೂರ್ತಿಗಳನ್ನು ತಯಾರಿಸುತ್ತಾರೆ. ದೇವಸ್ಥಾನದ ಗೋಡೆ ಚಿತ್ರಗಳನ್ನು ಬರೆಯುವಾಗ ಸ್ನಾನ ಕರ್ಮಾದಿಗಳನ್ನು ಮುಗಿಸಿ ದೇವಿಯ ಉಪಾಸನೆ ಪೂಜೆಯೊಂದಿಗೆ ಕೆಲಸವನ್ನು ಆರಂಭಿಸಿ, ಕೆಲಸ ಪೂರ್ತಿಯಾಗುವವರೆಗೂ ನಂದಾದೀಪವನ್ನು ಹಚ್ಚಿಕೊಂಡು ಕೆಲಸದಲ್ಲಿ ತೊಡಗುತ್ತಾರೆ. ಈ ಸಮಯದಲ್ಲಿ ತಮ್ಮ ತಿಂಡಿ ಊಟವನ್ನು ಸಹ

ತಾವೇ ತಯಾರಿಸಿಕೊಳ್ಳುತ್ತಾರೆ. ಈ ದೇವರ ಮೂರ್ತಿಗಳ ರಚೆಯ ಕಾರ್ಯ ಮುಗಿಯುವವರೆಗೆ ಈ ಮೂರ್ತಿಗಳನ್ನು ತಮ್ಮನ್ನು ಬಿಟ್ಟು ಇತರರಿಗೆ ನೋಡಲು ಅವಕಾಶ ಕೊಡುವುದಿಲ್ಲ.

ಕಲಘಟಗಿಯ ಕಲೆಯ ಇನ್ನೊಂದು ವಿಶೇಷತೆ ಎಂದರೆ ಇವರು ಹೆಚ್ಚಾಗಿ ತೊಟ್ಟಿಲನ್ನು ರಚಿಸುವಲ್ಲಿ ಸಿದ್ಧಹಸ್ತರು. ಇವರು ಹೇಳುವ ಪ್ರಕಾರ ತೊಟ್ಟಿಲು ಎಂದರೆ ಇವರಿಗೆ ತಾಯಿ ಇದ್ದಂತೆ. ಇವರು ಈ ಕಲೆಯಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡಿದ್ದಾರೆ. ತೂಗುಮಂಚ, ಉಯ್ಯಾಲೆ, ಟೀಪಾಯಿ ಸೋಪಾಸೆಟ್, ಸ್ಟ್ಯಾಂಡಿಂಗ್ ತೊಟ್ಟಿಲು, ಆಟಿಕೆ ಸಾಮಾನುಗಳು. ದೇವರ ಪಲ್ಲಕ್ಕಿ, ಉತ್ಸವ ಮೂರ್ತಿಗಳು, ಸಹ ಮಾಡಿದ್ದಾರೆ. ಈ ಎಲ್ಲ ವಸ್ತುಗಳ ಮೇಲೆ ಇವರು ಜನಪದ ಪ್ರಕಾರದ ಚಿತ್ರಗಳನ್ನು ಕೆಂಪು ಬಣ್ಣದ ಹಿನ್ನೆಲೆಯಲ್ಲಿಯೇ ರಚನೆ ಮಾಡಿದ್ದಾರೆ. ವಸ್ತುಗಳು ಯಾವುದಾದರು ಅದರ ಮೇಲೆ ರಚನೆಯಾಗುವ ವಸ್ತುವಿಷಯಗಳು ಜನಪದ ಸಂಪ್ರದಾಯಕ್ಕೆ ಕೂಡಿದ ರಚನೆಗಳಾಗಿವೆ.

ಈ ಕಲೆಯ ಇನ್ನೊಂದು ವಿಶೇಷತೆ ಎಂದರೆ ಇವರು ಈ ಕಲೆಗೆ ಬಳಸುವ ಬಣ್ಣ ಮತ್ತು ಕುಂಚಗಳನ್ನು ತಾವೇ ಸ್ವತಃ ಕಲಾವಿದರೆ ತಯಾರಿಸಿಕೊಳ್ಳುತ್ತಾರೆ. ಬಣ್ಣವನ್ನು ತಯಾರಿಸಲು ಇವರು ಅರಗು, ರಾಳ, ರೇವಚಿನ್ನಿ, ಗುಬ್ಬಿರಾಳ, ಹಿರೆಡಾಕು, ಮುಂತಾದವುಗಳನ್ನು ತಂದು ಇವುಗಳನ್ನು ಪುಡಿ ವರ್ಣಗಳಲ್ಲಿ ಬಳಸಿ ಕರಗಿಸುವ ಮೂಲಕ ಈ ಅರಗಿನ ಬಣ್ಣವನ್ನು ತಯಾರಿಸಿಕೊಳುತ್ತಾರೆ. ಈ ಬಣ್ಣಕ್ಕೆ ಇವರು ಲಾಕ್ ಬಣ್ಣ ಎಂದು ಕೂಡ ಕರೆಯುತ್ತಾರೆ. ಅರಗನ್ನು ಎರಡು ಕಬ್ಬಿಣದ ಸಲಾಖೆಗೆ ಅಂಟಿಸಿ ಅದನ್ನು ಬೆಂಕಿಯಲ್ಲಿ ನೇರವಾಗಿ ಹಿಡಿದು ಕಾಯಿಸುತ್ತಾರೆ. ಅದು ಬೆಂಕಿಯಲ್ಲಿ ಬಿಸಿ ಆದಾಗ ಅದಕ್ಕೆ ಸ್ವಲ್ಪ ಪ್ರಮಾಣದ ರಾಳವನ್ನು ಮಿಶ್ರಣ ಮಾಡಿಕೊಂಡು ಅದನ್ನು ಮತ್ತೆ ಬೆಂಕಿಯಲ್ಲಿ ಹದವಾಗಿ ಕಾಯಿಸಿ ಅರಗನ್ನು ತಯಾರಿಸಿಕೊಳ್ಳುತ್ತಾರೆ. ಈ ಮಿಶ್ರಣ ಬಿಸಿಯಾಗಿರುವಾಗಲೇ ಇದಕ್ಕೆ ಪುಡಿ ಬಣ್ಣದಲ್ಲಿ ಬೆಂಕಿಯಲ್ಲಿ ಕಾಯಿಸಿ ಅದನ್ನು ಮಿಶ್ರಣ ಮಾಡುವರು. ಹೀಗೆ ಬಣ್ಣಗಳನ್ನು ತಾವೇ ತಯಾರಿಸಿಕೊಳ್ಳುವರು. ಈ ಬಣ್ಣಗಳು ಸುಮಾರು ೬೦ ವರ್ಷ ಬಾಳಿಕೆ ಬರುತ್ತವೆ.

**ಜಲವರ್ಣ ಬಣ್ಣಗಳು ಪುಡಿ ಬಣ್ಣ**

"ಈ ವರ್ಣಗಳು ಕಲಾವಿದರಿಗೆ ನೇರವಾಗಿ ಮಾರ್ಕೆಟ್‌ನಿಂದ ದೊರೆಯುತ್ತವೆ. ಇಲ್ಲಿ ದೊರೆಯುವಂತಹ ಕೆಲವೇ ವರ್ಣಗಳು ಹಸಿರು, ನೀಲಿ, ಬಿಳಿ, ಹಳದಿ, ಕರಿ, ಕೆಂಪು, ಕೇಸರಿ ವರ್ಣಗಳಾಗಿವೆ. ಇಂತಹ ವರ್ಣಗಳಿಗೆ ನೀರನ್ನು ಮಿಶ್ರಣ ಮಾಡಿ ಸೋಸಿದ ಜಾಲೀಯ ಅಂಟನ್ನು ಪ್ರಮಾಣಕ್ಕೆ ತಕ್ಕಂತೆ ಮಿಶ್ರಣ ಮಾಡಿ ಇದನ್ನು ದೇವಿಯ ಮೂರ್ತಿ, ತೊಟ್ಟಲು, ಕುರ್ಚಿ, ಟೀಪಾಯಿ, ಸೋಪಾ ಇನ್ನು ಮುಂತಾದ ಪಿಠೋಪಕರಣಗಳಿಗೆ ಬಳಸುವುದಾಗಿದೆ. ನಂತರ ಈ ಚಿತ್ರದ

ಮೇಲೆ ವಾರ್ನಿಸ್ ಎಣ್ಣೆಯನ್ನು ಬಳಸುತ್ತಾರೆ. ಈ ವಸ್ತುಗಳು ಅರವತ್ತು ವರ್ಷಗಳ ಕಾಲ ಬಾಳಿಕೆ ಬರುತ್ತವೆ ಎನ್ನುತ್ತಾರೆ."[೨೦]

**ಕುಂಚಗಳ ತಯಾರಿಕೆ**

ಚಿತ್ರಗಳಿಗೆ ಬಣ್ಣ ಬಳಿಯಲು ಕುಂಚಗಳನ್ನು ತಾವೇ ಸಿದ್ದಪಡಿಸಿಕೊಳ್ಳುತ್ತಾರೆ. ಇದಕ್ಕಾಗಿ ಇವರು ಆಡಿನ, ಅಳಿಲಿನ ಕೂದಲುಗಳನ್ನು ಕುಂಚಗಳ ತಯಾರಿಕೆಗೆ ಉಪಯೋಗಿಸುತ್ತಾರೆ. ಆಡಿನ ಕೂದಲಿಂದ ತಯಾರಿಸಿದ ಕುಂಚದಿಂದ ಬಣ್ಣ ತುಂಬಲಿಕ್ಕೆ ಉಪಯೋಗಿಸುತ್ತಾರೆ. ಅಳಿಲಿನ ಕೂದಲಿಂದ ತಯಾರಿಸಿದ ಕುಂಚಗಳಿಂದ ಸೂಕ್ಷ್ಮಚಿತ್ರಗಳನ್ನು ಅಲ್ಲದೇ ಇದರಿಂದ ಚಿತ್ರದ ಹೊರರೇಖೆಯನ್ನು ಎಳೆಯುವುದಕ್ಕೆ ಬಳಸುತ್ತಾರೆ.

**ದೇವಿಗೆ ಬಳಸುವ ಬಣ್ಣಗಳು**

ಇಲ್ಲಿ ವಿಶೇಷವಾಗಿ ಗ್ರಾಮದೇವಿಯ ಮೂರ್ತಿಗಳಿಗೆ ಬಳಸುವ ಬಣ್ಣಗಳು ಕುತೂಹಲವುಂಟು ಮಾಡುತ್ತವೆ. ಮಾರ್ಕೆಟ್‌ನಲ್ಲಿ ಸಿಗುವ ತವರ ಮತ್ತು ಮೀನಸರಿ ಎರಡನ್ನು ಪ್ರಮಾಣಕ್ಕೆ ತಕ್ಕಂತೆ ಕೂಡಿಸಿ ಕಟ್ಟಿ ಮೃದುವಾಗಿಸಿಕೊಂಡು ನಂತರ ಇದಕ್ಕೆ ನೀರನ್ನು ಮಿಶ್ರಣ ಮಾಡಿ ಗ್ರಾಮದೇವತೆಯ ಯಾವ ಭಾಗಕ್ಕೆ ಬೆಳ್ಳಿಯ ವರ್ಣವಾಗುತ್ತದೆ. ಹಾಗೆ ಬಂಗಾರ ವರ್ಣಬೇಕಾದಲ್ಲಿ ಒಪ್ಪ ಹಾಕಿದ ಬೆಳ್ಳಿಯ ವರ್ಣದ ಮೇಲೆ ಕೇಸರಿಪುಡಿ ವರ್ಣದಲ್ಲಿ ಪ್ರೆಂಚ್ ಪಾಲೀಶನ್ನು ಮಿಶ್ರಣ ಮಾಡಿ ಲೇಪಿಸುವುದರಿಂದ ಬಂಗಾರ ವರ್ಣ ಬರುತ್ತದೆ. ಹಾಗೆ ಬೇರೆ ಬೇರೆ ವರ್ಣಗಳು ಬೇಕಾದಲ್ಲಿ ಪವಡಿ ಜಲವರ್ಣ ಬಳಕೆಯಂತೆ ತಯಾರಿಸಿ ದೇವಿಯ ಮೂರ್ತಿಗಳಿಗೆ ಉಪಯೋಗಿಸಿ ಮೇಲೆ ರೋಗಂಧ ಎಣ್ಣೆಯನ್ನು ಲೇಪಿಸಲಾಗುತ್ತದೆ.

**ರೋಗಂಧ ಎಣ್ಣೆ**

ಈ ಕಲಾವಿದರು ಅರಗಿನ ಬಣ್ಣ ಮತ್ತು ಜಲವರ್ಣಗಳ ಮೇಲೆ ಬಳಸುವ ಎಣ್ಣೆಯೇ ರೋಗಂಧ ಆಗಿದೆ. ಇದರ ತಯಾರಿಕೆಯ ವಿಧಾನ ನೋಡುವುದಾದರೆ ಮೊದಲು ಮಣ್ಣಿನ ಮಡಿಕೆಯ ಅರ್ಧಭಾಗ ಒಟ್ಟಿಯಲ್ಲಿ ಹುದುಗಿಸಿ ನಂತರ ಬೆಂಕಿಯನ್ನು ಹಚ್ಚಿ ಅದರಲ್ಲಿ ಅಗಸೆ ಎಣ್ಣೆಯನ್ನು ಹಾಕಿ ಅದು ಕುದಿಯುವ ಹಂತದಲ್ಲಿ ಬಿಳಿರಾಳ, ಪತ್ರಿ, ಅರಗುಗಳನ್ನು ಹಾಕಿ ಕುದಿಸಿ ನಂತರ ಇದು ಆನದಂತೆ ಆದಾಗ ಇದರ ಹದವನ್ನು ತಿಳಿಯಲು ಕಡ್ಡಿಯನ್ನು ಅದರಲ್ಲಿ ಅದ್ದಿ ಮೇಲೆತ್ತಿದ್ದರೆ, ದ್ರವವು ಅದರ ಗುಂಟ ಬರುತ್ತದೆ. ನಂತರ ಈ ಎಣ್ಣೆಯನ್ನು ಜಲವರ್ಣ ಮತ್ತು ಅರಗು ಬಣ್ಣದ ಮೇಲೆ ಲೇಪಿಸುತ್ತಾರೆ. ಈ ಲೇಪನದಿಂದ ಚಿತ್ರಗಳು ಚೆನ್ನಾಗಿ ಹೊಳೆಯುತ್ತವೆ. ಮತ್ತು ನಾಶವಾಗುವುದಿಲ್ಲ ಎಂದು ಹೇಳುತ್ತಾರೆ.

---

೨೦. ಸಂದರ್ಶನ, ಗಂಗಾಧರ ಪಿರಾಜಿ ಸಾಹುಕಾರ, ಕಲಘಟಗಿ, ೧೧ ಮಾರ್ಚ್ ೨೦೧೩

**ಕೇದಗೆಯ ಎಲೆ**

"ಪೀಠೋಪಕರಣಗಳಿಗೆ ಅತಿ ಅವಶ್ಯವಾಗಿ ಬಳಸುವ ಈ ಕೇದಿಗೆಯ ಎಲೆಯನ್ನು ತಂದು ಬಿಸಿಲಿನಲ್ಲಿ ಒಣಗಿಸಿ ನಂತರ ಮುಳ್ಳುಗಳನ್ನು ತೆಗೆದು ಸುರಳಿಯಾಕಾರ ಸುತ್ತಿ ಇಡುತ್ತಾರೆ. ಬಳಸುವ ಸಮಯದಲ್ಲಿ ಈ ಎಲೆಯನ್ನು ಗಾಡಕ್ಕೆ ಹಾಕಿದ ಕಟ್ಟಿಗೆಯು ತಿರುಗುತ್ತಿರುವಾಗ ಬಣ್ಣಗಳನ್ನು ಲೇಪಿಸಿ ಆ ಮೇಲೆ ಈ ಬಣ್ಣಗಳ ಮೇಲೆ ಕೇದಿಗೆಯ ಎಲೆಯನ್ನು ಒಳ್ಳೇ ಎಣ್ಣೆಯಲ್ಲಿ ಅದ್ದಿ ಕೈಯಿಂದ ಜೋರಾಗಿ ಹಿಡಿಯುತ್ತಾರೆ. ಈ ರೀತಿಯಾಗಿ ಹಿಡಿಯುವುದರಿಂದ ವರ್ಣಗಳು ನುಣುಪಾಗಿ ಹೊಳೆಯುತ್ತವೆ."[೨೧] ಕಲಘಟಗಿಯ ತೊಟ್ಟಿಲು ರಚನೆ ಮಾಡಲು ಸಾಗವಾನಿ, ಮಾವು, ಶಿವಣ್ಣಿ ಕಟ್ಟಿಗೆಗಳನ್ನು ಬಳಸುತ್ತಾರೆ. ಹಿಂದಿನ ಕಾಲದಲ್ಲಿ ಶ್ರೀಗಂಧ ಕಟ್ಟಿಗೆಯಿಂದ ಸಹ ತೊಟ್ಟಿಲು ರಚಿಸಿದ್ದಾಗಿ ಕಲಾವಿದರು ಹೇಳುತ್ತಾರೆ. ತೊಟ್ಟಿಲು ರಚನೆಯಲ್ಲಿ ಬರೆಯುವ ಚಿತ್ರಗಳು ಅವರವರ ಅಭಿರುಚಿಯ ಹಿನ್ನೆಲೆಯಲ್ಲಿಯೂ ರಚನೆಗೊಳ್ಳುತ್ತವೆ. ಕೆಲವರು ತಮ್ಮ ತಮ್ಮ ಮನೆ ದೇವರ ಚಿತ್ರಗಳನ್ನು ರಚಿಸಿ ಕೊಡಲು ಹೇಳಿದಾಗ ಅವರ ಬೇಡಿಕೆಗೆ ಅನುಸಾರವಾಗಿ ತಮ್ಮ ಮೂಲ ಕಲೆಯ ಅಂದರೆ ಜನಪದ ಕಲೆಯನ್ನು ಅಳವಡಿಸಿ ಚಿತ್ರಗಳನ್ನು ರಚಿಸಿಕೊಡುತ್ತಾರೆ. ಈ ಚಿತ್ರಗಳ ವಿಶೇಷತೆ ಎಂದರೇ ಪ್ರಥಮ ವರ್ಗದ ಬಣ್ಣಗಳನ್ನು ಬಳಸುತ್ತಾರೆ. ಕೆಂಪು, ಹಳದಿ, ದಟ್ಟವರ್ಣಗಳೆ ಇಲ್ಲಿ ಮುಖ್ಯವಾಗುತ್ತವೆ.

**ಕಲಘಟಗಿಯ ಕಲೆಯ ವಸ್ತು-ವಿಷಯ**

ರಾಮಾಯಣ, ಮಹಾಭಾರತ, ದೇವದೇವತೆಗಳ, ಪೌರಾಣಿಕ ಕಥನಗಳು, ಲಕ್ಷ್ಮೀ, ಸರಸ್ವತಿ, ಶ್ರೀರಾಮನಪಟ್ಟಾಭಿಷೇಕ, ಆಂಜನೇಯ, ಕೃಷ್ಣನ ಬಾಲಲೀಲೆಗಳು, ಇವುಗಳ ಮಧ್ಯೆ ಪಟ್ಟಿಕೆಗಳಲ್ಲಿ ಹೂವು, ಬಳ್ಳಿ ಎಲೆಯಾಕಾರದ ಸುಳಿವುಗಳ ಚಿತ್ರಗಳನ್ನು ರಚಿಸುತ್ತಾರೆ. ಈ ಚಿತ್ರಗಳಲ್ಲಿ ಬರುವ ಎಲ್ಲಾ ಆಕೃತಿಗಳು ಪ್ರಮಾಣಬದ್ಧವಾಗಿರುತ್ತವೆ. ಧಾರವಾಡವು ಕನ್ನಡ ಸಾಹಿತ್ಯ ಕೃಷಿಯಲ್ಲಿ ಮೇಲ್ಮೈಯನ್ನು ಸಾಧಿಸಿದ, ಕವಿ ಕಾವ್ಯ ಸಂಪದದ ಜೇನ್ಗೂಡೆನಿಸಿದ್ದು, ಧಾರವಾಡದ ಸಿರಿಸಂಪದ ಚಿನ್ನ, ಬೆಳ್ಳಿಯಲ್ಲಿ, ಅದು ಜನಪದದ ಶಾಶ್ವತ ಕನ್ನಡ ಸಾಹಿತ್ಯ ಸಂಸ್ಕೃತಿ ಸಂಪದ ಧಾರವಾಡ ಯಾವ ಸಾಮ್ರಾಜ್ಯದ ರಾಜಧಾನಿಯೂ ಅಲ್ಲ, ಅದು ಈ ನಾಡ ಜನಮನ ಹೃದಯ ರೂಪಿಸಿಕೊಂಡು ಬೆಳೆಸಿದ ಸಂಸ್ಕೃತಿ ಎಂಬ ಭಾವನೆ ಸಾಧನ ಅನುಷಾವಿನದಿಂದ ಪಾವನಗೊಂಡ ಜನಪದದ ಬದುಕಿನ ಬಾಳಿನ ರಾಜಧಾನಿ. ಧಾರವಾಡವು ಒಂದು ವಿಶೇಷವಾದ ಜನಪದ ಕಂಪನ್ನು ಕಟ್ಟಿಕೊಡುವ ನಗರ. ಇಲ್ಲಿನ ಜನರು ಜನಪದ ಕಲೆಗೆ ವಿಶೇಷವಾದ ಸ್ಥಾನ ಮಾನ ಕೊಟ್ಟಿದ್ದಾರೆ. ಜನಪದ ಕಲೆಗಳು ಹುಟ್ಟಿಕೊಂಡ ಸಂದರ್ಭಗಳು ಅವು ಬೆಳೆದು ಬಂದ ಪರಂಪರೆಯಲ್ಲಿ ಕೆಲವು ಪ್ರಮುಖ ಕಲೆಗಳನ್ನು ಮಾತ್ರ ಇಲ್ಲಿ ಅಧ್ಯಯನ ಮಾಡಲಾಗಿದೆ.

---

೨೧. ಶಶಿಕಾಂತ ಬಸರೀಕಟ್ಟೆ, : ಕಲಘಗಿಯ ಕಲೆ, ಪುಟ-೩೧

□□□

# ರಂಗೋಲಿಯ ಚಿತ್ರಗಳು



ಅಕ್ಕಿಯಿಂದ ಬರೆದ ಮಂಡಲದ ರಂಗೋಲಿ ಚಿತ್ರ





ಹೂವಿನಿಂದ ಬರೆದ ರಂಗೋಲಿ ಚಿತ್ರ



ಚುಕ್ಕಿ ರಂಗೋಲಿ ಚಿತ್ರ




ಸಂಸ್ಕಾರ ಭಾರತಿ ರಂಗೋಲಿ ಚಿತ್ರ



ಅಕ್ಕಿಹಿಟ್ಟಿನಿಂದ ಬರೆದ ರಂಗೋಲಿ ಚಿತ್ರ



ಪ್ರಭಾವಳಿ



ರತಿಕಾಮಣ್ಣ ಶಿಲ್ಪ



ದೇವರ ಮುಖವಾಡಗಳು



ಪಲ್ಲಕ್ಕಿ

## ಅಧ್ಯಾಯ – ೪

# ಧಾರವಾಡ ಜಿಲ್ಲೆಯ ಭಿತ್ತಿಚಿತ್ರಕಲೆ

ಕಲಾವಿಹೀನಃ ಪಶುಸಮಾನಃ ಎಂದು ನಮ್ಮ ಪೂರ್ವಜರು ಹೇಳಿದ್ದಾರೆ. ಪಶು ಮಾನವರಾದಿಯಾಗಿ ಎಲ್ಲರನ್ನು ಬಂಧಿಸಿ ಮಾನಸಿಕವಾಗಿ ಮುದಗೊಳಿಸುವ ಶಕ್ತಿ ಕಲೆಗಿದೆ. ಚಿತ್ರ, ಶಿಲ್ಪ, ನೃತ್ಯ ಸಂಗೀತ ಮತ್ತು ನಾಟಕ ಎಂಬ ಈ ಐದು ಪ್ರಕಾರದ ಲಲಿತ ಕಲೆಗಳು ಎಂತಹ ಕಠೋರ ತತ್ವಗಳನ್ನು ಸುಲಭ ರೂಪದಲ್ಲಿ ಪ್ರತಿಬಿಂಬಿಸಿ ಮನಸ್ಸಿನಾಳದಲ್ಲಿ ದೀರ್ಘಕಾಲ ಉಳಿಯುವಂತೆ ಮಾಡುತ್ತವೆ. ಮನಸ್ಸನ್ನು ಸಕ್ರಿಯಗೊಳಿಸಿ ಚಿತ್ರವನ್ನು ರಂಜಿಸಿ ಒಳಗಣ್ಣನ್ನು ತೆರೆಸಿ ಆತ್ಮದ ಅರಿವನ್ನು ಮೂಡಿಸಿ ವ್ಯಾಗ್ರತೆಯಿಂದ ಏಕಾಗ್ರತೆಗೆ ಈ ಕಲಾಮಾಧ್ಯಮಗಳು ಕೊಂಡುಹೋಗಬಲ್ಲವು. ಭಾರತದಲ್ಲಿ ಕಲೆ ಮೂಲತಃ ರಂಜನೆಯ ವಸ್ತುವಾಗಿ ಬೆಳೆದು ಬಂದಿಲ್ಲ "ಕಲಾ ಸಾಧನೆ ಮೋಕ್ಷ ಸಾಧನೆ" ಎಂಬ ರೂಪದಲ್ಲಿ ಭಾರತೀಯ ಕಲಾ ಪ್ರಕಾರಗಳು ಕ್ರಿಯಾತ್ಮಕವಾಗಿ ಬೆಳೆದು ಬಂದಿವೆ. ಆದ್ದರಿಂದ ಕಲೆಗೂ ಧರ್ಮಕ್ಕೂ ನಿಕಟ ಸಂಪರ್ಕವಿದ್ದು ಎಷ್ಟೋ ವೇಳೆ ಕಲೆಯ ಮೂಲಕ ಧಾರ್ಮಿಕ ಕ್ಷೇತ್ರಕ್ಕೆ ಮಾನವ ವಿಕಾಸ ಸಾಧ್ಯವಾಗಿದೆ. ಈ ರೀತಿಯ ಅವಕಾಶ ಭಕ್ತಿ ಮಾರ್ಗದಿಂದ ಸಾಧ್ಯ ಭಾರತದಾದ್ಯಂತ ಭಕ್ತಿ ಆಂದೋಲನದ ಸಮಯದಲ್ಲಿ ಕಲಾ ಪ್ರಕಾರಗಳು ವೈವಿಧ್ಯಪೂರ್ಣವಾಗಿ ಅವಿಷ್ಕಾರಗಳನ್ನು ಪಡೆದವು."[೧]

ಈ ಕಲೆಗಳ ಒಂದೇ ಉದ್ದೇಶವಾದ ಧರ್ಮದ ಮಾರ್ಗವನ್ನು ಸೂಚಿಸಲು ಮತ್ತು ಧರ್ಮವನ್ನು ಎತ್ತಿಹಿಡಿಯುವುದನ್ನು ಆಧರಿಸಿದ್ದರೂ ತಮ್ಮ ಭಿನ್ನವಾದ ಮಾಧ್ಯಮಗಳ ರೀತಿಗಳಿಂದ

೦೧. ಚಿ. ಶ್ರೀನಿವಾಸರಾಜು (ಸಂ) : ಕರ್ನಾಟಕ ಸಂಗಾತಿ ಪುಟ-೪೨೭

ತಮ್ಮದೇ ಆದ ವಿಭಿನ್ನ ರೀತಿಯ ಅಭಿವ್ಯಕ್ತತೆಯನ್ನು ಪಡೆದಿವೆ. ಈ ಕಲಾ ಮಾಧ್ಯಮಗಳ ವಿಷಯ ವಸ್ತುಗಳು ಭಾರತೀಯ ಧಾರ್ಮಿಕ ಕಾವ್ಯಗಳು ತತ್ವ ಮತ್ತು ವಿಚಾರಗಳನ್ನು ಆಧರಿಸಿ ಆಯಾ ಕಾಲದ ಜನ ಜೀವನಕ್ಕೆ ಹೊಂದಿಕೊಂಡು ರಚಿತವಾಗಿವೆ.[೨]

ಭಾರತೀಯ ಚಿತ್ರಕಲಾ ಪರಂಪರೆಯಲ್ಲಿ ಕರ್ನಾಟಕದ ಭಿತ್ತಿಚಿತ್ರಗಳಿಗೆ ತನ್ನದೇ ಆದ ಮಹತ್ವದ ಸ್ಥಾನವಿದೆ. ಕನ್ನಡ ನಾಡಿನ ಜನತೆ ಭಿತ್ತಿಚಿತ್ರಗಳನ್ನು ರಚಿಸುವ ಮೂಲಕ ಕಲಾಕಾರರಾಗಿ ಭಿತ್ತಿಚಿತ್ರಗಳನ್ನು ಬರೆಯಿಸುವುದರೊಂದಿಗೆ ಕಲಾಪೋಷಕರಾಗಿದ್ದಾರೆ. ಈ ಭಿತ್ತಿಚಿತ್ರ ಪರಂಪರೆ ವ್ಯಕ್ತಿಯಿಂದ ವ್ಯಕ್ತಿಗೆ, ಸಮುದಾಯದಿಂದ ಸಮುದಾಯಕ್ಕೆ ಬೇರೆ ಬೇರೆಯಾಗಿ ಸೃಷ್ಟಿಗೊಂಡಿದೆ. ಪ್ರಾದೇಶಿಕತೆ, ಆ ಪ್ರದೇಶದ ಜನರ ಜೀವನ ವಿಧಾನ, ಆಚಾರ-ವಿಚಾರ, ಧಾರ್ಮಿಕ ನಂಬಿಕೆ ಮುಂತಾದವುಗಳು ಅವರ ಭಿತ್ತಿಚಿತ್ರ ರಚನೆಯ ಮೇಲೆ ಪ್ರಭಾವ ಬೀರಿ ಈ ಪರಂಪರೆ ವೈವಿಧ್ಯಮಯವಾಗಿ ರೂಪುಗೊಳ್ಳಲು ಕಾರಣವಾಗಿವೆ. ಯಾವುದೇ ಕಾಲದ ಭಿತ್ತಿಚಿತ್ರಗಳು ಆಯಾ ಕಾಲದ ಜನಜೀವನದ ವಿವರಗಳನ್ನು ಒಳಗೊಂಡಿರುತ್ತವೆ. ಹಾಗೆಯೇ ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಇತಿಹಾಸವನ್ನು ತಿಳಿಯಲು ಇವು ಮಹತ್ವದ ಆಕರಗಳೂ ಆಗಿವೆ.

ಭಿತ್ತಿಚಿತ್ರಕಲಾ ಪರಂಪರೆಯನ್ನು ನಮ್ಮ ಪೂರ್ವಜರು ಧರ್ಮ ಪ್ರಚಾರದ ಸಾಧನವಾಗಿ, ಸಮಾಜವನ್ನು ರೂಪಿಸುವಲ್ಲಿ, ಮನರಂಜನೆಗಾಗಿ, ವೈಯಕ್ತಿಕ ಭಾವನೆಗಳ ಕಲಾತ್ಮಕ ಅಭಿವ್ಯಕ್ತಿಗಾಗಿ, ರಾಜಕೀಯ ಉದ್ದೇಶಗಳಿಗಾಗಿ ಬಳಸಿಕೊಂಡಿದ್ದಾರೆ. ಧರ್ಮ, ದೇವರು, ಆರಾಧನೆ, ಪಂಥ, ಪಂಗಡ ಹಾಗೂ ಸಾಮಾಜಿಕ ಶ್ರೇಣೀಕರಣ ಸಂಕೀರ್ಣ ಬದುಕುಗಳಲ್ಲದೇ ನಾಡಿನ ಜನರ ಕಲಾಭಿಮಾನ, ಸೌಂದರ್ಯೋಪಾಸನೆಯ ಬೆಳವಣಿಗೆಯಂತಹ ಆಂತರಿಕ ವಿಷಯಗಳು ಈ ಭಿತ್ತಿಚಿತ್ರ ಪರಂಪರೆಯಲ್ಲಿ ಅಡಕಗೊಂಡಿವೆ. ಹಾಗೆಯೇ ಭಿತ್ತಿಚಿತ್ರಗಳು ಸಮಕಾಲೀನ ಜನಜೀವನ, ಸಸ್ಯವರ್ಗ, ಪ್ರಾಣಿವರ್ಗಗಳ ಕುರಿತು ತಿಳಿಸಿಕೊಡುವ ಮಹತ್ವದ ಚಿತ್ರಲಿಪಿಗಳಾಗಿವೆ. ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ರಚನೆಯಾದ ಭಿತ್ತಿಚಿತ್ರಕಲಾ ಶೈಲಿ, ವಿನ್ಯಾಸ ಮತ್ತು ವಸ್ತು ವಿಷಯಗಳು ವೈವಿಧ್ಯತೆಯಿಂದ ಕೂಡಿವೆ. ಈ ವೈವಿಧ್ಯತೆಗೆ ಕರ್ನಾಟಕದ ಸಾಂಸ್ಕೃತಿಕ ಪರಂಪರೆ ಮತ್ತು ಭೌಗೋಳಿಕ ಹಿನ್ನೆಲೆ ಕಾರಣವೆನ್ನಬಹುದು. ಪ್ರಾಗೈತಿಹಾಸಿಕ ಕಾಲ, ಪೂರ್ವಭಾವಿ ಇತಿಹಾಸಕಾಲಗಳಲ್ಲೂ ಇಲ್ಲಿ ಕಲಾ ಚಟುವಟಿಕೆ ನಡೆದಿದೆ[೩] ಎನ್ನುವುದಕ್ಕೆ ಅನೇಕ ನಿದರ್ಶನಗಳ ನಮಗೆ ಕಂಡು ಬರುತ್ತವೆ.

**ಭಿತ್ತಿಚಿತ್ರಕಲೆ**

"ಭಿತ್ತಿಚಿತ್ರವನ್ನು ಆಂಗ್ಲ ಭಾಷೆಯಲ್ಲಿ "Mural Painting" ಎಂದು ಕರೆಯಲಾಗಿದೆ. ಕ್ಯಾಂಬ್ರಿಜ್ ವಿಶ್ವಕೋಶವು ಗೋಡೆಯ ಮೇಲೆ ಬಣ್ಣದಿಂದ ಬರೆದ ಚಿತ್ರ ಭಿತ್ತಿಚಿತ್ರವೆನಿಸಿದರೆ,

೦೨. ಚಿ. ಶ್ರೀನಿವಾಸರಾಜು (ಸಂ) : ಕರ್ನಾಟಕ ಸಂಗಾತಿ, ಪುಟ-೪೨೮

೦೩. ಡಾ. ಎಸ್. ಸಿ. ಪಾಟೀಲ & ಸತ್ಯಾನಂದ ಪಾತ್ರೋಟ (ಸಂ) : ನಿಜದ ನೆಲೆ, ಪುಟ-೪೬೦

ಗೋಡೆಯ ಮೇಲೆ ಕೆತ್ತಿಕೊರೆದು ಅಂಟಿಸಿ ರೂಪಿಸಿದ ಕೃತಿಗಳು ಭಿತ್ತಿಶಿಲ್ಪದ ವ್ಯಾಪ್ತಿಯಲ್ಲಿ ಬರುತ್ತವೆ ಎಂದು ಹೇಳಿದೆ. ಆಕ್ಸ್‌ಫರ್ಡ್ ಶಬ್ದಕೋಶವು ಗೋಡೆ ಮತ್ತು ಮೇಲ್ಛಾವಣಿಗಳ ಮೇಲೆ ರಚನೆಯಾದ ಚಿತ್ರಗಳನ್ನು ಭಿತ್ತಿಚಿತ್ರಗಳೆಂದು ಹೇಳಿದೆ. ಭಾರತೀಯ ಪ್ರಾಚೀನ ಶಿಲ್ಪಶಾಸ್ತ್ರಗಳು ಭಿತ್ತಿಚಿತ್ರವನ್ನು ಕೂಡ ಚಿತ್ರವೆಂದು ಕರೆದಿವೆಯಲ್ಲದೇ ಗೋಡೆ ಮತ್ತು ಛಾವಣಿಗಳ ಮೇಲೆ ಗಾರೆ ಲೇಪನ ಮಾಡಿ ಅದರ ಮೇಲೆ ಚಿತ್ರ ಬರೆಯುವುದನ್ನು ಭಿತ್ತಿಚಿತ್ರವೆಂದು ಪರಿಗಣಿಸಿವೆ. ಭಿತ್ತಿಚಿತ್ರಕಲೆ ಎಂದರೆ ಗೋಡೆ ಮೇಲ್ಛಾವಣಿಗಳಲ್ಲದೇ ಅವುಗಳ ಭಾಗಗಳೇ ಆಗಿರುವ ಮಾಡು, ಕಮಾನು, ಕಂಬ, ತೊಲೆ, ಮುಂತಾದ ವಸ್ತುವಿನ ಭಾಗಗಳಲ್ಲಿ ರಚನೆಯಾಗಿರುವ ಚಿತ್ರಗಳನ್ನು ಭಿತ್ತಿಚಿತ್ರಗಳೆಂದು ಕರೆಯಬಹುದಾಗಿದೆ.”[೪]

ಕರ್ನಾಟಕವು ಸಹಿತ ಶ್ರೀಮಂತವಾದ ಭಿತ್ತಿಚಿತ್ರ ಪರಂಪರೆಯನ್ನು ಹೊಂದಿದೆ. ಪ್ರಾರಂಭಿಕ ಹಂತವನ್ನು ಪ್ರತಿನಿಧಿಸುವ ಪ್ರಾಗೈತಿಹಾಸಿಕ ಗುಹಾ ವರ್ಣಚಿತ್ರಗಳು ಕರ್ನಾಟಕದಲ್ಲಿಯೂ ಹೆಚ್ಚಿನ ಸಂಖ್ಯೆಯಲ್ಲಿವೆ. ಬಾದಾಮಿ, ಐಹೊಳೆ, ರಾಮದುರ್ಗ ಬಳಿಯ ಖಾಜಿನಗುಡ್ಡ, ಹಿರೇಬೆನಕಲ್, ಹಂಪೆ, ಪಿಕ್ಕಿಹಾಳ, ತಾವರಗೆರೆ, ಕೊಪ್ಪಳ ಹೀಗೆ ಉತ್ತರ ಕರ್ನಾಟಕದಾದ್ಯಂತ ಅನೇಕ ಸ್ಥಳಗಳಲ್ಲಿ ಪ್ರಾಗೈತಿಹಾಸಿಕ ಭಿತ್ತಚಿತ್ರಗಳು ರಚನೆಯಾಗಿವೆ. ಶಿಷ್ಟ ಪರಂಪರೆಯ ಭಿತ್ತಿಚಿತ್ರಗಳು ಕರ್ನಾಟಕದಲ್ಲಿ ಮೊದಲ ಬಾರಿಗೆ ಬಾದಾಮಿ ಚಾಲುಕ್ಯರ ಕಾಲದಲ್ಲಿ ಕಂಡುಬರುತ್ತವೆ. ಕ್ರಿ.ಶ.೮ ರಿಂದ ೧೦ನೇ ಶತಮಾನದಲ್ಲಿ ಆಳ್ವಿಕೆ ನಡೆಸಿದ ರಾಷ್ಟ್ರಕೂಟರ ಕಾಲದಲ್ಲಿ ಎಲ್ಲೋರಾ ಗುಹಾಲಯಗಳಲ್ಲಿ ಭಿತ್ತಿಚಿತ್ರ ರಚಿಸಲಾಗಿದೆ.

ರಾಜಮಹಾರಾಜರು ಸಂಸ್ಥಾನಿಕರು ಮಾತ್ರವಲ್ಲದೇ ಮಠಮಾನ್ಯಗಳು ಸಹಿತ ಭಿತ್ತಿಚಿತ್ರಕಲೆಯನ್ನು ಕರ್ನಾಟಕದಲ್ಲಿ ಬೆಳೆಸಿವೆ. ಅದರಲ್ಲಿ “ವೀರಶೈವ ಮಠಗಳ ಪಾತ್ರ ತುಂಬಾ ಮಹತ್ವದಾಗಿದೆ. ಮಠಗಳ ಪೋಷಣೆಯಲ್ಲಿ ರಚನೆಯಾದ ಭಿತ್ತಿಚಿತ್ರಗಳು ಧಾರವಾಡ ಸಮೀಪದ ಅಮ್ಮಿನಭಾವಿಯ ಪಂಚಗೃಹ ಹಿರೇಮಠ, ಮಹಾಲಿಂಗಪುರದ ಮಹಾಲಿಂಗೇಶ್ವರಮಠ, ನವಲಗುಂದದ ವಿರಕ್ತಮಠ ಸುರಪುರದ ಅಣ್ಣಯ್ಯನ ಮಠ, ಅಥಣಿಯ ಗಚ್ಚಿನ ಮಠಗಳಲ್ಲಿ ಕಂಡುಬರುತ್ತವೆ.”[೫]

ಕಲಾಸಕ್ತ ರಾಜರುಗಳು ತಮ್ಮ ಅರಮನೆ ಹಾಗೂ ಅಂಥಃಪುರಗಳನ್ನು ಅಲಂಕರಿಸುತ್ತ ಬಂದಿರುವುದು ನಮಗೆ ಇತಿಹಾಸದುದ್ದಕ್ಕೂ ತಿಳಿದುಬರುತ್ತದೆ. ಅರಮನೆಗಳನ್ನು ಭಿತ್ತಿಚಿತ್ರಗಳಿಂದ ಅಲಂಕರಿಸುವುದು ರಾಮಾಯಣ ಮತ್ತು ಮಹಾಭಾರತ ಕಾಲದಿಂದಲೇ ಪ್ರಚಲಿತದಲ್ಲಿತ್ತೆಂದು ಪುರಾಣಗಳು ಸಾರುತ್ತವೆ. ಪ್ರಾಚೀನ ಕಾಲದ ಅರಮನೆಗಳು ಭಿತ್ತಿಚಿತ್ರಗಳಿಂದ ಕಂಗೊಳಿಸುತ್ತಿದ್ದವು.

೦೪. ಡಾ. ಎಸ್. ಸಿ. ಪಾಟೀಲ & ಸತ್ಯಾನಂದ ಪಾತ್ರೋಟ (ಸಂ) : ನಿಜದ ನೆಲೆ, ಪುಟ-೪೬೧

೦೫. ಅದೇ., ಪುಟ-೪೬೩

ಈ ಅರಮನೆಗಳು ನಿರ್ಮಿಸಲ್ಪಡುತ್ತಿದ್ದುದರಿಂದ ಅವುಗಳು ನಾಶವಾಗಿದ್ದು ಸರ್ವವಿದಿತ, ಕ್ರಿ.ಶ.೧೭-೧೮ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಅನೇಕ ಸಣ್ಣಪುಟ್ಟ ಸಂಸ್ಥಾನಗಳು ಹುಟ್ಟಿಕೊಂಡಿದ್ದು. ಕೆಲಸಂಸ್ಥಾನಿಕರು ತಮ್ಮ ಆಸ್ಥಾನದಲ್ಲಿ ಚಿತ್ರಕಲಾವಿದರಿಗೆ ಆಶ್ರಯವನ್ನು ನೀಡಿದ್ದರಿಂದ ಅರಮನೆಯಲ್ಲಿ ಸಾಕಷ್ಟು ಚಿತ್ರಗಳು ರಚನೆಗೊಂಡಿವೆ.

"ನಾಡಿನ ಕಲೆ ಮತ್ತು ಸಂಸ್ಕೃತಿಗೆ ಮಠಮಾನ್ಯಗಳ ಕೊಡುಗೆ ಅಪಾರವಾದುದು ಯಾವುದೇ ವಿಷಯಗಳನ್ನು ಚಿತ್ರದ ಮುಖಾಂತರ ಹೇಳಿದಾಗ ಅದು ಇನ್ನೂ ಪರಿಣಾಮಕಾರಿಯಾಗುತ್ತದೆ ಎಂಬುದನ್ನು ತಿಳಿದ ಮಠ ಮಾನ್ಯಗಳು ತಮ್ಮ ಧರ್ಮ ಪ್ರಸಾರಕ್ಕಾಗಿ ಚಿತ್ರಕಲೆಯನ್ನು ಬಳಸಿಕೊಂಡವು. ರಾಜ ಮಹಾರಾಜರು ಹಾಗೂ ಅವರ ತರುವಾಯ ನಾಡಿನ ಭಿತ್ತಿಚಿತ್ರ ಪರಂಪರೆಯನ್ನು ಬೆಳೆಸಿದ ಕೀರ್ತಿ ಮಠ ಮಾನ್ಯಗಳದ್ದೇ ಆಗಿದೆ. ಆ ಕಾರಣವಾಗಿಯೇ ಅರಮನೆ ದೇವಾಲಯಗಳನ್ನು ಹೊರತುಪಡಿಸಿ ಹೆಚ್ಚಿನ ಭಿತ್ತಿಚಿತ್ರಗಳು ಕಂಡುಬರುವ ನೆಲೆಗಳೆಂದರೆ ಈ ಮಠ ಮಾನ್ಯಗಳಾಗಿವೆ."[೬]

ಧಾರವಾಡ ಜಿಲ್ಲೆಯಲ್ಲಿ ನಾಲ್ಕು ನೆಲೆಗಳಲ್ಲಿ ಭಿತ್ತಿಚಿತ್ರಗಳಿರುವುದು ಕಂಡುಬಂದಿದ್ದು, ಅವುಗಳು ಈ ಕೆಳಗಿನಂತಿವೆ.

೧. ಅಮ್ಮಿನಭಾವಿ ಪಂಚಗೃಹ ಹಿರೇಮಠದ ಭಿತ್ತಿಚಿತ್ರಗಳು
೨. ಉಪ್ಪಿನ ಬೆಟಗೇರಿಯ ರೇಣುಕಾ ಎಲ್ಲಮ್ಮ ದೇವಸ್ಥಾನದ ಭಿತ್ತಿಚಿತ್ರಗಳು
೩. ಅಣ್ಣಿಗೇರಿ ವಾಡೆಯ ಭಿತ್ತಿಚಿತ್ರಗಳು
೪. ನವಲಗುಂದ ಗವಿಮಠದ ಭಿತ್ತಿಚಿತ್ರಗಳು

**೧. ಅಮ್ಮಿನಭಾವಿ ಮಠದ ಭಿತ್ತಿಚಿತ್ರಗಳು**

ಧಾರವಾಡ ಜಿಲ್ಲೆಯ ಅಮ್ಮಿನಭಾವಿ ಪ್ರಾಚಿನ ಕಾಲದಿಂದಲೂ ಒಂದು ಪ್ರಮುಖ ಸಾಂಸ್ಕೃತಿಕ ಕೇಂದ್ರವಾಗಿತ್ತು. ಇಲ್ಲಿ ದೊರೆತ ಶಾಸನಾಧಾರಗಳು ಇದನ್ನು ಅಗ್ರಹಾರವೆಂದೇ ಹೇಳಿದೆ. ಧಾರವಾಡದಿಂದ ಉತ್ತರಕ್ಕೆ ಸುಮಾರು ೧೫ ಕಿ.ಮೀ ದೂರದಲ್ಲಿರುವ ಅಮ್ಮಿನಭಾವಿ ಸಾಂಸ್ಕೃತಿಕವಾಗಿ ಐತಿಹಾಸಿಕವಾಗಿ ಪ್ರಮುಖ ಸ್ಥಾನ ಪಡೆದುಕೊಂಡಿದೆ.

ಈ ಊರು ಅತಿ ದೊಡ್ಡ ಭಾವಿಯನ್ನು ಹೊಂದಿದ್ದು ಜೈನ ಪಂಥಕ್ಕೆ ಸೇರಿದ ಅಮ್ಮಯನ ಎಂಬ ಮಹಿಳೆ ಈ ಬಾವಿಯನ್ನು ಕಟ್ಟಿಸಿದ ಕಾರಣಕ್ಕಾಗಿ ಇದಕ್ಕೆ 'ಅಮ್ಮನಭಾವಿ' ಎಂದು ಕರೆದು ತರದಲ್ಲಿ ಆ ಬಾವಿಯಿಂದಾಗಿಯೇ ಈ ಊರಿಗೆ ಅಮ್ಮಿನಭಾವಿ ಎಂದು ಹೆಸರು ಬಂದಿದೆ ಎಂಬುದಾಗಿ ಸ್ಥಳೀಯರು ಅಭಿಪ್ರಾಯಪಡುತ್ತಾರೆ. ಈ ಗ್ರಾಮಕ್ಕೆ ಪೂರ್ವದಲ್ಲಿ ಶಿವಪುರ ಎಂದು ಕರೆಯಲ್ಪಡುತ್ತಿದ್ದು. ೧೮೦೦ ವರ್ಷಗಳ ಹಿಂದೆ ಒಂದು ಅಗ್ರಹಾರವಾಗಿತ್ತು. ಆಗ ಇದನ್ನು

೦೬. ಡಾ.ಆರ್.ಗೋಪಾಲ್ (ಸಂ) : ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪುಟ-೧೮೩

ಚಾಂದರಾಜ ಎಂಬ ಪಾಳೇಗಾರನು ಆಳುತ್ತಿದ್ದನೆಂಬ ಇತಿಹಾಸವಿದೆ. ಇನ್ನೊಂದು ನಂಬುಗೆಯ ಪ್ರಕಾರ ಈ ಗ್ರಾಮವು ೪೦೦ ಮಹಾಜನರ ಒಂದು ಅಗ್ರಹಾರವಾಗಿತ್ತು. ಆ ಅಗ್ರಹಾರವನ್ನು ಅಮ್ಮಿನಸಾಬ ಎಂಬ ಪಾಳೆಯಗಾರ ಆಳುತ್ತಿದ್ದನೆಂದೂ ನಂತರದಲ್ಲಿ ಆತನ ಹೆಸರಿನಿಂದಲೇ ಅಮ್ಮಿನ ಬಾವಿ ಎಂದಾಯಿತು ಎಂದು ಕೆಲವರ ಅಭಿಪ್ರಾಯವಾಗಿದೆ. ಐತಿಹಾಸಿಕವಾಗಿ ಕಲ್ಯಾಣ ಚಕ್ರವರ್ತಿಗಳ ಆಡಳಿತದಲ್ಲಿ ಇದ್ದಂತಹ ಈ ಊರು ನಂತರದಲ್ಲಿ ಗೋವೆಯ ಕದಂಬರ ಆಳ್ವಿಕೆಗೆ ಒಳಪಟ್ಟಿತು. ಕ್ರಿ.ಶ.೧೮ನೇ ಶತಮಾನದ ಹೊತ್ತಿಗೆ ಬಲ್ಲಾಳ ವಡೇರ ದೇಸಾಯಿ ಇವರ ಒಡೆತನಕ್ಕೆ ಬಂದ ಊರು ಬ್ರಿಟೀಷರ ವಿರುದ್ಧ ಹೋರಾಟದಲ್ಲಿ ಸಕ್ರಿಯ ಪಾತ್ರ ವಹಿಸಿದ್ದು ತಿಳಿದುಬರುತ್ತದೆ. ಅಮ್ಮಿನಬಾವಿಯ ಈ ಮಠವು ಪಂಚಪೀಠದಲ್ಲಿ ಒಂದೆನಿಸಿಕೊಂಡ ರಂಭಾಪುರಿ ಬಾಳೆ ಹೊನ್ನೂರು ಶಾಖಾ ಮಠವಾಗಿದೆ. ಇಲ್ಲಿ ಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು ವಾಸಿಸುತ್ತಿದ್ದಾರೆ.

"ಅಮ್ಮಿನಬಾವಿಯಲ್ಲಿ ಇಂದು ಉಳಿದುಕೊಂಡು ಬಂದಿರುವ ಜೈನ ಬಸದಿ. ಈಶ್ವರ ದೇವಾಲಯಗಳು ಕಲ್ಯಾಣದ ಚಾಲುಕ್ಯರ ಕಾಲದ ವಾಸ್ತು ಪುರಾವೆಗಳಾಗಿವೆ. ಈ ಹಿನ್ನೆಲೆಯಲ್ಲಿ ನೋಡಿದಾಗ ನಂತರದ ಕಾಲದಲ್ಲಿಯೂ ಅಮ್ಮಿನಭಾವಿ ತನ್ನ ಸಾಂಸ್ಕೃತಿಕ ಚಟುವಟಿಕೆಗಳನ್ನು ಮುಂದುವರೆಸಿಕೊಂಡು ಬಂದಿತ್ತು ಎನ್ನುವುದಕ್ಕೆ ಇಲ್ಲಿನ ಶಾಂತೇಶ್ವರ ಮಠದಲ್ಲಿರುವ ಆಕರ್ಷಕ ವರ್ಣಚಿತ್ರಗಳು ಸಾಕ್ಷಿಯಾಗಿವೆ. ಶಾಂತೇಶ್ವರ ಮಠದ ಚಿತ್ರಗಳು ಅವುಗಳ ಕಥಾ ನಿರೂಪಣೆಗಳು ಸಂಯೋಜನೆ ಆಕೃತಿಗ ವಿನ್ಯಾಸ ವರ್ಣ ಸಂಯೋಜನೆಗಳನ್ನು ಗಮನಿಸಿದಾಗ ಹಲವಾರು ವಿಶಿಷ್ಟವಾದ ಅಂಶಗಳು ಬೆಳಕಿಗೆ ಬರುತ್ತವೆ."[೭]

ಸುಮಾರು ೧೮ನೇ ಶತಮಾನದಲ್ಲಿ ಕಟ್ಟಲ್ಪಟ್ಟ ಅಮ್ಮಿನಭಾವಿಯ ಪಂಚಗ್ರಹ ಹಿರೇಮಠವು ೨ ಎಕರೆ ವಿಸ್ತೀರ್ಣದ ವಿಶಾಲವಾದ ಜಾಗದಲ್ಲಿ ಬೃಹತ್ ಗಾತ್ರದಲ್ಲಿ ನಿರ್ಮಿತವಾಗಿದೆ. ಮಠದ ದ್ವಾರದ ಬಾಗಿಲು ಉತ್ತರ ದಿಕ್ಕಿಗೆ ಮುಖಮಾಡಿದೆ. ಬೃಹದಾಕಾರದ ಕಲ್ಲಿನಲ್ಲಿ ಅಲಂಕಾರಿಕ ಕೆತ್ತನೆಗಳನ್ನು ಕೆತ್ತಿ ಚೌಕಾಕಾರವಾಗಿ ಸುಮಾರು ೨೦ ಅಡಿಯಷ್ಟು ಎತ್ತರವಾಗಿ ನಿರ್ಮಿಸಲಾಗಿದೆ. ಈ ಮಠವು ಎರಡು ಅಂತಸ್ತುಗಳನ್ನು ಹೊಂದಿದ ಕಟ್ಟಡವಾಗಿದ್ದು ಹಲವಾರು ಕೋಣೆಗಳಿಂದ ಕೂಡಿದೆ. ದ್ವಾರಬಾಗಿಲನ್ನು ದಾಟಿ ಒಳಾಂಗಣಕ್ಕೆ ಬಂದಾಗ ದಕ್ಷಿಣಕ್ಕೆ ಮಠದ ಪ್ರವೇಶದ್ವಾರ ಕಂಡುಬರುತ್ತದೆ.

ಒಟ್ಟು ಮೂರು ಕಡೆಗೆ ಅಂದರೆ ಪೂರ್ವ ಪಶ್ಚಿಮ ಮತ್ತು ದಕ್ಷಿಣಕ್ಕೆ ಪ್ರವೇಶದ್ವಾರಗಳಿವೆ. ಒಳಾಂಗಣದಲ್ಲಿ ೩೦x೨೦ ಅಡಿ ವಿಸ್ತೀರ್ಣದ ಕೆಳ ಪಡಸಾಲೆಯನ್ನು ನಿರ್ಮಿಸಲಾಗಿದೆ. ಈ ಪಡಸಾಲೆಯ ಸುತ್ತಲೂ ಇರುವ ಆಳೆತ್ತರದ ಕಟ್ಟೆಯ ಮೇಲೆ ಸಾಗವಾನಿ ಮರದ ೩೫ ಅಡಿ ಉದ್ದದ ಬೃಹತ್ ಗಾತ್ರದ ಕಂಬಗಳನ್ನು ನಿಲ್ಲಿಸಲಾಗಿದೆ. ಕಂಬದ ಮೇಲೆ ಇರುವ ಬೋದಿಗೆಗಳಲ್ಲಿ

೦೭. ಡಾ.ಆರ್.ಗೋಪಾಲ್ (ಸಂ) : ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪುಟ-೧೮೨

ಚಿತ್ರ ರಚನೆ ಮಾಡಲಾಗಿದೆ. ಒಳಗಡೆ ೪೦ ಅಡಿ ವಿಸ್ತೀರ್ಣದಲ್ಲಿ ಚೌಕಾಕಾರವಾಗಿ ವಿಶಾಲವಾದ ತೆರೆದ ಚಾವಡಿಯನ್ನು ಹೊಂದಿದೆ. ಚಾವಡಿಯ ಸುತ್ತಲಿನ ಗೋಡೆಯಲ್ಲಿ ೧೨ ಮರದ ಕಂಬಗಳನ್ನು ಮತ್ತು ಮಧ್ಯದಲ್ಲಿ ಮೇಲ್ಛಾವಣಿಗೆ ಆಧಾರಕ್ಕಾಗಿ ೧೨ ಬೃಹತ್ ಗಾತ್ರದ ತೊಲೆಗಳನ್ನು ಜೋಡಿಸಲಾಗಿದೆ. ಅಲ್ಲದೆ ಪಡಸಾಲೆಯ ಮಧ್ಯದಲ್ಲಿ ಕಲ್ಲಿನ ಚಪ್ಪಡಿಯನ್ನು ಹೊದಿಸಿ ನಿರ್ಮಿಸಿದ ತೊಟ್ಟಿಲಾಕಾರದ ಹೊಂಡ ದೋಣಿ ಇದೆ. ಮಠದ ಮೇಲ್ಛಾವಣಿಯಿಂದ ಬೆಳಕು ಬರಲು ೪x೪ ಅಡಿ ವಿಸ್ತೀರ್ಣದಲ್ಲಿ ಬೆಳಕಿಂಡಿಯನ್ನು ಬಿಟ್ಟಿದ್ದು, ಸೂರ್ಯನ ಬೆಳಕು ಹಾಗೂ ಮಳೆಯ ನೀರು ನೇರವಾಗಿ ಈ ಹೊಂಡದಲ್ಲಿ ಶೇಖರವಾಗುತ್ತದೆ. ನೆಲಮಹಡಿಯ ಚಾವಡಿಯಲ್ಲಿ ದಕ್ಷಿಣಕ್ಕೆ ಚಿಕ್ಕದಾದ ಚೌಕಟ್ಟನ್ನು ಹೊಂದಿದ ಹಿತ್ತಲು ಬಾಗಿಲನ್ನು ಜೋಡಿಸಲಾಗಿದೆ. ಹಿತ್ತಲು ಬಾಗಿಲಿನ ಸಮೀಪವೇ ಎಡಬದಿಯಲ್ಲಿ ಅಡುಗೆ ಮನೆ, ಬಲಬದಿಯಲ್ಲಿ ವಿಶ್ರಾಂತಿ ಕೋಣೆಯನ್ನು ಹೊಂದಿದೆ. ಮಠದ ಒಳಾಂಗಣದಲ್ಲಿ ಮೇಲಂತಸ್ತಿಗೆ ಹೋಗಲು ಎಡಭಾಗದಲ್ಲಿ ಚಿಕ್ಕ ಸಂದಿ ಇದ್ದು, ಸಣ್ಣಸಣ್ಣಮೆಟ್ಟಿಲನ್ನು ನಿರ್ಮಿಸಲಾಗಿದೆ. ಮೇಲಂತಸ್ಥಿನ ಪ್ರವೇಶಕ್ಕೆ ಚಿಕ್ಕ ಬಾಗಿಲು ದಾಟಿದ ನಂತರ ವಿಶಾಲವಾದ ಹಜಾರವು ಎದುರಾಗುತ್ತದೆ. ಹಜಾರದ ಸುತ್ತಲಿನ ಗೋಡೆಯಲ್ಲಿ ೧೮ ಕಂಬಗಳು ಮತ್ತು ಮಧ್ಯಭಾಗದಲ್ಲಿ ೧೨ ಕಂಬಗಳಿದ್ದು, ಹಜಾರದಲ್ಲಿ ಒಟ್ಟು ೩೦ ಬೃಹತ್ ಗಾತ್ರದ ಕಂಬಗಳನ್ನು ಜೋಡಿಸಿ ಮೇಲ್ಛಾವಣಿ ಹಾಕಲಾಗಿದೆ. ಆಧಾರಕ್ಕಾಗಿ ಜಂತಿಯ ಮೇಲೆ ಸಮಾನಾಂತರವಾಗಿ ಅಖಂಡವಾದ ಕಟ್ಟಿಗೆಯ ಹಲಗೆಯನ್ನು ಜೋಡಿಸಿದ್ದು ಕಂಡುಬರುತ್ತದೆ.

ಮಠದ ಮೇಲಂತಸ್ಥಿನ ಪೂರ್ವ ಮತ್ತು ಪಶ್ಚಿಮದಲ್ಲಿ ಚಿಕ್ಕದಾದ ಬಾಗಿಲನ್ನು ಹೊಂದಿದ ಒಂದೊಂದು ಕೋಣೆಗಳಿದ್ದು ದಕ್ಷಿಣಕ್ಕೆ ಹಜಾರದ ಗೋಡೆಗೆ ಹೊಂದಿಕೊಂಡಂತೆ ೧೫x೧೦ ಅಡಿ ವಿಸ್ತೀರ್ಣದ ತೆರೆದ ಪಡಸಾಲೆಯಿರುವುದು ಪಡಸಾಲೆಯ ಎಡಭಾಗದ ಮೂಲೆಯಲ್ಲಿ ಚಿಕ್ಕ ಉಗ್ರಾಣವಿದ್ದು ಈ ಉಗ್ರಾಣವು ಮಠದ ನೆಲ ಅಂತಸ್ಥಿನ ಅಡಿಗೆ ಮನೆಯ ಮೇಲೆ ನಿರ್ಮಿತವಾಗಿದೆ. ಮೇಲಂತಸ್ಥಿನ ಮೇಲ್ಛಾವಣಿಗೆ ಕಬ್ಬಿಣದ ತಗಡುಗಳನ್ನು ಜೋಡಿಸಲಾಗಿದೆ. ಪಶ್ಚಿಮಕ್ಕೆ ಹಜಾರದ ಗೋಡೆಯಲ್ಲಿ ಚಿಕ್ಕ ಚಿಕ್ಕ ಕಿಟಕಿಗಳನ್ನು ಜೋಡಿಸಿದ್ದಾರೆ.[೮] ಈ ಮಠದ ನಿರ್ಮಾಣದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಕಾಷ್ಠವನ್ನು ಉಪಯೋಗಿಸಲಾಗಿದ್ದು ಕ್ರಿ.ಶ. ೧೮೫೦ರ ಕಾಲಕ್ಕೆ ನಿರ್ಮಿಸಿರಬಹುದೆಂದು ತೋರುತ್ತದೆ. ಈ ಮಠದ ನಿರ್ಮಾಣದ ಕಾಲವನ್ನು ಸೂಚಿಸುವ ಯಾವುದೇ ದಾಖಲೆಗಳಿಲ್ಲ. ಹೀಗಾಗಿ ಮಠದ ವಾಸ್ತು ಅಂಶಗಳನ್ನು ಮತ್ತು ಇಲ್ಲಿನ ಚಿತ್ರಗಳ ಶೈಲಿಯ ಆಧಾರದಿಂದ ಅದರ ಕಾಲವನ್ನು ಸುಮಾರು ಕ್ರಿ.ಶ. ೧೮೫೦ ಸರಿಸುಮಾರು ಇರಬಹುದೆಂದು ಹೇಳಬಹುದು.[೯] ಮಠದ ಪ್ರವೇಶದ್ವಾರದ ಹೊರಪಡಸಾಲೆಯ ಕಂಬದ ಬೋದಿಗೆ ಮತ್ತು ತೊಲೆಗಳ

೦೮. ಡಾ.ಆರ್.ಗೋಪಾಲ್ (ಸಂ) : ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪುಟ-೧೮೭

೦೯. ಅದೇ., ಪುಟ-೧೮೬

ಮೇಲೆ ಚಿತ್ರಗಳನ್ನು ಕಾಣಬಹುದು. ಹಾಗೂ ಹೊರಪಡಸಾಲೆಯ ಪೂರ್ತಿ ಹೊರ ಚಾಚಿದ ಮೇಲ್ಛಾವಣಿಯ ಎರಡೂ ಬದಿಗಳಲ್ಲೂ ಭಿತ್ತಿಚಿತ್ರಗಳನ್ನು ಕಾಣಬಹುದು. ಹಾಗೂ ಹೊರಪಡಸಾಲೆಯ ಪೂರ್ತಿ ಹೊರ ಚಾಚಿದ ಮೇಲ್ಛಾವಣಿಯ ಎರಡೂ ಬದಿಗಳಲ್ಲೂ ಭಿತ್ತಿಚಿತ್ರಗಳನ್ನು ಕಾಣಬಹುದು. ಅಲ್ಲದೆ ಪ್ರವೇಶದ್ವಾರದ ಮೇಲಿನ ತೆರೆದ ಮಂಟಪದ ಮೇಲ್ಛಾವಣಿಯಲ್ಲಿ ಹೊರಚಾಚಿದ ಭಾಗಕ್ಕೆ ಅಳವಡಿಸಿದ ಕಬ್ಬಿಣದ ಫಲಕಗಳ ಮೇಲೆಯೂ ಭಿತ್ತಿಚಿತ್ರಗಳನ್ನು ರಚಿಸಿದ್ದು ಕಾಣಬಹುದು. ಹೀಗೆ ಈ ಮಠದ ನಿರ್ಮಾಣಕ್ಕಾಗಿ ಗಚ್ಚು ಮರದ ಹಲಗೆ, ಕಬ್ಬಿಣದ ಫಲಕಗಳನ್ನು ಬಳಸಿದ್ದಾರೆ. ಮಠದ ವಾಸ್ತು ವಿನ್ಯಾಸವನ್ನು ಜೊತೆಗೆ ಮಠದ ಸೌಂದರ್ಯವನ್ನು ಹೆಚ್ಚಿಸಲು ಗೋಡೆ, ಮರದ ಹಲಗೆ, ಕಬ್ಬಿಣದ ಫಲಕಗಳ ಮೇಲೆ ಭಿತ್ತಿಚಿತ್ರಗಳನ್ನು ರಚಿಸಿದ್ದಾರೆಂದು ಹೇಳಬಹುದು.

"೧೮-೧೯ನೇ ಶತಮಾನದ ಚಿತ್ರಗಳು ಬಹುತೇಕವಾಗಿ ಮರದ ಹಲಗೆಯ ಹಿನ್ನೆಲೆಯಲ್ಲಿಯೇ ರಚನೆಗೊಂಡಿವೆ. ಮೈಸೂರು ಪ್ರಾಂತ್ಯದಲ್ಲಿ ಅಂತಹ ಉದಾಹರಣೆಗಳು ವಿರಳ ಆದರೂ ಮೈಸೂರಿನ ಪ್ರಸನ್ನ ವೆಂಕಟೇಶ್ವರ ದೇವಾಲಯದ ಚಿತ್ರಮಂಟಪದ ಉದಾಹರಣೆ ನೀಡಬಹುದು. ಧಾರವಾಡ ಹತ್ತಿರದ ಹಳಿಯಾಳ ತಾಲೂಕು ಕೆಲವೇ ಕಿ.ಮೀ ದೂರದಲ್ಲಿರುವ ಬಿ.ಕೆ.ಹಳ್ಳಿಯ ರಾಮ ಮಂದಿರದ ಭಿತ್ತಿಚಿತ್ರಗಳು ಕೂಡ ಮರದ ಹಲಗೆಯ ಮೇಲೆಯೇ ರಚನೆಗೊಂಡಿವೆ."[೧೦]

"ಚಿತ್ರರಚನೆಗೆ ಸಜ್ಜಾದ ಭಾಗವನ್ನು ಆಶ್ರಯಿಸುವುದು ಆ ಕಾಲದ್ದೇ ಅಲ್ಲ. ಅಜಂತಾ, ಬಾದಾಮಿಗಳಲ್ಲಿಯೂ ಒಳಮಾಳಿಗೆಯ ಹೊರ ಚಾಚಿದ ಭಾಗವಾಗಿರುವ ಸಜ್ಜಾದ ಮೇಲೆ ಚಿತ್ರಗಳು ಕಂಡುಬರುತ್ತವೆ. ಅಂತೆಯೇ ಈ ಪದ್ಧತಿ ಅಂದಿನಿಂದಲೇ ಬೆಳೆದಿದೆ. ನರಗುಂದದ ಶ್ರೀ ಹಸಿಬಿಯವರ ಮನೆಯ ಹೊರಭಾಗದ ಸಜ್ಜಾದ ಮೇಲೆಯೂ ಅಮ್ಮಿನಭಾವಿಯ ರೀತಿಯಲ್ಲೇ ಚಿತ್ರಗಳಿರುವುದನ್ನು ಗಮನಿಸಬಹುದು."[೧೧]

ಅಮ್ಮಿನಬಾವಿಯ ಬಿತ್ತಿಚಿತ್ರಗಳು ಧರ್ಮಪ್ರಸಾರಕ್ಕಾಗಿ ನಿರ್ಮಿತವಾಗಿವೆ ಎನ್ನಬಹುದು. ಚಿತ್ರರಚನೆಯ ರೀತಿಯು ವಿಶೇಷತೆಯಿಂದ ಮತ್ತು ಆ ಕಾಲದ ಸಮಕಾಲೀನ ಸಂಗತಿಗಳನ್ನೊಳಗೊಂಡಿವೆ. ಶೈವ ಮತ್ತು ವೈಷ್ಣವ ಪರಂಪರೆಯ ಜೊತೆಗೆ ಪೌರಾಣಿಕ, ಐತಿಹಾಸಿಕ, ಧಾರ್ಮಿಕ ವಿಷಯಗಳು ಮತ್ತು ಅಲಂಕಾರಿಕ ನಕ್ಷೆ, ವಿನ್ಯಾಸದ ಚಿತ್ರಗಳಿವೆ. ಅಮ್ಮಿನ ಬಾವಿಯ ಮಠದ ಪ್ರವೇಶದ್ವಾರದ ಎರಡನೇ ಅಂತಸ್ತಿನ ಮೇಲ್ಛಾವಣಿಯಲ್ಲಿ ಹೊರ ಚಾಚಿದ ಭಾಗಕ್ಕೆ ಕಬ್ಬಿಣದ ಫಲಕಗಳನ್ನು ಜೋಡಿಸಿ ಈ ಕಬ್ಬಿಣದ ಫಲಕಗಳ ಮೇಲೆ ಚಿತ್ರ ರಚನೆ ಮಾಡಿದ್ದಾರೆ. ಈ ಚಿತ್ರಗಳು ಬಹುತೇಕ ಅಳಿಸಿ ಹೋಗಿದ್ದು ಅಲ್ಪಸ್ವಲ್ಪ ಬಣ್ಣದ ಕುರುಹುಗಳು ಕಾಣಿಸುತ್ತವೆ.

---

೧೦. ಡಾ.ಆರ್.ಗೋಪಾಲ್ (ಸಂ) : ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪುಟ-೧೮೬

೧೧. ಡಾ.ಎಸ್.ಸಿ.ಪಾಟೀಲ : ವರ್ಣಸಂಚಯ, ಪುಟ-೯೮

**೧. ಕಾಳಿಂಗಮರ್ಧನ**

ಬಾಲಕ ಕೃಷ್ಣನು ಕಳಿಂಗ ಸರ್ಪದ ಮೇಲೆ ನರ್ತನ ಮಾಡುತ್ತಿರುವ ಚಿತ್ರ ಇದಾಗಿದೆ. ಕೃಷ್ಣನು ಎಡಗೈಯಿಂದ ಕಳಿಂಗ ಸರ್ಪದ ಬಾಲವನ್ನು ಎತ್ತಿ ಹಿಡಿದಿರುವ ಮತ್ತು ಬಲಗೈಯಿಂದ ಕಾಳಿಂಗದ ಹೆಡೆಯ ಮೇಲೆ ಗುದ್ದುತ ಅದರೊಂದಿಗೆ ಸೆಣಸಾಡುತ್ತಿರುವ ದೃಶ್ಯವನ್ನು ಕಲಾವಿದನು ನೈಜ ರೀತಿಯಲ್ಲಿ ತೋರಿಸಿದ್ದಾನೆ. ಬಾಲಕ ಕೃಷ್ಣನ ರೂಪವು ಮುಗ್ಧತೆಯಿಂದ ಕೂಡಿದ್ದು ನೀಲವರ್ಣದಲ್ಲಿ ಕೃಷ್ಣನನ್ನು ಚಿತ್ರಿಸಲಾಗಿದೆ.

**೨. ರಾಕ್ಷಸರನ್ನು ಸಂಹರಿಸುತ್ತಿರುವ ದುರ್ಗೆ**

ದುರ್ಗೆಯು ಹುಲಿಯ ಮೇಲೆ ಕುಳಿತು ರಾಕ್ಷಸರನ್ನು ಸಂಹರಿಸುತ್ತಿರುವ ಚಿತ್ರವಿದೆ. ದುರ್ಗೆಯ ಕ್ರೌರ್‍ಯಾವತಾರಿಯಾಗಿ ತನ್ನ ನಾಲ್ಕು ಕೈಗಳಲ್ಲಿ ಆಯುಧಗಳನ್ನು ಹಿಡಿದಿರುವ ಚಿತ್ರ ಇದಾಗಿದೆ. ಈ ಚಿತ್ರವು ಕಾಲದ ಪ್ರಭಾವದಿಂದ ಮಸುಕಾಗಿದೆ.

**೩. ನರಸಿಂಹನು ಹಿರಣ್ಯ ಕಶ್ಯಪನನ್ನು ಸಂಹರಿಸುತ್ತಿರುವ ದೃಶ್ಯ**

ನರಸಿಂಹನು ಹಿರಣ್ಯ ಕಶ್ಯಪನ ಹೊಟ್ಟೆಯನ್ನು ಸೀಳುತ್ತಿದ್ದು ದೃಶ್ಯ ಇದಾಗಿದೆ. ಬಲಗಡೆಗೆ ಹಿರಣ್ಯ ಕಶ್ಯಪನ ಮಗನಾದ ಪ್ರಹ್ಲಾದ, ಎಡಗಡೆಗೆ ಆತನ ತಾಯಿಯ ದೀನತೆಯಿಂದ ಕೈ ಮುಗಿದು ನಿಂತಿದ್ದಾಳೆ. ಈ ಚಿತ್ರಗಳಲ್ಲಿ ಹಸಿರು, ಹಳದಿ, ನೀಲಿ, ಕೆಂಪು, ಕಪ್. ಬಣ್ಣಗಳನ್ನು ಬಳಸಿದ್ದಾರೆ.

**೧. ಶಿವನ ತಪಸ್ಸನ್ನು ಭಂಗಗೊಳಿಸುತ್ತಿರುವ ಮನ್ಮಥ**

ಶಿವನ ತಪಸ್ಸಿಗೆ ಕುಳಿತಿದ್ದಾನೆ. ಶಿವನ ಜಡೆಯಿಂದ ಗಂಗೆ ಹರಿಯುತ್ತಿದ್ದಾಳೆ. ಶಿವನ ಮುಂದೆ ರತಿ ದೇವಿಯಿದ್ದಾಳೆ. ಶಿವನಿಗೆ ನಾಲ್ಕು ಕೈಗಳನ್ನು ಚಿತ್ರಿಸಲಾಗಿದೆ. ಮನ್ಮಥ ರತಿ ದೇವಿಯರ ನಾಟ್ಯದಿಂದಲೂ ಶಿವನ ತಪ್ಪಸ್ಸನ್ನು ಭಂಗಗೊಳಿಸಲಾಗದೆ ಮನ್ಮಥನು ಹೂವಿನ ಬಾಣಗಳನ್ನು ಬಿಡತೊಡಗಿದ್ದಾನೆ. ಗಿಳಿಗಳು ಎಳೆಯುತ್ತಿರುವ ರಥದಲ್ಲಿ ಮನ್ಮಥನು ಕೈಯಲ್ಲಿ ಬಿಲ್ಲನ್ನು ಹಿಡಿದು ಕೊಂಡು ನಿಂತಿದ್ದಾನೆ.

**೨. ಕರ್ಣಾರ್ಜುನರ ಯುದ್ಧದ ದೃಶ್ಯ**

ಮಹಾಭಾರತ ಯುದ್ಧದ ಸನ್ನಿವೇಶವನ್ನು ಇಲ್ಲಿ ಚಿತ್ರ ರಚಿಸಲಾಗಿದೆ. ಅರ್ಜುನನ್ನು ಯುದ್ಧಕ್ಕೆ ಸನ್ನದ್ಧನಾಗಿ ರಥದಲ್ಲಿ ನಿಂತಿದ್ದಾನೆ. ಕೃಷ್ಣನು ಅರ್ಜುನ ರಥದ ಸಾರಥಿಯಾಗಿ ರಥವನ್ನು ಮುನ್ನೆಡೆಸಿಕೊಂಡು ಬರುತ್ತಿದ್ದಾನೆ. ಅರ್ಜುನ ಎದುರಾಳಿ ಕರ್ಣನು ರಥದಲ್ಲಿ ನಿಂತು ಯುದ್ಧ ಮಾಡುತ್ತಿರುವಂತೆ ಬಾಸವಾಗುತ್ತವೆ. ಕರ್ಣನ ರಥವನ್ನು ಶಲ್ಯ ರಾಜನು ನಡೆಸುತ್ತಿದ್ದಾನೆ. ಈ

ಚಿತ್ರದಲ್ಲಿ ಎರಡು ರಥಗಳನ್ನು ವಿಭಿನ್ನ ರೀತಿಯಲ್ಲಿ ಚಿತ್ರಿಸಿರುವುದನ್ನು ಕಾಣಬಹುದು. ಕೆಂಪು, ತಿಳಿಹಳದಿ, ಕಂದು ವರ್ಣಗಳನ್ನು ಇಲ್ಲಿ ಬಳಸಲಾಗಿದೆ.

**೩. ಜಮದಗ್ನಿಯ ಋಷಿಯ ದೃಶ್ಯ**

ಜಮದಗ್ನಿ ಋಷಿಯ ಪೀಠದ ಮೇಲೆ ಕುಳಿತಿದ್ದು ಬಲಭಾಗದಲ್ಲಿ ಕಲ್ಪವೃಕ್ಷವಿದೆ. ಅದರ ತುಂಬೆಲ್ಲ ಹೂಗಳು ಅರಳಿದ್ದು ಫಲಗಳನ್ನು ಬಿಟ್ಟಿದೆ. ಜಮದಗ್ನಿಯ ಎಡಭಾಗದಲ್ಲಿ ಸ್ತ್ರೀ ಮುಖ, ಆಕಳ ಶರೀರ, ರೆಕ್ಕೆ, ನವಿಲಿನ ಬಾಲ ಜೊತೆಗೆ ಎರಡು ಬಾಲಗಳನ್ನು ಹೊಂದಿದ ಕಾಮದೇನು ನಿಂತಿದೆ. ಕಾಮದೇನುವನ್ನು ಬಿಳಿವರ್ಣದಿಂದ ಚಿತ್ರಿಸಲಾಗಿದೆ. ಕಾರ್ತಿವೀರ್ಯನು ಕಾಮದೇನುವನ್ನು ತನಗೆ ಬೇಕೆಂದು ಕೋರುತ್ತಿದ್ದಾನೆ.

**೪. ತ್ರಿಪುರಸಂಹಾರ ದೃಶ್ಯ**

ಈ ಚಿತ್ರವು ಮಠದ ಪ್ರವೇಶದ್ವಾರದಲ್ಲಿದೆ. ಶಿವನು ತ್ರಿಪುರಾಂತಕ ರಾಕ್ಷಸರನ್ನು ಕೊಲ್ಲುವ ದೃಶ್ಯವನ್ನು ಚಿತ್ರಿಸಲಾಗಿದೆ.

**೫. ಮಠದ ಸ್ವಾಮಿಗಳು ತಮ್ಮ ಅನುಯಾಯಿಗಳ ಜೊತೆ ಚರ್ಚಿಸುತ್ತಿರುವ ದೃಶ್ಯ**

ಮಠದ ಸ್ವಾಮಿಗಳ ಚಿತ್ರವನ್ನು ಇಲ್ಲಿ ರಚಿಸಲಾಗಿದೆ. ಮಠದ ಪಟ್ಟದ ಸ್ವಾಮಿಗಳು ತಮ್ಮ ಆಸನದಲ್ಲಿ ಕುಳಿತುಕೊಂಡಿದ್ದಾರೆ. ಇಬ್ಬರು ಸ್ವಾಮಿಯ ಆಪ್ತಸಹಾಯಕರು ಈ ಚಿತ್ರದಲ್ಲಿದ್ದಾರೆ.

**೬. ಶ್ರೀ ಕೃಷ್ಣನ ವಿಶ್ವರೂಪ ದರ್ಶನ**

ಶ್ರೀ ಕೃಷ್ಣನ ವಿಶ್ವರೂಪದರ್ಶನ ಚಿತ್ರವನ್ನು ಇಲ್ಲಿ ಬಿಡಿಸಲಾಗಿದೆ. ಮನುಷ್ಯನೂ ಆಗಿರದೆ ಪ್ರಾಣಿಯೂ ಆಗಿರದೆ ಪಕ್ಷಿಯನ್ನು ಹೋಲದ ಈ ಆಕೃತಿಯು ನವಿಲಿನ ಮುಖ, ಸಿಂಹದ ಶರೀರ ಉಳ್ಳದ್ದಾಗಿದೆ. ಕಾಲುಗಳಲ್ಲಿ ಒಂದು ಆನೆಯದು, ಒಂದು ಹುಲಿಯದ್ದು, ಒಂದು ಆಕಳದ್ದು, ಮತ್ತೊಂದು ಮನುಷ್ಯನದ್ದಾಗಿದೆ. ಒಂದು ಕೈ ವಿಚಿತ್ರವಾಗಿದ್ದು, ಅದರಲ್ಲಿ ಚಕ್ರವನ್ನು ಹಿಡಿದುಕೊಂಡಿದೆ. ಹೀಗೆ ಒಟ್ಟು ಶರೀರಕ್ಕೆ ಬೇರೆ ಬೇರೆ ಪ್ರಾಣಿ, ಪಕ್ಷಿಗಳ ಆವಯವಗಳನ್ನು ಜೊತೆಗೆ ಐದು ಹೆಡೆಯನ್ನೆತ್ತಿದ್ದ ಸರ್ಪವನ್ನು ಇದಕ್ಕೆ ಬಾಲವಾಗಿ ಜೋಡಿಸಲಾಗಿದೆ. ಒಟ್ಟು ಈ ಆಕೃತಿಯನ್ನು ನೋಡಿದಾಗ ಕಲಾವಿದನ ಸೃಜನಾತ್ಮಕ ವಿಚಾರಗಳು ಕಂಡುಬರುತ್ತವೆ. ಆ ಕಾಲದಲ್ಲಿಯೇ ಕಲಾವಿದನ ಈ ಸೃಜನಾತ್ಮಕ ಸಂಯೋಜನೆಯ ಚಿತ್ರವು ಇಂದಿನ ಕಲಾವಿದರನ್ನು ಬೆರಗುಗೊಳಿಸುತ್ತದೆ.

**೭. ಲಕ್ಷ್ಮೀನರಸಿಂಹನ ಚಿತ್ರ**

ಫಲಕದ ಮಧ್ಯ ಭಾಗದಲ್ಲಿ ನರಸಿಂಹನನ್ನು ಚಿತ್ರಿಸಿದ್ದು, ಉಗ್ರಸ್ವರೂಪನಾದ ನರಸಿಂಹನ ಎಡತೊಡೆಯ ಮೇಲೆ ಲಕ್ಷ್ಮಿ ಕುಳಿತಿದ್ದಾಳೆ. ಚತುರ್ಭುಜಧಾರಿಯಾದ ನರಸಿಂಹನು ಎರಡು

ಕೈಗಳಲ್ಲಿ ಶಂಖ ಚಕ್ರಗಳನ್ನು ಹಿಡಿದಿದ್ದಾನೆ. ಇನ್ನುಳಿದ ಎರಡು ಕೈಗಳಲ್ಲಿ ಒಂದರಲ್ಲಿ ಲಕ್ಷ್ಮಿಯನ್ನು ಹಿಡಿದು ಇನ್ನೊಂದು ಕೈಯಿಂದ ಅಭಯ ಹಸ್ತ ಕೋರುತ್ತಿದ್ದಾನೆ. ಎಡತೊಡೆಯ ಮೇಲೆ ಕುಳಿತ ಲಕ್ಷ್ಮಿಯ ಹಸಿರು ಬಣ್ಣದ ಸೀರೆ ಬೂದಿ ಬಣ್ಣದ ಕುಪ್ಪಸ ತೊಟ್ಟಿದ್ದು, ಸೀರೆಯಲ್ಲಿ ಹೂಗಳ ನಕ್ಷೆಗಳನ್ನು ಚಿತ್ರಿಸಲಾಗಿದೆ. ನರಸಿಂಹನ ಎಡಭಾಗದಲ್ಲಿ ಮತ್ತು ಬಲಭಾಗದಲ್ಲಿ ಬ್ರಾಹ್ಮಣರು ಕೈಮುಗಿದುಕೊಂಡು ನಿಂತಿದ್ದಾರೆ.

**೮. ಕೃಷ್ಣ ಮತ್ತು ಗೋಪಿಕಾ ಸ್ತ್ರೀಯರು**

ಕೃಷ್ಣನು ಗೋಪಿಕಾಸ್ತ್ರೀಯರೊಡನೆ ಸರಸಸಲ್ಲಾಪದಲ್ಲಿ ತೊಡಗಿದ ಚಿತ್ರವಿದೆ. ಕೃಷ್ಣನ ಎರಡು ಬದಿಯಲ್ಲಿ ಸ್ತ್ರೀಯರು ನಿಂತಿದ್ದಾರೆ. ಕೃಷ್ಣನಿಗೆ ನಾಲ್ಕು ಕೈಗಳನ್ನು ಚಿತ್ರಿಸಲಾಗಿದೆ. ಕೃಷ್ಣನನ್ನು ನೀಲ ವರ್ಣದಿಂದ ಚಿತ್ರಿಸಿದ್ದು ಆಕರ್ಷಕವಾಗಿದೆ. ಒಬ್ಬ ಚಿತ್ರದಲ್ಲಿ ನಾಲ್ವರು ಸ್ತ್ರೀಯರಿದ್ದು ಅವರ ವೇಷ ಭೂಷಣಗಳು ವಿಶೇಷ ರೀತಿಯಿಂದ ಒಡಮೂಡಿವೆ. ಮಧ್ಯದಲ್ಲಿ ಕೃಷ್ಣನು ಇಬ್ಬರು ಗೋಪಿಕಾ ಸ್ತ್ರೀಯರೊಡನೆ ಸರಸ ಸಲ್ಲಾಪದಲ್ಲಿ ತೊಡಗಿದ್ದಾನೆ. ಚಿತ್ರದ ಎರಡು ಬದಿಯಲ್ಲಿ ಸ್ತ್ರೀಯರಿಬ್ಬರು ಆರತಿ ಹಿಡಿದು ನಿಂತಿದ್ದಾರೆ. ಮಹಿಳೆಯ ಅಲಂಕಾರ ಒಡವೆ,ವಸ್ತ್ರಗಳು ವರ್ಣಸಂಯೋಜನೆಗಳು ಹಾವಭಾವ ಭಂಗಿಗಳು ಭಿನ್ನತೆಯಿಂದ ಕೂಡಿವೆ. ಚಿತ್ರವು ಕೆಂಪು ವರ್ಣದಿಂದ ಕಂಗೊಳಿಸುತ್ತಿದೆ.

**೯. ಶಿವನ ಒಡ್ಡೋಲಗದ ದೃಶ್ಯ**

ಶಿವನ ವಿವಿಧ ಭಾವಭಂಗಿಗಳನ್ನು ಒಂದೇ ಚಿತ್ರದಲ್ಲಿ ತೋರಿಸಿರುವಂತೆ ಬಾಸವಾಗುವ ಚಿತ್ರವು ಅತ್ಯಂತ ಆಕರ್ಷಕವಾಗಿದೆ. ಶಿವನು ಪಾರ್ವತಿಯೊಂದಿಗೆ ಕೈಲಾಸ ಪರ್ವತದಲ್ಲಿ ಕುಳಿತಿದ್ದಾನೆ. ಶಿವನಿಗೆ ಐದು ಮುಖಗಳಿವೆ. ಹತ್ತು ಕೈಗಳಿವೆ.ಕೈಗಳಲ್ಲಿ ಆಭರಣಗಳಿದ್ದು ಐದು ಕಿರೀಟಗಳನ್ನು ಧರಿಸಿದ್ದಾನೆ. ಶಿವನು ಪಂಚೆಯನ್ನು ಉಬ್ಬುಕೊಂಡು ಪಾರ್ವತಿಯನ್ನು ತನ್ನ ಎಡತೊಡೆಯ ಮೇಲೆ ಕುಳ್ಳಿರಿಸಿಕೊಂಡಿದ್ದಾನೆ. ಶಿವನ ವಾಹನವಾದ ನಂದಿ ಶಿವನ ಮುಂದೆ ಮಲಗಿಕೊಂಡಿದೆ. ಶಿವ ಪಾರ್ವತಿಯರ ಮುಂದೆ ಶಿವಗಣಗಳೆಲ್ಲ ವಾದ್ಯಗಳನ್ನು ನುಡಿಸುತ್ತ ಶಿವನನ್ನು ಪ್ರಾರ್ಥಿಸುತ್ತಿದ್ದು, ವೀರಭದ್ರ, ನಂದಿ, ಭೃಂಗಿ ಟಗರಿನ ಮುಖವನ್ನು ಹೊಂದಿದ ಋಷಿ ಮುನಿಗಳ ಚಿತ್ರಗಳಿವೆ. ವೀರಭದ್ರನು ವೀರಾವೇಶ ಕುಣಿಯುತ್ತಿದ್ದಾನೆ ಪಕ್ಕದಲ್ಲಿ ಋಷಿ ಮುನಿಗಳು ಸಾಲಾಗಿ ನಿಂತು ವಾದ್ಯ ಬಾರಿಸುತ್ತಿದ್ದಾರೆ. ಹಳದಿ ಪಂಚೆ, ಕೆಂಪುವರ್ಣದ ಶಾಲು, ಕಪ್ಪು, ಅಂಗಿ, ಧರಿಸಿದ ನಂದಿಯ ಮೃದಂಗ ಬಾರಿಸುತ್ತಿದ್ದು, ಇನ್ನುಳಿದ ಋಷಿಮುನಿಗಳು ತಾಳ ತಂಬೂರಿಗಳನ್ನು ನುಡಿಸುತ್ತ ಸಾಗಿರುವ ದೃಶ್ಯ ತುಂಬಾ ಮೋಹಕವಾಗಿ ಚಿತ್ರಿಸಲಾಗಿದೆ. ಚಿತ್ರದ ಚೌಕಟ್ಟಿನಲ್ಲಿ ಹೂ ಬಳ್ಳಿಯ ನಕ್ಷಾ ಚಿತ್ರಗಳಿಂದ ಸಂಯೋಜಿಸಲಾಗಿದೆ.

**೧೦. ದುರ್ಗಾಪರಮೇಶ್ವರಿಯ ಚಿತ್ರ**

ಉಗ್ರರೂಪಿನ ದೇವತೆಯಾದ ದುರ್ಗಾಪರಮೇಶ್ವರಿಯ ಚಿತ್ರವನ್ನು ಇಲ್ಲಿ ರಚಿಸಲಾಗಿದೆ. ಇಲ್ಲಿ ಆದಿ ಶಕ್ತಿಯ ದೇವಿಯ ರೂಪವನ್ನು ವಿಭಿನ್ನ ರೀತಿಯಲ್ಲಿ ಚಿತ್ರಿಸಲಾಗಿದೆ. ದೇವಿಯ ರೂಪವು ಉಗ್ರವಾಗಿರದೆ ಶಾಂತಿಯ ಪ್ರತಿಮೆಯಾಗಿದೆ. ದುರ್ಗಾಪರಮೇಶ್ವರಿಯ ಚಿತ್ರವನ್ನು ಕಮಲದ ಮೇಲೆ ಕುಳಿತು ಧ್ಯಾನಸ್ಥಳದ ರೀತಿಯಲ್ಲಿ ಚಿತ್ರಿಸಲಾಗಿದೆ. ದೇವಿಯ ತಲೆಯ ಮೇಲೆ ಇರುವ ಕಿರೀಟವನ್ನು ಅಲಂಕಾರಿಕ ನಕ್ಷೆಗಳಿಂದ ರಚಿಸಿದ್ದು ಕಂಡುಬರುತ್ತದೆ. ದೇವಿ ಎರಡು ಬದಿಯಲ್ಲಿ ಇಬ್ಬರು ಸ್ತ್ರೀಯರಿದ್ದು ಕೆಂಪು ವರ್ಣದ ಸೀರೆ ಧರಿಸಿದ್ದು ಆರತಿ ಬೆಳಗುತ್ತಿದ್ದಾರೆ. ಈ ಚಿತ್ರದ ಚೌಕಟ್ಟಿನಲ್ಲಿ ವಿವಿಧ ವರ್ಣಗಳ ಬಳ್ಳಿಯ ಅಲಂಕಾರಿಕ ನಕ್ಷೆಗಳಿಂದ ಚಿತ್ರವನ್ನು ಪೂರ್ಣಗೊಳಿಸಲಾಗಿದೆ.

**೧೧. ಸಂಗೊಳ್ಳಿ ರಾಯಣ್ಣನಿಗೆ ಶಿಕ್ಷೆ ವಿಧಿಸುತ್ತಿರುವ ದೃಶ್ಯ**

ಕಿತ್ತೂರು ಸಂಸ್ಥಾನದ ಸ್ವಾತಂತ್ರ ಯೋಧ ವೀರ ಸಂಗೊಳ್ಳಿರಾಯಣ್ಣನಿಗೆ ಸಂಬಂಧಿಸಿದ ಚಿತ್ರ ಇದಾಗಿದೆ. ಚಿತ್ರದ ಒಂದು ಬದಿಯಲ್ಲಿ ಕುಳಿತು ಚರ್ಚೆಗೆ ತೊಡಗಿರುವ ಇಬ್ಬರು ಬ್ರಿಟಿಷ್ ಅಧಿಕಾರಿಗಳಿದ್ದಾರೆ. ಸ್ಥಳೀಯ ಮುಖಂಡರು ಈ ಚರ್ಚೆಯಲ್ಲಿ ಪಾಲ್ಗೊಂಡಿರುವುದು ಕಾಣುತ್ತದೆ. ಫಲಕದ ಬಲ ಭಾಗದಲ್ಲಿ ರಾಯಣ್ಣನ ತಂದೆ ತಾಯಿಗಳು ದುಃಖದಿಂದ ನೋಡುತ್ತಿರುವ ದೃಶ್ಯವನ್ನು ಚಿತ್ರಿಸಿದ್ದಾರೆ. ಸಂಗೊಳ್ಳಿರಾಯಣ್ಣನ ಎರಡು ಕೈಗಳನ್ನು ಬೆನ್ನ ಹಿಂದೆ ಹಗ್ಗದಿಂದ ಕಟ್ಟಿ ಸೊಂಟಕ್ಕೆ ಮತ್ತು ತೋಳುಗಳಿಗೆ ಹಗ್ಗ ಬಿಗಿದು ಒಬ್ಬ ಪೋಲಿಸ್ ಹಿಡಿದು ಬಡಿಗೆಯಿಂದ ರಾಯಣ್ಣನಿಗೆ ಹೊಡೆಯುತ್ತಲಿದ್ದಾನೆ. ಇದನ್ನೆಲ್ಲ ನೋಡಿ ನೊಂದ ಆತನ ತಂದೆ ತಾಯಿ ಆತನನ್ನು ಬಿಡುವಂತೆ ಕೈ ಮುಂದೆ ಮಾಡಿ ಬೇಡಿಕೊಳ್ಳುತ್ತಿರುವುದು. ಆತನ ತಂದೆ ತಾಯಿಯ ಅಸಹಾಯಕ ಸ್ಥಿತಿಯನ್ನು ನಾವು ಇಲ್ಲಿ ಕಾಣಬಹುದು.

**೧೨. ಆನೆಯ ಅಂಬಾರಿ ಮೇಲೆ ಕಿತ್ತೂರು ರಾಣಿಚೆನ್ನಮ್ಮ**

ರಾಜ ಮೆರವಣಿಗೆಯ ಚಿತ್ರ ಇದಾಗಿದ್ದು. ಆನೆಯ ಮೇಲೆ ಅಂಬಾರಿ ಇದೆ. ಇದರಲ್ಲಿ ಮೂವರು ಸ್ತ್ರೀಯರಿದ್ದು ರಾಣಿಯು ಮಧ್ಯದಲ್ಲಿ ಆಸೀನಳಾಗಿದ್ದಾಳೆ. ರಾಣಿಯ ವೇಷ ಭೂಷಣಗಳು, ಅಲಂಕಾರವು ಅದ್ಭುತವಾಗಿದೆ. ಆನೆಯ ಮುಂದೆ ಆಯುಧ ಹಿಡಿದ ಸೈನಿಕರು ಹಿಂದೆ ಛತ್ರಚಾಮರ ಹಿಡಿದ ಸೇವಕರು ಸಾಲಾಗಿ ನಡೆಯುತ್ತಿದ್ದಾರೆ. ಈ ಮೆರವಣಿಗೆಯು ಆ ಕಾಲದ ರಾಜವೈಭವವನ್ನು ಬಿಂಬಿಸುತ್ತದೆ. ಇದು ಕಿತ್ತೂರಿನ ರಾಜ ಮೆರವಣಿಗೆಯಾಗಿದೆ ಎಂಬುವ ತಜ್ಞರ ಅಭಿಪ್ರಾಯವಾಗಿದೆ. ಮಠದ ಪ್ರವೇಶದ್ವಾರದ ಹೊರಪಡಸಾಲೆಯ ಕಂಬದ ಬೋಧಿಗೆ ಮತ್ತು ತೊಲೆಗಳ ಹಾಗೂ

ಪಡಸಾಲೆಯ ಮೇಲ್ಛಾವಣಿಯ ಎರಡು ಬದಿಗಳಲ್ಲೂ ಮರದ ಫಲಕದ ಮೇಲೆ ವರ್ಣ ಚಿತ್ರಗಳನ್ನು ರಚಿಸಲಾಗಿದೆ. ಮಠದ ಒಳಗಿನ ಗೋಡೆಯಲ್ಲಿ ಕೆಲವು ಭಿತ್ತಿ ಚಿತ್ರಗಳು ಇದ್ದುದಾಗಿ ತಿಳಿದು ಬರುತ್ತಾದರೂ ಸದ್ಯಕ್ಕೆ ಈಗ ಗೋಡೆಯ ಮೇಲೆ ಯಾವ ಚಿತ್ರಗಳು ಉಳಿದಿಲ್ಲ. ಗೋಡೆಗೆ ಸುಣ್ಣ ಬಣ್ಣ ಮಾಡಿದಾಗ ಚಿತ್ರಗಳಿದ್ದವು ಎಂಬ ಅಂಶಗಳು ಮಾಯವಾಗಿವೆ. ಗೋಡೆಯ ಮೇಲೆ ಇದ್ದ ಚಿತ್ರಗಳಲ್ಲಿ ಸಿಂಹಾಸನಾರೂಢನಾಗಿರುವ ರಾಜನ ಚಿತ್ರವೊಂದಿದ್ದು, ಅದು ನರಗುಂದ ಬಾಬಾಸಾಹೇಬನ ಚಿತ್ರವೆಂದು ಸ್ಥಳೀಯರ ಅಭಿಪ್ರಾಯವಾಗಿದೆ. ಇಲ್ಲಿನ ಗೋಡೆಯ ಮೇಲೆ ರಚಿತಗೊಂಡ ಚಿತ್ರಗಳಲ್ಲಿ ಈ ಮಠದ ಹಿರಿಯ ಸ್ವಾಮಿಗಳ ಭಾವಚಿತ್ರಗಳೂ ಸಹ ಚಿತ್ರಿತಗೊಂಡಿದ್ದವೆಂದು ಹೇಳುತ್ತಾರೆ. ಆದರೆ ಇಂದು ಗೋಡೆಯ ಮೇಲೆ ಯಾವ ಭಿತ್ತಿಚಿತ್ರಗಳು ಕಾಣುವುದಿಲ್ಲ.

ಅಮ್ಮಿನಭಾವಿಯ ಶಾಂತೇಶ್ವರ ಮಠದ ಚಿತ್ರಗಳು ಉತ್ತರ ಕರ್ನಾಟಕದ ಭಿತ್ತಿ ಚಿತ್ರ ಪರಂಪರೆಗೆ ಪೂರಕವಾಗಿಯೇ ರಚನೆಗೊಂಡಿವೆ. ಇವುಗಳ ರಚನೆ ಪ್ರಾಮುಖ್ಯತೆ ಅಂದಿನ ಸಮಕಾಲೀನ ಸಂವೇಧನೆಗಳಿಗೆ ಪೂರಕವಾಗಿಯೇ ಇವೆ. ಆ ಕಾಲದ ಸಾಮಾಜಿಕ, ಐತಿಹಾಸಿಕ ವಿವರಗಳು ಚಿತ್ರದಲ್ಲಿ ಬೆರೆತಿರುವುದನ್ನು ಕಾಣಬಹುದು. ಶಾಂತೇಶ್ವರ ಮಠ ಮೂಲತಃ ವೀರಶೈವ ಮಠವಾದರೂ ಇಲ್ಲಿ ವೈಷ್ಣವ ಶೈವ ಎರಡೂ ಧರ್ಮಕ್ಕೆ ಸಂಬಂಧ ಪಟ್ಟ ಚಿತ್ರಗಳನ್ನು ರಚನೆ ಮಾಡಿದ್ದು ವಿಶೇಷವಾಗಿವೆ.



ಈ ಚಿತ್ರಗಳ ವರ್ಣವಿನ್ಯಾಸ ಸಮಕಾಲೀನ ಭಿತ್ತಿಚಿತ್ರಗಳ ವಿನ್ಯಾಸವನ್ನೇ ಅನುಸರಿಸುತ್ತವೆ. ವಿಶೇಷವಾಗಿ ಚಿತ್ರಗಳ ಹಿನ್ನೆಲೆಯ ವರ್ಣ ಏಕ ಪ್ರಕಾರದ್ದಿರುತ್ತದೆ. ಅಂದರೆ, ಕೆಂಪು, ಹಳದಿ, ಹಸಿರು ಅಥವಾ ನೀಲಿ ವರ್ಣಗಳನ್ನು ಚಪ್ಪಟೆಯಾಗಿ ಹಿನ್ನೆಲೆಯಲ್ಲಿ ಹಾಕಿರಲಾಗುತ್ತಿದೆ. ಅದರ ಮೇಲೆ ಉದ್ದೇಶಿತ ಆಕೃತಿಗಳು ರಚನೆಗೊಳ್ಳುತ್ತವೆ. ಅಲ್ಲದೇ ಆಕೃತಿಗಳ ಬಾಹ್ಯ ರೇಖೆಗಳು ತುಂಬಾ ನಾಜೂಕಾಗಿ ಖಂಡರಿಸಿದಂತೆ ಕಂಡುಬರುತ್ತವೆ. ವರ್ಣಸಂಯೋಜನೆಯಲ್ಲಿಯೂ ಕಲಾವಿದನ ಜಾಣ್ಮೆಯನ್ನು ಕಾಣಬಹುದು. ಸಮಯೋಚಿತವಾಗಿ ವರ್ಣನೆಗಳನ್ನು ವಿನ್ಯಾಸಗೊಳಿಸಿದೆ. ಒಟ್ಟಾರೆಯಾಗಿ ಸಂದರ್ಭಕ್ಕೆ ಅನುರೂಪವಾಗಿ ಚಿತ್ರ ವರ್ಣ ಸಂಯೋಜನೆ ರಚನೆಯಾಗಿದೆ.

"ಅಮ್ಮಿನಭಾವಿಯ ಚಿತ್ರಗಳು ೧೮೫೦ರ ಚಿತ್ರಕಲೆಯ ಮುಖ್ಯವಾಹಿನಿಯಲ್ಲಿ ಇದ್ದವುಗಳಾಗಿವೆ. ಕಲಾವಿದರ ಬಗ್ಗೆ ಯಾವುದೇ ದಾಖಲೆಗಳಿಲ್ಲ. ಹೀಗಾಗಿ ಪುನಃ ಕಲಾವಿದ ಇಲ್ಲಿ ಅನಾಮಿಕನಾಗಿ ಬಿಟ್ಟಿದ್ದಾನೆ. ಆದರೆ, ಪೌರಾಣಿಕ ಕಥನಗಳ ದೃಶ್ಯ ಪರಿಕಲ್ಪನೆ, ಶಿಷ್ಟವಾದ ಮತ್ತು ಪ್ರೌಢ ಚಿತ್ರ ಸಂಪ್ರದಾಯದ ಇರುವಿಕೆಯನ್ನು ದೃಢಪಡಿಸುತ್ತವೆ."[೧೨]

---

೧೨. ಆರ್ಯ ಆಚಾರ್ಯ (ಪ.ಸಂ) : ಚಿತ್ರ ಶಾಲ್ಮಲಾ, ಪುಟ – ೪೮

**೨. ಉಪ್ಪಿನಬೆಟಗೇರಿಯ ಭಿತ್ತಿಚಿತ್ರಗಳು**

ಧಾರವಾಡ ತಾಲೂಕಿನ ಉಪ್ಪಿನ ಬೆಟಗೇರಿ, ಧಾರವಾಡದಿಂದ ೨೧ ಕಿ.ಮೀ. ಅಂತರದಲ್ಲಿದೆ. ಈ ಊರಿಲ್ಲಿ ಹಳೆಯದಾದ ಶ್ರೀ ಯಲ್ಲಮ್ಮನ ದೇವಸ್ಥಾನದಲ್ಲಿ ಅನೇಕ ವರ್ಣಚಿತ್ರಗಳಿವೆ. ನೂರಾರು ಚಿತ್ರಗಳನ್ನು ಹೊಂದಿದ ಈ ದೇವಾಲಯ ಇತ್ತೀಚೆಗೆ ಕುಸಿದುಬಿದ್ದು ಮಣ್ಣಿನಿಂದ ಆವೃತವಾಗಿರುವುದರಿಂದ ಹೊರಗಡೆ ಕಾಣುವ ಕೆಲವು ವರ್ಣಚಿತ್ರಗಳನ್ನು ಮಾತ್ರ ನೋಡುವಂತಾಗಿದೆ. ಬಯಲಿಗೆ ಬಿಸಿಲು, ಮಳೆಗಾಳಿಗೆ ಬಹುಪಾಲು ಚಿತ್ರಗಳು ಅಂದಗೆಟ್ಟಿವೆ.

ಈ ಚಿತ್ರಗಳು ೧೮ನೇ ಶತಮಾನದವುಗಳು, ಅಮ್ಮಿನಭಾವಿ, ಬಿ.ಕೆ.ಹಳ್ಳಿ, ನರಗುಂದ, ನವಲಗುಂದದ ಭಿತ್ತಿಚಿತ್ರಗಳೆಲ್ಲವೂ ಒಂದೇ ರೀತಿಯ ಚಿತ್ರಗಳಾಗಿವೆ. "ಇಲ್ಲಿ ಹೆಚ್ಚಾಗಿ ಕಟ್ಟಿಗೆಯ ಮೇಲೆ ಚಿತ್ರಿಸಿದ ಚಿತ್ರಗಳು ನವಿಲು, ವಿವಿಧ ಪ್ರಾಣಿ ಪಕ್ಷಿಗಳ ಚಿತ್ರಗಳು, ಹಾವುಗಳು ತಳುಕು ಹಾಕಿದ ಕಲಾತ್ಮಕ ವರ್ಣಚಿತ್ರಗಳು ಭೂಮಿತಿ ಆಕೃತಿಯ ಚಿತ್ರಗಳು, ಸುಳಿವುಗಳು ಪ್ರಮುಖವಾಗಿ ಕಂಡುಬರುತ್ತವೆ."[೧೩] ಈಗ ಈ ದೇವಸ್ಥಾನ ಬಿದ್ದು ಹೋಗಿದ್ದು, ಚಿತ್ರಗಳೆಲ್ಲ ಮಣ್ಣುಪಾಲಾಗಿದೆ. ದೇವಸ್ಥಾನವಿದ್ದಾಗ ಈ ಚಿತ್ರಗಳ ಕುರಿತು ಡಾ. ಎಸ್. ಸಿ. ಪಾಟೀಲರು ಅಧ್ಯಯನ ಮಾಡಿದ ಮಾಹಿತಿಯನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

**೩. ಅಣ್ಣಿಗೇರಿ ವಾಡೆಯ ಭಿತ್ತಿಚಿತ್ರಗಳು**

ಧಾರವಾಡ ಜಿಲ್ಲೆಯ ನವಲಗುಂದ ತಾಲೂಕಿನಲ್ಲಿ ಒಂದು ಗ್ರಾಮ ಅಣ್ಣಿಗೇರಿ. ಈ ಗ್ರಾಮವು ಶಿಲ್ಪಕಲಗೆ ಪ್ರಖ್ಯಾತಿಯನ್ನು ಪಡೆದಿದೆ. ಆದಿ ಕವಿ ಪಂಪನು ಈ ಗ್ರಾಮದಲ್ಲಿ ಜನಿಸಿದ ಎಂದು ಇತಿಹಾಸದಿಂದ ತಿಳಿದುಬರುತ್ತದೆ. ಅಣ್ಣಿಗೇರಿಯಲ್ಲಿರುವ ಪ್ರಸಿದ್ಧ ಅಮೃತೇಶ್ವರ ದೇವಾಲಯ ಶಿಲ್ಪಕಲೆಗೆ ಹೆಸರುವಾಸಿಯಾಗಿದೆ. ಅಣ್ಣಿಗೇರಿಯಲ್ಲಿ ಬರುವ ಎರಡು ವಾಡೆಗಳು ಸುಸ್ಥಿತಿಯಲ್ಲಿ ಇಂದಿಗೂ ಕಂಡುಬರುತ್ತವೆ. ಇವುಗಳ ಕಾಲಮಾನದ ಬಗ್ಗೆ ಸರಿಯಾದ ಮಾಹಿತಿಗಳು ಲಭ್ಯವಿರುವುದಿಲ್ಲ. ಈ ವಾಡೆಗಳಲ್ಲಿ ಸಾಂಪ್ರದಾಯಿಕ ಮರ ಮಾಧ್ಯಮದ ಕಲಾವಿನ್ಯಾಸವು ಅತೀ ಸೂಕ್ಷ್ಮ ಕೆತ್ತನೆಯಿಂದ ಕೂಡಿದೆ.

ಅಣ್ಣಿಗೇರಿಯ ಒಂದನೆಯ ವಾಡೆಯನ್ನು ಈಗ "ದೇಶಪಾಂಡೆ ವಾಡೆ" ಎಂದು ಕರೆಯುತ್ತಾರೆ. ಇದನ್ನು "ಜೈನ" ಧರ್ಮಕ್ಕೆ ಸೇರಿದವರಾದ ಧರ್ಮದೇಸಾಯಿಯವರು ಕಟ್ಟಿಸಿದರೆಂದು ತಿಳಿದುಬರುತ್ತದೆ. ಈ ವಾಡೆಯು ಸುಮಾರು ೮-೧೦ ಹಳ್ಳಿಗಳನ್ನು ಒಳಗೊಂಡಿತ್ತು. ಈ ಹಳ್ಳಿಯ ಆಡಳಿತವನ್ನು ಈ ವಾಡೆಯ ಒಡೆಯರು ನೋಡಿಕೊಳ್ಳುತ್ತಿದ್ದುದಾಗಿ ತಿಳಿದುಬರುತ್ತದೆ.[೧೪] ಈ ವಾಡೆಯುಲ್ಲಿನ ಭಿತ್ತಿಚಿತ್ರಗಳು ಸದ್ಯಕ್ಕೆ ಯಾವುದೂ ಕಂಡುಬರುವುದಿಲ್ಲ. ಬಹುಶಃ

---

೧೩. ಡಾ.ಎಸ್.ಸಿ.ಪಾಟೀಲ : ವರ್ಣಸಂಚಯ, ಪುಟ - ೯೮

೧೪. ಸ್ಥಳೀಯರ ಸಂದರ್ಶನದ ಮಾಹಿತಿ

ನಾಶಗೊಂಡಿರಬಹುದಾದ ಕುರುಹುಗಳು ಕಂಡುಬರುತ್ತವೆ. ಎರಡನೆಯ ವಾಡೆಯನ್ನು ವೀರಶೈವ ಧರ್ಮದ "ದೇಸಾಯಿಯವರ ವಾಡೆ" ಎಂದು ಕರೆಯುತ್ತಾರೆ.[೧೫] ಈ ವಾಡೆಯು ಗ್ರಾಮದ ಮಧ್ಯಭಾಗದಲ್ಲಿದೆ. ೨ ಎಕರೆ ವಿಸ್ತೀರ್ಣದ ವಿಶಾಲವಾದ ಜಾಗದಲ್ಲಿ ಬೃಹತ್ ಗಾತ್ರದಲ್ಲಿ ನಿರ್ಮಿತವಾಗಿದೆ. ಮೇಲ್ಮಹಡಿಯು ಹಂಚಿನಿಂದ ಕೂಡಿವೆ. ಎರಡು ಕಡೆಗಳಲ್ಲಿ ಮುಖ್ಯ ದ್ವಾರಗಳಿವೆ. ಎರಡು ದ್ವಾರ ಬಾಗಿಲುಗಳು ಸೂಕ್ಷ್ಮ ಕೆತ್ತನೆಯ ವಿನ್ಯಾಸದಿಂದ ಅಲಕೃತವಾಗಿವೆ. ಬಾಗಿಲುಗಳಲ್ಲಿ ಹೂವಿನ ಮತ್ತು ಚೌಕ, ಆಯತದ ವಿನ್ಯಾಸದ ಉಬ್ಬು ಕೆತ್ತನೆಗಳಿವೆ. ವಾಡೆಯ ಮುಖ್ಯ ದ್ವಾರ ಬಾಗಿಲ ಮೇಲೆ ಎಲೆಯಾಕಾರದ ತೋರಣದಂತೆ ಕಾಣುವ ಹಾಗೆ ರಚನೆ ಮಾಡಿದ್ದಾರೆ. ಬಾಗಿಲ ಮೇಲೆ ಎರಡು ಪಕ್ಷಿಗಳು ಒಂದೇ ಬಳ್ಳಿಯಲ್ಲಿ ಬಂದಿಸಿದಂತೆ ರಚನೆ ಮಾಡಿದ್ದಾರೆ. ಇವರ ಕೆಳಗೆ ಕಮಲದ ಮೇಲೆ ಕುಳಿತ ಗಣಪನ ಉಬ್ಬು ಶಿಲ್ಪವಿದೆ. ವಾಡೆಯ ಕಂಬಗಳು ಕಲಾತ್ಮಕತೆಯಿಂದ ಕೂಡಿವೆ. ಕಂಬದ ಮೇಲ್ಭಾಗದಲ್ಲಿ ಪಕ್ಷಿಯನ್ನು ಹೋಲುವ ಉಬ್ಬು ಶಿಲ್ಪಗಳನ್ನು ವಿಶೇಷ ರೀತಿಯಿಂದ ರಚನೆ ಮಾಡಿದ್ದಾರೆ. ಇವು ತಿರುವು ಮರುವಾಗಿ ಮಧ್ಯ ಮಧ್ಯ ಹೂವಿನ ಚಿತ್ರ, ದುಂಡು ಚುಕ್ಕೆಗಳು ಇದರ ಮೇಲೆ ಕೆತ್ತಲ್ಪಟ್ಟಿವೆ.

**ಭಿತ್ತಿಚಿತ್ರಗಳು***

ಈ ವಾಡೆಯ ಹೊರಭಾಗದ ಸಬ್ಜಾದ ಮೇಲೆ ಭಿತ್ತಿಚಿತ್ರಗಳು ಇದ್ದ ಕುರುಹುಗಳು ಕಾಣುತ್ತವೆ. ಈ ಎಲ್ಲ ವರ್ಣಚಿತ್ರಗಳು ಸಂಪೂರ್ಣವಾಗಿ ನಾಶವಾಗಿವೆ. ಅದರ ಹಿಂದಿನ ರೇಖಾಚಿತ್ರವು ಮಾತ್ರ ಗೋಚರವಾಗಿ ಕಾಣುತ್ತಿವೆ. ಈ ಚಿತ್ರಗಳು ಮಂಡಲದ ರಂಗೋಲಿಯ ಚಿತ್ರಗಳನ್ನು, ಚೌಕ, ಆಯತ, ತ್ರಿಭುಜಾಕೃತಿ, ಷಟ್ ಕೋನಗಳಲ್ಲಿ ನಕ್ಷಾ ಚಿತ್ರಗಳನ್ನು ಅನುಸರಿಸಿ ಚಿತ್ರರಚನೆ ಮಾಡಿರುವುದು ಕಂಡುಬರುತ್ತದೆ. ಮೇಲೆ ರಚನೆಯಾದ ಚಿತ್ರಗಳು ಭೂಮಿತಿ ಆಕೃತಿಯ ಚಿತ್ರವಿನ್ಯಾಸಗಳಿರುವುದು ಗಮನಾರ್ಹ ಅಂಶ. ಮತ್ತು ಈ ಚಿತ್ರಗಳು ಮರದ ಫಲಕದ ಮೇಲೆ ರಚನೆಯಾಗಿರುವುದು ಇನ್ನೊಂದು ಪ್ರಮುಖ ಅಂಶವಾಗಿದೆ. ಇಲ್ಲಿಯ ಚಿತ್ರಗಳ ಕಾಲಮಾನವನ್ನು ಡಾ. ಎಸ್. ಸಿ. ಪಾಟೀಲರವರು ಕರ್ನಾಟಕ ಇತಿಹಾಸ ಅಕಾಡೆಮಿಯ ವಿಚಾರ ಸಂಕಿರಣದಲ್ಲಿ ೧೮ನೆಯ ಶತಮಾನದವುಗಳೆಂದು ಉದಾಹರಣೆ ಸಹಿತ ಚರ್ಚಿಸಿದ್ದಾರೆ. ಸದ್ಯಕ್ಕೆ ಇದೇ ಕಾಲಮಾನವೆಂದು ಇಟ್ಟುಕೊಳ್ಳಬಹುದಾಗಿದೆ. ಚಿತ್ರಗಳ ವರ್ಣವಿನ್ಯಾಸದ ವಿವರಗಳು ನಶಿಸಿ ಹೋಗಿರುವುದರಿಂದ ಬರೀ ಕಪ್ಪು ರೇಖೆಯ ವಿನ್ಯಾಸಗಳು ಮಾತ್ರ ಕಂಡುಬರುತ್ತಿವೆ. ಕಲಾವಿದರ ಕುರಿತು ಯಾವುದೇ ಮಾಹಿತಿಗಳು ಲಭ್ಯವಿರುವುದಿಲ್ಲ.

---

೧೫. ಸ್ಥಳೀಯರ ಸಂದರ್ಶನದ ಮಾಹಿತಿ

* ಅಣ್ಣಿಗೇರಿಯ ವಾಡೆಯದಲ್ಲಿ ಮರದ ಫಲಕದ ಮೇಲೆ ಭಿತ್ತಿಚಿತ್ರಗಳಿರುವ ಕುರಿತು ಮಾಹಿತಿಯನ್ನು ನೀಡಿ, ನನ್ನನ್ನು ಅಧ್ಯಯನಕ್ಕೆ ಒಳಪಡಿಸಿದ ಡಾ. ಎಸ್. ಸಿ. ಪಾಟೀಲರವರನ್ನು ಈ ಸಂದರ್ಭದಲ್ಲಿ ಕೃತಜ್ಞತೆಯಿಂದ ಸ್ಮರಿಸುತ್ತೇನೆ.

**೪. ನವಲಗುಂದ ಗವಿಮಠದ ಭಿತ್ತಿಚಿತ್ರಗಳು**

ನವಲಗುಂದವು ಧಾರವಾಡದಿಂದ ಸುಮಾರು ೩೮ ಕಿ.ಮೀ. ಅಂತರದಲ್ಲಿದೆ. ಇಲ್ಲಿ ಮೂರು ವೀರಶೈವ ಮಠಗಳಿವೆ. ಅವುಗಳಲ್ಲಿ ಪಂಚಗೃಹ ಹಿರೇಮಠ ಮತ್ತು ವಿರಕ್ತ ಪರಂಪರೆಯ ಗವಿಮಠಗಳು ತುಂಬಾ ಪ್ರಖ್ಯಾತಿಯನ್ನು ಪಡೆದ ಮಠಗಳಾಗಿವೆ. ಪ್ರಸ್ತುತ ಇಲ್ಲಿನ ಈ ವೀರಶಯವ ಮಠದಾದ ಗವಿ ಮಠದಲ್ಲಿ ಭಿತ್ತಿಚಿತ್ರಗಳು ರಚನೆಯಾಗಿದ್ದು, ಕಂಡುಬರುತ್ತದೆ.

ಈ ಗವಿ ಮಠವು ಪೂರ್ವಾಭಿಮುಖವಾಗಿದ್ದು, ದೊಡ್ಡದಾದ ಪ್ರವೇಶ ದ್ವಾರವನ್ನು ಹೊಂದಿದೆ. ಎರಡು ಅಂತಸ್ತಿನ ಭವ್ಯವಾದ ಈ ಮಠವು ಮೇಲಂತಸ್ತಿನಲ್ಲಿ ಮಂಗಳೂರು ಹಂಚಿನ ಹೊದಿಕೆಯನ್ನು ಹಾಕಲಾಗಿದೆ. ಮುಖ್ಯ ಪ್ರವೇಶ ದ್ವಾರದ ಮೇಲೆ ಚಿಕ್ಕದಾದ ಗೋಪುರವಿದೆ. ವಿಶಾಲಾಂಗಳದ ಪಶ್ಚಿಮ ಭಾಗದಲ್ಲಿರುವ ತೆರೆದ ಮಂಟಪದಲ್ಲಿ ವರ್ಣಚಿತ್ರಗಳಿವೆ. ಪಶ್ಚಿಮ ಭಾಗದ ಮಂಟಪದ ಮೇಲ್ಛಾವಣಿಯ ಮರದ ಮೇಲೆ ವರ್ಣಚಿತ್ರಗಳು ಮೂರು ಪಟ್ಟಿಕೆಗಳಲ್ಲಿದ್ದು, ಅವು ಈಗಲೂ ನೋಡಲು ಸಿಗುತ್ತವೆ. ಈ ಮೂರು ತೊಲೆಗಳ ಮೇಲೆ ಒಟ್ಟು ೯ ಚಿತ್ರಗಳಿದ್ದು, ಪ್ರತಿಯೊಂದು ತೊಲೆಗಳ ಅಳತೆಯ ೧೨ ಅಡಿಗಳಾಗಿದ್ದು, ಒಂದೊಂದು ತೊಲೆಗಳಲ್ಲಿ ೩ ಚಿತ್ರಗಳಿವೆ.

ಮೂರು ತೊಲೆಗಳಲ್ಲಿ ಚಿತ್ರಗಳಿದ್ದು, ಒಂದನೆಯ ತೊಲೆಯಲ್ಲಿ ನಾಲ್ಕು ಹುಲಿಗಳ ಚಿತ್ರವಿದ್ದು, ಈ ನಾಲ್ಕು ಹುಳಿಗಳಿಗೆ ಒಂದೇ ಮುಖವನ್ನು ಚಿತ್ರಿಸಿದ್ದಾರೆ. ಒಂದೊಂದು ಭಾಗವನ್ನು ಮುಚ್ಚಿದಾಗ ಒಂದೊಂದು ಪೂರ್ಣಪ್ರಮಾಣದ ಹುಲಿಯ ಚಿತ್ರ ಗೋಚರವಾಗುತ್ತದೆ. ಎಡಬದಿಯಲ್ಲಿ ಇಂತಹದ್ದೇ ಮಾದರಿಯ ನಾಲ್ಕು ಸಿಂಹಗಳ ಚಿತ್ರವಿದ್ದು, ಮೇಲಿನ ರೀತಿಯಲ್ಲಿಯೇ ಈ ಚಿತ್ರವನ್ನು ರಚಿಸಲಾಗಿದೆ. ಮುಖವೊಂದೇ ಇದ್ದು, ನಾಲ್ಕು ಸಿಂಹಗಳ ಚಿತ್ರ ಇದಾಗಿದೆ.

ಎರಡನೆಯ ಪಟ್ಟಿಕೆಯಲ್ಲಿ ಆರು ಗಿಳಿ ಮತ್ತು ಜಿಂಕೆಗಳ ಚಿತ್ರಗಳಿದ್ದು, ಇವುಗಳು ಸಹ ಮೊದಲನೆಯ ಪಟ್ಟಿಕೆಯಲ್ಲಿರುವ ಹಾಗೆ ಒಂದೇ ಮುಖವನ್ನು ಹೊಂದಿವೆ. ಮೇಲಿನ ತಂತ್ರಗಾರಿಕೆಯನ್ನೇ ಇಲ್ಲಿಯೂ ಬಳಸಲಾಗಿದೆ. ಮೂರನೆಯ ಪಟ್ಟಿಕೆಯಲ್ಲಿ ಮಂಗನ ಭಂಗಿಯ ಆರು ಚಿತ್ರಗಳಿವೆ. ಇದು ಮೊದಲಿನ ಹಾಗೆ ಇರುವುದು ಗಮನಾರ್ಹ. ಇದರ ಎಡಭಾಗದಲ್ಲಿ ಆನೆ ಮತ್ತು ನಮದಿಯ ಮುಖದ ಚಿತ್ರವಿದ್ದು, ಒಂದನ್ನು ಮುಚ್ಚಿದ್ದರೆ ಒಂದು ಪರಾಣಿ ಸರಿಯಾಗಿ ಕಾಣಿಸಿಕಳ್ಳುತ್ತದೆ. ಹೀಗೆ ಮಾನವರ ಚಿತ್ರಗಳಿಲ್ಲದೇ ಪ್ರಾಣಿ-ಪಕ್ಷಿಗಳ, ಹೂನಕ್ಷೆಗಳ ಚಿತ್ರಗಳು ಇಲ್ಲಿರುವುದು ವಿಶೇಷ.

**ಕಾಲಮಾನ**

ಇವುಗಳ ಕಾಲಮಾನವನ್ನು ಡಾ. ಎಸ್. ಸಿ. ಪಾಟೀಲರವರು ೧೮ನೆಯ ಶತಮಾನದ್ದೆಂದು

ಈ ಅವಧಿಯಲ್ಲಿ ರಚನೆಯಾದ ಬಿ.ಕೆ ಹಳ್ಳಿ, ಅಮ್ಮಿನಭಾವಿ, ಮಹಾಲಿಂಗಪುರ, ನರಗುಂದದ ಭಿತ್ತಿಚಿತ್ರಗಳು ಒಂದೇ ರೀತಿಯಲ್ಲಿರುವುದನ್ನು ಗುರುತಿಸಿ, ಇವು ೧೮ನೆಯ ಶತಮಾನದ ಚಿತ್ರಗಳೆಂದು ಅಭಿಪ್ರಾಯ ಪಟ್ಟಿದ್ದಾರೆ.[೧೬]

ಒಟ್ಟಾರೆ ಧಾರವಾಡ ಜಿಲ್ಲೆಯಲ್ಲಿ ನಾಲ್ಕು ಭಿತ್ತಿಚಿತ್ರಗಳಿರುವ ನೆಲೆಗಳು ಸದ್ಯಕ್ಕೆ ಗೊತ್ತಾಗಿದ್ದು, ೧. ಉಪ್ಪಿನಬೆಟಗೇರಿಯ ಎಲ್ಲಮ್ಮನ ದೇವಸ್ಥಾನ, ೨. ಅಮ್ಮಿನಭಾವಿಯ ಪಂಚಗೃಹ ಹಿರೇಮಠ, ೩. ನವಲಗುಂದದ ಗವಿಮಠ, ೪. ಅಣ್ಣಿಗೇರಿ ವಾಡೆಯ ಭಿತ್ತಿಚಿತ್ರಗಳು. ಬಹುಪಾಲು ಈ ಎಲ್ಲ ನೆಲೆಗಳಲ್ಲಿಯೇ ಚಿತ್ರಗಳು ಹಾಳಾಗಿದ್ದು, ಅವುಗಳ ಅವಶೇಷಗಳು ಮಾತ್ರ ನೋಡಲು ಸಿಗುತ್ತವೆ. ಅಮ್ಮಿನಭಾವಿಯಲ್ಲಿ ಮಾತ್ರ ಮರದ ಮೇಲೆ ರಚಿಸಿದ ಚಿತ್ರಗಳು ಸುಸ್ಥಿತಿಯಲ್ಲಿವೆ. ಇನ್ನುಳಿದ ಗೋಡೆಯ ಮೇಲಿನ ಚಿತ್ರಗಳು, ಕಬ್ಬಿನ ಫಲಕದ ಮೇಲಿನ ಚಿತ್ರಗಳು ಇದ್ದ ಬಗ್ಗೆ ಅಲ್ಲಲ್ಲಿ ಕುರುಹುಗಳು ಮಾತ್ರ ಕಂಡುಬರುತ್ತವೆ.

❑❑❑

೧೬. ಪ್ರೊ. ಎಸ್. ಸಿ. ಪಾಟೀಲ : ಬೆಳಕಿಗೆ ಬಾರದ ನವಲಗುಂದದ ಗವಿಮಠದ ಭಿತ್ತಿಚಿತ್ರಗಳು (ಅ.ಪ್ರ.ಲೇ), ಪುಟ – ೩

## ಅಮ್ಮಿನಭಾವಿ ಮಠದ ಭಿತ್ತಿಚಿತ್ರಗಳು



ಶ್ರೀ ಕೃಷ್ಣನ ವಿಶ್ವರೂಪ ದರ್ಶನ



ಗೋಪಿಕಾ ಸ್ತ್ರೀಯರೊಂದಿಗೆ ಕೃಷ್ಣ



ಕೊಳಲು ನುಡಿಸುತ್ತಿರುವ ಕೃಷ್ಣ



ಲಕ್ಷ್ಮೀನರಸಿಂಹನ ಚಿತ್ರ

# ಅಮ್ಮಿನಭಾವಿ ಮಠದ ಭಿತ್ತಿಚಿತ್ರಗಳು



ಪರಶುರಾಮ, ಜಮದಗ್ನಿ ಕಾಮಧೇನು



ಶಿವ ಪಾರ್ವತಿ ಮತ್ತು ಶಿವಗಣಗಳು



ಶಿವನ ಒಡ್ಡೋಲಗ



ಅಂಬಾರಿಯ ಮೇಲೆ ಕಿತ್ತೂರ ರಾಣಿ ಚನ್ನಮ್ಮನ ಮೆರವಣಿಗೆ

# ಅಮ್ಮಿನಭಾವಿ ಮಠದ ಭಿತ್ತಿಚಿತ್ರಗಳು





ಅಷ್ಟ ದಿಕ್ಪಾಲಕರು



ಸಂಗೊಳ್ಳಿ ರಾಯಣ್ಣನಿಗೆ ಶಿಕ್ಷೆ ಕೊಡುತ್ತಿರುವದು



ಮಠದ ಸ್ವಾಮಿಗಳು ತಮ್ಮ ಅನುಯಾಯಿಗಳ ಜೊತೆ ಚರ್ಚೆ ನಡೆಸುತ್ತಿರುವದು



ದಕ್ಷ ಬ್ರಹ್ಮನ ಯಜ್ಞ

# ಅಮ್ಮಿನಭಾವಿ ಮಠದ ಭಿತ್ತಿಚಿತ್ರಗಳು



ತ್ರಿಪುರಸಂಹಾರ ದೃಶ್ಯ



ಕೃಷ್ಣಾರ್ಜುನ ಕಾಳಗ



ಹೂಬಳ್ಳಿಯ ನಕ್ಷಾ ಚಿತ್ರಗಳು



ಕಾಲ್ಪನಿಕ ಪಕ್ಷಿಯ ಚಿತ್ರ

# ಅಮ್ಮಿನಭಾವಿ ಮಠದ ಮರದ ಅಲಂಕಾರಿಕ ವಿನ್ಯಾಸಗಳು

















# ಅಣ್ಣಿಗೇರಿ ವಾಡೇಯ ಭಿತ್ತಿ ಚಿತ್ರಗಳು



ಅಣ್ಣಿಗೇರಿಯ ಎರಡನೆಯ ವಾಡೆ ಚಿತ್ರ



ಕಟ್ಟಿಗೆ ಫಲಕದ ಮೇಲಿರುವ ಚಿತ್ರ

# ಅಣ್ಣಿಗೇರಿ ವಾಡೆಯ ಮರದ ಅಲಂಕಾರಿಕ ವಿನ್ಯಾಸಗಳು













# ಅಣ್ಣಿಗೇರಿ ವಾಡೆಯ ಮರದ ಅಲಂಕಾರಿಕ ವಿನ್ಯಾಸಗಳು











## ಅಧ್ಯಾಯ – ೫

# ಧಾರವಾಡ ಜಿಲ್ಲೆಯ ವಸ್ತು ಸಂಗ್ರಹಾಲಯದ ಚಿತ್ರಕಲೆ

"ಯಾವುದೇ ದೇಶದ ವಸ್ತುಸಂಗ್ರಹಾಲಯಗಳು ಆಯಾದೇಶದ ಸಂಸ್ಕೃತಿ, ಇತಿಹಾಸ ಮತ್ತು ಪರಂಪರೆಯನ್ನು ಪ್ರತಿನಿಧಿಸುತ್ತವೆ ಮತ್ತು ಸಾಂಸ್ಕೃತಿಕ ಪಾರಂಪರಿಕ ಮಹತ್ವದ ಯಾವುದೇ ವಸ್ತುಗಳ ಸಂರಕ್ಷಣೆ, ಅವುಗಳನ್ನು ಮುಂದಿನ ಪೀಳಿಗೆಗೆ ಉಳಿಸಿಕೊಂಡು ಹೋಗುವ ಮಹತ್ವದ ಜವಾಬ್ದಾರಿ ವಸ್ತುಸಂಗ್ರಹಾಲಯಗಳ ಮೇಲಿದೆ. ಗತಕಾಲದ ಸಂಸ್ಕೃತಿ ಮತ್ತು ನಾಗರಿಕತೆಯನ್ನು ತಿಳಿಯಬೇಕಾದರೆ ನಮ್ಮ ಪೂರ್ವಿಕರು ಬಳಸಿದ ವಸ್ತುಗಳಿಂದ ಮಾತ್ರ ಸಾಧ್ಯವಾಗುತ್ತದೆ. ಅಂತಹ ವಸ್ತುಗಳಲ್ಲಿ ನಾಣ್ಯಗಳು, ಅಳತೆಯ ಪರಿಕರಗಳು, ಅಮೂಲ್ಯವಾದ ತಾಳೆಗರಿಗಳು, ಕಾಗದದ ಕೈ ಬರಹಗಳು ಮಕ್ಕಳ ಆಟಿಕೆಗಳು ಮುಂತಾದ ವಸ್ತುಗಳು ನಮ್ಮ ಗ್ರಾಮೀಣ ಸಂಸ್ಕೃತಿ, ಅವರ ಜೀವನವನ್ನು ಕುರಿತಾಗ ಮಾಹಿತಿ ನೀಡುತ್ತವೆ. ಒಂದು ಪ್ರದೇಶದ ಇತಿಹಾಸ, ಕಲೆ, ಸಂಸ್ಕೃತಿ, ನಾಗರಿಕತೆ ಇವುಗಳ ಪರಿಚಯ ಮಾಡಿಕೊಳ್ಳುವಲ್ಲಿ ವಸ್ತುಸಂಗ್ರಹಾಲಯಗಳು ತುಂಬಾ ನೆರವಾಗುತ್ತವೆ. ಇಂಥ ವಸ್ತುಸಂಗ್ರಹಾಲಯಗಳಲ್ಲಿ ಸಂಗ್ರಹಿಸಲ್ಪಟ್ಟ ವಸ್ತುಗಳ ಅಧ್ಯಯನದಿಂದ ನಮ್ಮ ಸಂವೇದನಾಶೀಲ ಮನಸ್ಸು ಜಾಗೃತವಾಗುತ್ತದೆ. ನಮ್ಮ ಪೂರ್ವಿಕರ ಆ ವಸ್ತುಗಳನ್ನು ನೋಡಿದಾಕ್ಷಣ ಮನಸ್ಸು ಚಿಂತನಾಮಗ್ನವಾಗುತ್ತದೆ. ಆ ವಸ್ತುಗಳ ಇತಿಹಾಸ ಕೆದಕಲು ಪ್ರಾರಂಭಿಸುತ್ತದೆ. ವಸ್ತುಸಂಗ್ರಹಾಲಯಗಳು ವೈವಿಧ್ಯಮಯ ವಸ್ತುಗಳ ಅಪೂರ್ವ ಖಜಾನೆ ಅಲ್ಲಿ ಕಾಣಸಿಗುವ ವಸ್ತುವಿಶೇಷಗಳು ಬೇರೆಲ್ಲಿಯೂ ನೋಡಸಿಗುವುದಿಲ್ಲ. ಆ ವಸ್ತುಗಳಲ್ಲಿ ನಾವು ಒಂದು ಪರಂಪರೆಯನ್ನು ಗುರುತಿಸಲು ಸಾಧ್ಯವಾಗುತ್ತದೆ.

ಮ್ಯೂಸಿಯಂ ಎಂದರೆ ಕೇವಲ ವಸ್ತುಗಳ ಸಂಗ್ರಹಾಲಯ ಎಂದಷ್ಟೇ ತಿಳಿದರೆ ತಪ್ಪಾದೀತು. ಅದು ಒಂದು ಅಧ್ಯಯನ ಕೇಂದ್ರವು ಹೌದು. ನಮ್ಮ ದೇಶದ ಚರಿತ್ರೆ, ಕಲೆ, ಸಾಹಿತ್ಯ, ಸಂಸ್ಕೃತಿ,

ಸಂಗೀತ ಪರಿಕರಗಳು ಇವನ್ನೆಲ್ಲ ಅಲ್ಲಿನ ವಸ್ತುಗಳನ್ನು ಅವಲೋಕಿಸಿ, ವಿಷಯ ಗ್ರಹಿಸಿ ತಿಳಿಯಲು ಅವಕಾಶವಿರುತ್ತದೆ. ಆಯಾವಸ್ತುಗಳು ಒಂದು ವಿಭಿನ್ನ ಕಾಲವನ್ನು ಇಲ್ಲವೇಇತಿಹಾಸ ಯುಗವನ್ನು ಪ್ರತಿನಿಧಿಸುತ್ತವೆ.[೧]

"ಮ್ಯೂಸಿಯಂ" ಪದಕ್ಕೆ ವಿವರಣೆಯನ್ನು ಕೊಡುವುದು ಇಂದು ತುಂಬಾ ಕಠಿಣವಾಗಿದೆ. ಈ ಶಬ್ದ ಗ್ರೀಕ್ ಕಲಾಭಿಮಾನಿ ದೇವತೆಗಳ ಗರ್ಭಗುಡಿ (Sunctuary of Muse) ಎಂಬ ಅರ್ಥವನ್ನು ಸೂಚಿಸುವ ಗ್ರೀಕ್ ಶಬ್ದದಿಂದ ವ್ಯುತ್ಪನ್ನವಾಗಿದೆ. ಇದಕ್ಕೆ ಕಾರಣ ಅದರ ಅಗಾಧ ವ್ಯಾಪ್ತಿ ಮತ್ತು ವೈವಿಧ್ಯಮಯ ಲಕ್ಷಣ. ಈ ಕಲಾಭಿಮಾನಿ ದೇವತೆ ಎಲ್ಲ ವಿದ್ಯೆ ಮತ್ತು ಕಲೆಗಳ ಆಧಿದೇವತೆ ಶೈಕ್ಷಣಿಕ ಅನುಸಂದಾನಕ್ಕೆ ಸಂಬಂಧಿಸಿದ ಅದರ ಲಕ್ಷಣ ಒಂದಲ್ಲ ಒಂದು ರೂಪದಲ್ಲಿ ಇಂದು ವಸ್ತುಸಂಗ್ರಹಾಲಯಗಳಲ್ಲಿ ಉಳಿದುಕೊಂಡುಬಂದಿದೆ. ಒಂದು ಗುರಿಯನ್ನು ಸಾಧಿಸಲೋಸುಗವೇ ವಸ್ತುಸಂಗ್ರಹಾಲಯಗಳು ಒಂದೆಡೆ ಗತಕಾಲದ ವಸ್ತುಗಳನ್ನು ಸಂಗ್ರಹಿಸಿ, ಸಂರಕ್ಷಿಸಿ ಅವನ್ನು ವ್ಯವಸ್ಥಿತ ರೀತಿಯಲ್ಲಿ ನಿರೂಪಣೆ ಮಾಡಬೇಕು ಮತ್ತುಇನ್ನೊಂದೆಡೆ ಜನತೆಗೆ ಮನರಂಜನೆಯನ್ನು ಜ್ಞಾನ ಪ್ರಕಾಶವನ್ನು ನೀಡಬೇಕು. ವಿದ್ವಾಂಸರೊಬ್ಬರು ಅದರ ವ್ಯಾಪ್ತಿಯನ್ನು ಸೂಚಿಸಿರುವಂತೆ ಸಂಗ್ರಹವಾಗಿ ಹೇಳಬೇಕೆಂದರೆ ಇಂದು ವಸ್ತು ಸಂಗ್ರಹಾಲಯ ವಸ್ತುವಿಷಯಗಳನ್ನು ನಿರೂಪಿಸುವ ಕಾರ್ಯಗಾರ ಅದು ವಸ್ತುವಿಷಯಗಳ ಬೋಧನಾ ಶಾಲೆ ಸಾಂಸ್ಕೃತಿಕ ಆನಂದ ಪಡೆಯುವ ತಾಣ, ಪ್ರೇಕ್ಷಕನು ತನ್ನ ದಿನ ನಿತ್ಯದ ದುಡಿತದ ಬಳಲಿಕೆ ಅಥವಾ ಆತಂಕಗಳಿಂದ ವಿರಾಮ ಪಡೆಯುವ ಹಾಗೂ ವಿಶಾಲ ಜ್ಞಾನ ದಿಗಂತಗಳನ್ನು ಕಾಣುವ ಸ್ಥಳ.[೨]

**ಭಾರತದ ವಸ್ತು ಸಂಗ್ರಹಾಲಯಗಳ ಇತಿಹಾಸ ಮತ್ತು ಬೆಳವಣಿಗೆ**

ಭಾರತದ ವಸ್ತು ಸಂಗ್ರಹಾಲಯಗಳ ಬಗೆಗೆ ಮೊದಲ ಉಲ್ಲೇಖ ಕಂಡುಬರುವುದು ಸಂಸ್ಕೃತ ಸಾಹಿತ್ಯದಲ್ಲಿ ಸಾಮಾನ್ಯವಾಗಿ ರಾಜರು ಶ್ರೀಮಂತರು ತಮ್ಮ ಬಿಡುವಿನ ವೇಳೆಯನ್ನು ಕಳೆದು ಹರ್ಷಿತರಾಗಲೋಸುಗ ನಿರ್ಮಿಸಿಕೊಂಡಿರುತ್ತಿದ್ದ ಚಿತ್ರಶಾಲೆಗಳಿದ್ದುವು. ಇವುಗಳಲ್ಲಿ ವರ್ಣಚಿತ್ರಗಳನ್ನೂ, ಅಲಂಕಾರಿಕ ಕಲಾ ವಸ್ತುಗಳನ್ನು ಪ್ರದರ್ಶಿಸಿರುತ್ತಿದ್ದರು. ಆದರೆ, ಇದಾವು ಆಧುನಿಕ ವಸ್ತುಸಂಗ್ರಹಾಲಯಗಳ ಗುಂಪಿಗೆ ಸೇರಲಾರವು. ಜನತಾ ಸೇವೆಗೆಂದೆ ನಿರ್ಮಿತವಾಗಿರುವ ಈಗಿನ ವಸ್ತುಸಂಗ್ರಹಾಲಯಗಳ ಮುಖ್ಯ ಗುರಿ ಆ ಹಿಂದಣ ಕಲಾಶಾಲೆಗಳಲ್ಲಿರಲಿಲ್ಲ. ಅವು ಸಾಮಾನ್ಯ ಮನುಷ್ಯನ ಕೈಗೆಟುಕುವಂತಹವಾಗಿರಲಿಲ್ಲ. ಶ್ರೀಸಾಮಾನ್ಯನಿಗೆ ಈ ಸೌಲಭ್ಯ ದೊರೆತುದು ಬ್ರಿಟಿಷ್ ಮ್ಯೂಸಿಯಂ ಸ್ಥಾಪಿತವಾದ ನಲ್ವತ್ತು ವರ್ಷಗಳ ಮೇಲೆ.[೩]

---

೦೧. ಪಿ. ಬಿ. ಗವಾನಿ : ಕರ್ನಾಟಕದ ವಸ್ತುಸಂಗ್ರಹಾಲಯಗಳಲ್ಲಿನ ಚಿತ್ರಕಲೆ, ಅಪ್ರ.ಪಿಹೆಚ್.ಡಿ.ಮ.ಪ್ರ, ಪುಟ – ೨

೦೨. ಡಾ. ಹಾ. ಮಾ. ನಾಯಕ (ಪ್ರ.ಸಂ.) : ವಸ್ತುಸಂಗ್ರಹಾಲಯಶಾಸ್ತ್ರದ ಮೂಲತತ್ವಗಳು, ಪುಟ – ೨

೦೩. ಅದೇ., ಪುಟ – ೮

**ಕನ್ನಡ ಸಂಶೋಧನ ಸಂಸ್ಥೆಯ ವಸ್ತುಸಂಗ್ರಹಾಲಯ**

ಧಾರವಾಡ ಜಿಲ್ಲೆಯ ಕರ್ನಾಟಕ ವಿಶ್ವವಿದ್ಯಾಲಯದ ಒಂದು ಭಾಗವಾಗಿರುವ ಈ ಕನ್ನಡ ಸಂಶೋಧನ ಸಂಸ್ಥೆಯ ವಸ್ತುಸಂಗ್ರಹಾಲಯ ಕನ್ನಡ ನಾಡಿನ ಐತಿಹಾಸಿ ಸಾಂಸ್ಕೃತಿಕ ಪರಂಪರೆಯ ಸಂಶೋಧನಾ ಕಾರ್ಯಕ್ಕೆ ತೊಡಗಿಸಿಕೊಂಡಿದೆ.

ಭಾರತದ ಇತಿಹಾಸದಲ್ಲಿ ಪ್ರಮುಖ ಸ್ಥಾನ ಪಡೆದಿದ್ದ ಕರ್ನಾಟಕ ರಾಜ್ಯವಾರು ವಿಂಗಡಣೆಯಲ್ಲಿ ಹರಿದು ಹಂಚಿ ಹೋಗಿದ್ದಿತ್ತು. ಇದನ್ನು ಪುನಃ ಸ್ಥಾಪಿಸುವ ಹಿನ್ನೆಲೆಯಲ್ಲಿ ಕನ್ನಡ ನಾಡಿನ ಇತಿಹಾಸ ಸಂಸ್ಕೃತಿ ಸಾಹಿತ್ಯಿಕ ಪರಂಪರೆ ಕುರಿತು ಸಂಶೋಧನೆ ನಡೆಯಬೇಕಾದುದರ ಅವಶ್ಯಕತೆಯನ್ನು ಅಂದಿನ ಮುಂಬಯಿ ಸರಕಾರಕ್ಕೆ ಮನವರಿಕೆ ಮಾಡಿಕೊಡುವ ಪ್ರಯತ್ನ ೧೯೩೭ರಲ್ಲಿ ಆರಂಭಗೊಂಡಿತು.

೧೯೩೮ರಲ್ಲಿ ಬಾಂಬೆ ಸರಕಾರ ಒಂದು ಸಮಿತಿಯನ್ನು ನೇಮಿಸಿತು. ಈ ಸಮಿತಿಯ ವರದಿಯನ್ನಾಧರಿಸಿ ೧೯೩೯ನೇಯ ಮೇ ತಿಂಗಳಲ್ಲಿ ಕನ್ನಡ ರಿಸರ್ಚ್ ಆಫೀಸ ಎಂಬ ಹೆಸರಿನೊಂದಿಗೆ ಈ ಸಂಸ್ಥೆ ಅಸ್ತಿತ್ವಕ್ಕೆ ಬಂದಿತು. ಕರ್ನಾಟಕ ಕಾಲೇಜಿನ ನಿಕಟ ಸಂಪರ್ಕದಲ್ಲಿ ಕನ್ನಡ ಸಂಶೋಧನೆ ನಡೆಯಬೇಕೆಂದು ಆ ಕಾಲೇಜಿನ ಕನ್ನಡ ಪ್ರಾಧ್ಯಾಪಕರನ್ನು ಸದಸ್ಯರೆಂದು ನೇಮಕ ಮಾಡಲಾಯಿತು. ೧೯೩೯ರ ಸೆಪ್ಟೆಂಬರ್‌ವರೆಗೆ ಇವರುಗಳೇ ನಿರ್ದೇಶಕರೆಂದೂ ಕಾರ್ಯನಿರ್ವಹಿಸಿದರು. ಡಾ.ಎಸ್.ಸಿ.ನಂದೀಮಠ ಅವರ ಅಧ್ಯಕ್ಷತೆಯಲ್ಲಿ ಸಂಶೋಧನಾ ಸಲಹಾ ಸಮಿತಿ ನೇಮಕಗೊಂಡು ಸಂಶೋಧನೆಯ ರೂಪರೇಷೆಗಳನ್ನು ಸಿದ್ಧಪಡಿಸಲಾಯಿತು.

೧೯೩೯ನೇಯ ಅಕ್ಟೋಬರ್ ತಿಂಗಳಲ್ಲಿ ಶ್ರೀ. ಆರ್.ಎಸ್.ಪಂಚಮುಖಿಯವರು ಈ ಸಂಸ್ಥೆಯ ಪ್ರಥಮ ನಿರ್ದೇಶಕರಾಗಿ ನೇಮಕಗೊಂಡರು. ಸಂಸ್ಥೆಯ ಕಚೇರಿ ಕರ್ನಾಟಕ ಕಾಲೇಜಿನ ಸಾರಸ್ವತಿಪುರದ ಉಭಯಕರರ ಬಂಗಲೆಗೆ ೧೯೪೦ರಲ್ಲಿ ಸ್ಥಳಾಂತರಗೊಂಡಿತು. ೧೯೪೭ರಲ್ಲಿ ಉಳವಿ ಬಸಪ್ಪ ಗುಡ್ಡದ ಧಾರಾಮಹಲ್‌ನ ಬಂಗಲೆಯಲ್ಲಿ ನೆಲೆಗೊಂಡಿತು. ಈ ಕಟ್ಟಡವು ಕೂಡ ಸಂಸ್ಥೆಯ ವಸ್ತು ಸಂಗ್ರಹಾಲಯಕ್ಕೆ ಅನುಕೂಲಕರವಾಗಿರಲಿಲ್ಲ. ಈ ಅಂಶಗಳನ್ನು ಗಮನಿಸಿ ಪ್ರಾಚ್ಯ ವಸ್ತು ಸಂಗ್ರಹಾಲಯದ ಯೋಜನೆ ತಯಾರಿಸಿ ಸ್ವತಂತ್ರ ಕಟ್ಟಡ ಒದಗಿಸಲು ಸರಕಾರಕ್ಕೆ ಮನವಿ ಸಲ್ಲಿಸಲಾಗಿ ಸರಕಾರ ತಾತ್ವಿಕವಾಗಿ ಒಪ್ಪಿಕೊಂಡಿತು.

ಧಾರವಾಡದಲ್ಲಿ ೧೯೪೯ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಅಸ್ತಿತ್ವಕ್ಕೆ ಬಂದು ಶೈಕ್ಷಣಿಕ ಕಾರ್ಯ ಚಟುವಟಿಕೆಗಳನ್ನು ಆರಂಭಿಸಿತು. ೧೯೫೬ರಲ್ಲಿ ಕರ್ನಾಟಕ ಏಕೀಕರಣಗೊಂಡು ಅಖಂಡ ಕರ್ನಾಟಕದ ಸ್ಥಾಪನೆಯಾಗಿ ಅದುವರೆಗೆ ಮುಂಬಯಿ ಸರಕಾರದಲ್ಲಿದ್ದ ವಿಜಾಪೂರ, ಬೆಳಗಾವಿ, ಧಾರವಾಡ ಹಾಗೂ ಕಾರವಾರ ಜಿಲ್ಲಾ ಪ್ರದೇಶಗಳು ಮೈಸೂರು ರಾಜ್ಯಕ್ಕೆ ಸೇರ್ಪಡೆಯಾದವು.

ಈ ಸಂದರ್ಭದಲ್ಲಿ ಕನ್ನಡ ಸಂಶೋಧನೆಯ ಸಂಸ್ಥೆ ಜವಾಬ್ದಾರಿ ಹೊತ್ತು ಮುಂಬಯಿ ಸರಕಾರವು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಹಸ್ತಾಂತರ ಮಾಡಿತು. ೧೯೫೬ ನವೆಂಬರ್ ೧ ರಿಂದ ಕನ್ನಡ ಸಂಶೋಧನ ಸಂಸ್ಥೆಯಾಗಿ ಕರ್ನಾಟಕ ವಿಶ್ವವಿದ್ಯಾಲಯದ ಭಾಗವಾಗಿ ತನ್ನ ಕಾರ್ಯ ಆರಂಭ ಮಾಡಿತು.[೪]

ಸಾಂಸ್ಕೃತಿಕ ಪುರಾವೆಗಳ ದೃಷ್ಟಿಯಿಂದ ಈ ಸಂಸ್ಥೆಯ ವಸ್ತು ಸಂಗ್ರಹಾಲಯದ ಪಾತ್ರ ಬಹುದೊಡ್ಡದೆನಿಸಿದೆ. ಈ ವಸ್ತು ಸಂಗ್ರಹಾಲಯದಲ್ಲಿರುವ ಮೂರ್ತಿ ಶಿಲ್ಪ ಮತ್ತು ಪ್ರಾಚ್ಯಾವಶೇಷಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ. ಶಿಲಾ ಶಾಸನಗಳು ೪೫, ತಾಮ್ರಪಟ ಶಾಸನಗಳು ೫೮, ಶಿಲಾಮೂರ್ತಿಗಳು ೧೭೫, ಕಟ್ಟಿಗೆ ಮೂರ್ತಿಗಳು ೮, ಲೋಹದ ವಿಗ್ರಹಗಳು ೧೦೫, ನಾಣ್ಯಗಳು ೧೫, ತಾಮ್ರದ ನಾಣ್ಯಗಳು ೧೯, ವಿದೇಶಿನಾಣ್ಯಗಳು ೫೪, ಹಸ್ತಪ್ರತಿಗಳು ಸುಮಾರು ೫೦೦೦ ಕನ್ನಡ ಅಧ್ಯಯನ ಪೀಠಕ್ಕೆ ವರ್ಗಾಯಿಸಲಾಗಿದೆ. ಕಡತಗಳ ೨ ಲೇಖನಗಳ ಸಾಮಗ್ರಿ ಹಳೆಯ ಶಿಲಾಯುಗ, ಮಧ್ಯ ಹಳೆ ಶಿಲಾಯುಗ, ಅಂತ್ಯ ಹಳೆ ಶಿಲಾಯುಗ, ಸೂಕ್ಷ್ಮ ಶಿಲಾಯುಗ, ನೂತನ ತಾಮ್ರ ಸಂಸ್ಕೃತಿಯ ಅವಶೇಷಗಳು, ಕಬ್ಬಿಣದ ಬೃಹತ್ ಶಿಲಾ ಸಂಸ್ಕೃತಿ ಅವಶೇಷಗಳು, ಸಿಂಧೂನಾಗರಿಕತೆ ಸಂಸ್ಕೃತಿಯ ಅವಶೇಷಗಳು ಮತ್ತು ಇತಿಹಾಸ ಆರಂಭ ಕಾಲದ ಸಂಸ್ಕೃತಿಯ ಅವಶೇಷಗಳು ಇಲ್ಲಿ ಸಂಗ್ರಹಗೊಂಡಿವೆ.

ಈ ವಸ್ತುಸಂಗ್ರಹಾಲಯದಲ್ಲಿ ವಿಶೇಷವಾದ ಹಸ್ತಪ್ರತಿಗಳನ್ನು ಸಂಗ್ರಹಿಸಲಾಗಿದೆ. ಅವುಗಳಲ್ಲಿ ೪೦೦ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಸಂಸ್ಥೆಯಲ್ಲಿವೆ. ಈ ಸಂಗ್ರಹಾಲಯದಲ್ಲಿ ಕೆಲವುಗಳನ್ನು ಮಾತ್ರ ಪ್ರದರ್ಶಿಸಲಾಗಿದೆ. ಅವುಗಳು ಶ್ರೀ ಕೃಷ್ಣರಾಜ ಒಡೆಯರ ಮೈಸೂರು ಹಸ್ತಪ್ರತಿಗಳು, ಮನುಸ್ಮೃತಿಗಳು, ಶಬ್ದಮಣಿ ದರ್ಪಣದ ಒಳಗೊಂಡಿದ್ದು ಮಾಲಿಕಾಶ್ಲೋಕ, ತಿಗಳಾರಿ ಲಿಪಿಯದು ಚಿಕ್ಕಗ್ರಂಥ, ಅಡಕೆಯ ಹಾಳೆಯನ್ನು ಕಟ್ಟಿನಂತೆ ಉಪಯೋಗಿಸಲಾಗಿದೆ.

ಈ ವಸ್ತುಸಂಗ್ರಹಾಲಯ ಛಾಯಾ ಚಿತ್ರ ಮತ್ತು ಚಿತ್ರ ಕಲಾಕೃತಿಗಳ ಒಂದು ವಿಭಾಗವನ್ನು ಹೊಂದಿದು ಅದರ ಕುರಿತು ಇಲ್ಲಿ ಅಧ್ಯಯನ ಮಾಡಲಾಗಿದೆ. ವಸ್ತು ಸಂಗ್ರಹಾಲಯದಲ್ಲಿ ಸಂಗ್ರಹಗೊಂಡ ಛಾಯಾಚಿತ್ರಗಳು ದೇವಾಲಯಗಳ ಮಹತ್ವವನ್ನು ತಿಳಿಯಲು ಸಹಾಯಕವಾಗಿವೆ. ಇವುಗಳನ್ನು ಕೆಳಗಿನಂತೆ ಪಟ್ಟಿ ಮಾಡಲಾಗಿದೆ. ಮೇಗುತಿ ದೇವಾಲಯ ಐಹೊಳೆ, ಗಳಗನಾಥ ದೇವಾಲಯ ಪಟ್ಟದಕಲ್ಲು ಭೂತನಾಥ ದೇವಾಲಯ ಬಾದಾಮಿ, ವಿರೂಪಾಕ್ಷ ದೇವಾಲಯ ಪಟ್ಟದಕಲ್ಲು, ಗೋಲಗುಂಬಜ್ ಬಿಜಾಪೂರ, ಶಿವ ಮತ್ತು ನಟರಾಜ ಪಟ್ಟದಕಲ್ಲು ಒಂದನೆಯ ಗುಹೆಯ ಗಜ ವೃಷಭ ಬಾದಾಮಿ, ದುರ್ಗಾ ದೇವಾಲಯ ಐಹೊಳೆ, ಪಂಚಾಯತಿ ಕಟ್ಟೆ ಹಂಪೆ ಇತ್ಯಾದಿ. ಶಿಲ್ಪಗಳ ಛಾಯಾ ಚಿತ್ರಗಳು ಮತ್ತು ಧಾರವಾಡ ಜಿಲ್ಲೆಯ ಐತಿಹಾಸಿಕ ಸ್ಮಾರಕ ಶಿಲ್ಪಗಳ

---

೦೪. ಸಂದರ್ಶನ : ಎಸ್. ಎಸ್. ಮೇಲಕಾರ, ೨೪.೦೪.೧೩

ಛಾಯಾಚಿತ್ರಗಳನ್ನು ಸಹ ಪ್ರದರ್ಶಿಸಲಾಗಿದೆ. ಸಂಗ್ರಹಾಲಯದಲ್ಲಿ ಸಂಗ್ರಹಗೊಂಡ ಚಿತ್ರಕಲಾಕೃತಿ ಕೆಳಗಿನಂತಿವೆ.

**ನೃತ್ಯಗಾರರು**

೧ x ೧೧/೨ ಅಳತೆಯ ಈ ಚಿತ್ರವು ಮೂಲ ಬಾದಾಮಿಯ ಗುಹಾಭಿತ್ತಿ ಚಿತ್ರವಾಗಿದ್ದು. ಇದನ್ನು ಡಾ.ಎಂ.ವಿ.ಮಿಣಜಗಿಯವರು ಪ್ರತಿಕೃತಿ ಮಾಡಿದ್ದಾರೆ. ದೊಡ್ಡದಾದ ಪಟ್ಟಿಯೊಂದು ಅರಮನೆಯ ದೃಶ್ಯವೊಂದನ್ನು ದರ್ಶಿಸುತ್ತದೆ. ಮಧ್ಯದಲ್ಲಿ ಕುಳಿತ ಮಹಿಳೆಯ ಆಭರಣ ಅವಳ ವೇಷ ಭೂಷಣಗಳು ಆಕೆ ರಾಣಿಯೆಂದು ತೋರುತ್ತದೆ. ಮಧ್ಯದಲ್ಲಿ ಕುಳಿತ ಆಕೆ ಸಂಗೀತ ಮತ್ತು ನೃತ್ಯಗಳನ್ನು ಆಸ್ವಾದಿಸುತ್ತಿದ್ದಾಳೆ. ನೀಲಿ ಹಸಿರು ಮೈ ಬಣ್ಣದ ವ್ಯಕ್ತಿ ತನ್ನ ಕಾಲೊಂದನ್ನು ಸುಪ್ಪತ್ತಿಗೆಯ ಮೇಲೇರಿಸಿ ಮತ್ತೊಂದನ್ನು ಪಾದಪೀಠದ ಮೇಲಿರಿಸಿದೆ. ಆದರೆ ಚಿತ್ರವು ಸ್ಪಷ್ಟವಾಗಿ ಗುರುತಿಸಲು ಆಗದಷ್ಟು ಮಸಕಾಗಿದೆ. ವ್ಯಕ್ತಿಯ ಮುಖ ಮತ್ತು ಕೈಗಳನ್ನು ಗುರುತಿಸಬಹುದಾಗಿದೆ. ಮುಖವು ಭಾಗಶಃ ಅಳಿದು ಹೋಗಿದರು. ಮುಕುಟದ ಭಾಗವೊಂದು ಕಾಣಿಸುತ್ತದೆ. ಕತ್ತಿನಲ್ಲಿ ಚಾಲುಕ್ಯ ಶೈಲಿಯಲ್ಲಿ ಸಾಮಾನ್ಯವಾದ, ತೂಗುವ ಕುಚ್ಚುಗಳ ಸುಂದರವಾದ ಮಾಲೆಯಿದೆ. ಇವುಗಳ ಜೊತೆಗೆ ಚಾಮರಧಾರಿಗಳಾದ ಸೇವಕಿಯರ ಅಸ್ಪಷ್ಟ ಆಕೃತಿಗಳು ಕಂಡುಬರುತ್ತವೆ. ಎಡಕ್ಕೆ ಸಂಗೀತಗಾರರು ಹಾಗೂ ಸುಂದರ ಆಕೃತಿಗಳಿವೆ. ಸುಂದರವಾದ ಪುರುಷನ ಆಕೃತಿಯ ನೃತ್ಯವನ್ನು ಮಾಡುತ್ತಿರುವಂತೆ ತೋರುತ್ತದೆ. ಆತನ ಹಿಂಬದಿಯ ಆಕೃತಿಯನ್ನೇ ಪ್ರಧಾನವಾಗಿ ತೋರಿದಂತೆ ಕಾಣುತ್ತದೆ. ಪಕ್ಕದಲ್ಲಿದ ಸ್ತ್ರೀಯು ನೃತ್ಯಭಂಗಿಯಲ್ಲಿದ್ದು ಕೈ ಮತ್ತು ಕಾಲುಗಳು ಮಾತ್ರ ಗೋಚರಿಸುತ್ತವೆ.

**ಸೇವಕರೊಡನೆ ರಾಣಿ**

೧ x ೧೧/೨ ಅಳತೆಯ ಚಿತ್ರವು ಮೂಲ ಬಾದಾಮಿಯ ಗುಹಾ ಭಿತ್ತಿಚಿತ್ರವಾದ್ದು. ಇದನ್ನು ಡಾ.ಎಂ.ವಿ.ಮಿಣಜನಿಯವರು ಪ್ರತಿಕೃತಿ ಮಾಡಿದ್ದಾರೆ. ರಾಣಿ ಓರ್ವಳು ಎತ್ತರವಿಲ್ಲದ ಹಾಸಿಗೆಯ ಮೇಲೆ ಕುಳಿತು ಆಯತಾಕಾರದ ದಿಂಬುಗಳಿಗೆ ಒರಗಿದ್ದಾಳೆ. ರಾಣಿಯ ಸುಖಾಸೀನಳಾಗಿ ಕುಳಿತಿದ್ದು ಆಕೆಯ ಬಲಗಾಲು ಪಾದಪೀಠವನ್ನು ಸ್ಪರ್ಶಿಸುತ್ತಿದೆ. ಎಡಗಾಲು ಆಸನದ ಮೇಲೆಯೇಇದ್ದು ಮೇಲೆತ್ತಿದೆ. ಆಕೆಯ ಕಿವಿಯ ಓಲೆಗಳು ದೊಡ್ಡದಾಗಿ ಪತ್ರ ಕುಂಡಲದಂತಿವೆ. ತೋಳಗಳನ್ನು ಅನಂತ ತೋಳಬಂದಿಗಳಿಂದ ಅಲಂಕರಿಸಲಾಗಿದೆ. ಕುತ್ತಿಗೆಯ ಹಾರ ಮತ್ತು ಕಡಗಗಳನ್ನು ಧರಿಸಿದ್ದಾಳೆ. ತಿಳಿ ಹಸಿರು ಬಣ್ಣದ ಪ್ರಭಾವ ಈ ಕೃತಿಯಲ್ಲಿ ಹೆಚ್ಚಾಗಿದೆ. ಒಬ್ಬ ಸೇವಕಿಯು ರಾಣಿಯ ಕಾಲಿಗೆ ಕೆಂಪು ಅರಗನ್ನು ಲೇಪಿಸುತ್ತಿದ್ದಾಳೆ. ಓರ್ವ ಪರಿಚಾರಕಿ ಚಾಮರವನ್ನು ಹಿಡಿದು ನಿಂತಿದ್ದಾಳೆ.

**ವಿದ್ಯಾಧರ ದಂಪತಿಗಳು**

ಗಗನದಲ್ಲಿ ಹಾರುತ್ತಿರುವ ವಿದ್ಯಾಧರ ದಂಪತಿಗಳಾಗಿವೆ. ಒಂದು ಚಿತ್ರದಲ್ಲಿ ಒಬ್ಬರು ಇನ್ನೊಬ್ಬರ ಕೊರಳು ಅಪ್ಪಿ ಹಿಡಿದು ಹಾರುತ್ತಿದ್ದರೆ, ಇನ್ನೊಂದರಲ್ಲಿ ವಿದ್ಯಾಧರನೊಬ್ಬನು ವೀಣೆಯನ್ನು ನುಡಿಸುತ್ತಿದ್ದಾನೆ. ಇಲ್ಲಿ ಪುರುಷರನ್ನು ಬೂದುವರ್ಣದಲ್ಲಿ ಚಿತ್ರಿಸಿದ್ದಾರೆ ಸ್ತ್ರೀಯರಿಗೆ ಹಸಿರು, ನೀಲಿ ವರ್ಣಗಳನ್ನು ಲೇಪಿಸಲಾಗಿದೆ. ಎರಡನೇ ಜೋಡಿ ಇನ್ನೂ ಸುಂದರವಾಗಿದೆ. ಆದರೆ ಮೊದಲಿನ ಚಿತ್ರದ ಜೋಡಿಯಷ್ಟು ಸಂರಕ್ಷಿತವಾಗಿಲ್ಲ. ವಿದ್ಯಾಧರ ವೀಣೆ ನುಡಿಸುತ್ತಿದ್ದಾರೆ. ಇಲ್ಲಿ ವಿದ್ಯಾಧರಿಯು ಗೌರವರ್ಣದವಳಾಗಿದ್ದರೆ ಆಕೆಯ ಜೊತೆಗಾರನ ಬಣ್ಣ ನೀಲಿ ಹಸಿರಿಂದ ಕೂಡಿದೆ.

**ಬೇಟೆಯ ದೃಶ್ಯ**

೧ x ೧೧/೪ ಅಳತೆಯ ಚಿತ್ರ ಇದಾಗಿದ್ದು ಹುಲಿಯೊಂದಿಗೆ ಹೋರಾಡುತ್ತಿರುವ ದೃಶ್ಯವನ್ನುಇಲ್ಲಿ ರಚಿಸಲಾಗಿದೆ. ಮಹಿಳೆಯ ಬಲಿಷವಿವಾಗಿ ತ್ರಿಶೂಲವನ್ನು ಹಿಡಿದು ಹುಲಿಯನ್ನು ಹಿಮ್ಮೆಟ್ಟುತ್ತಿದ್ದಾಳೆ. ಆಕೃತಿಯ ಸದೃಢವಾಗಿದ್ದು ಭಾವಭಂಗಿಯನ್ನು ನೋಡಿದರೆ ಮಹಿಳೆಯ ಆಕೃತಿ ಎನಿಸುತ್ತದೆ. ಆದರೆ ಪುರುಷನಂತೆ ಮೇಲ್ ಉಡುಗೆಯನ್ನು ಧರಿಸದೆ ಕೇವಲ ಸೊಂಟದಿಂದ ಪಂಚೆಯನ್ನು ಧರಿಸಿದ್ದು ಕಂಡುಬರುತ್ತದೆ. ಮಹಿಳೆಯ ಮೈ ಬಣ್ಣವು ದಟ್ಟ ಕಂದು ವರ್ಣದಿಂದ ರಚನೆಗೊಂಡಿದೆ. ಹುಲಿಯ ಚಿತ್ರವು ಬಲಿಷವಿವಾಗಿಲ್ಲ ಕೇವಲ ಮುಖವನ್ನು ಮಾತ್ರ ಚಿತ್ರಿಸಲಾಗಿದ್ದು ಮಹಿಳೆಯನ್ನೇ ಪ್ರಧಾನವಾಗಿ ಚಿತ್ರಿಸಲಾಗಿದೆ. ಹುಲಿಯ ಚಿತ್ರವು ಕಳಪೆಯಾಗಿದೆ. ಮಹಿಳೆ ಚಿತ್ರ ಮಾತ್ರ ತನ್ನ ಪಾಲಿನ ಕಾರ್ಯವನ್ನು ಉತ್ತಮವಾಗಿಸಿದೆ.

**ಹೆಂಗಳೆಯರ ದೃಶ್ಯ**

೧ x ೧೧/೨ ಅಳತೆಯಲ್ಲಿ ರಚಿತವಾದ ಈ ಚಿತ್ರದಲ್ಲಿ ೮ ರಿಂದ ೧೦ ಜನ ಸ್ತ್ರೀಯರು ಒಟ್ಟಿಗೆ ಬೆರೆತಿರುವ ಚಿತ್ರ ಇದಾಗಿದೆ. ಸಂಭ್ರಮದ ಕೂಟದಲ್ಲಿ ಒಟ್ಟುಗೂಡಿದ ದೃಶ್ಯ ಇದಾಗಿದೆ. ಎಲ್ಲ ಸ್ತ್ರೀಯರು ಅಲಕೃಂತಗೊಂಡಿದ್ದು ಸಂತೋಷವನ್ನು ಹಂಚಿಕೊಳ್ಳುತ್ತಿರುವಂತೆ ಬಾಸವಾಗುತ್ತದೆ. ಕೆಲವು ಆಕೃತಿ ಮಸಕಾಗಿ ಅಸ್ಪಷ್ಟವಾಗಿವೆ. ಪ್ರತಿ ಮಹಿಳೆಯ ಆಕೃತಿಯ ಸದೃಢವಾಗಿದ್ದು ನೋಡಲು ಆಕರ್ಷಕ ಮೈವಾಟದವರೆನಿಸುತ್ತದೆ. ನೀಳವಾದ ಕೈಗಳು, ಉದ್ದನೆಯ ಬೆರಳುಗಳು ಬೆರಗುಗೊಳಿಸುವಂತೆ ತೋರುತ್ತವೆ. ಮುಖಗಳು ಆಕಾರದಲ್ಲಿ ದುಂಡು ಹಾಗೂ ಅಂಡಾಕಾರಗಳಿವೆ. ಅಗಲವಾದ ಕಣ್ಣುಗಳು ಅರೆತೆರದಂತೆ ತೋರುತ್ತವೆ. ನೀಳನಾಸಿಕ, ಮುಖದಲ್ಲಿ ಮಂದಸ್ಥಿತವಾದ ನಗು ತೃಪ್ತ ಭಾವವನ್ನು ತೋರುತ್ತದೆ. ಮುಖದಲ್ಲಿ ಕಾಂತಿಯ ಕಳೆಯ ಎದ್ದು ತೋರುತ್ತದೆ. ಪ್ರತಿ ಮಹಿಳೆಯ ಕೇಶ ವಿನ್ಯಾಸ ವಿವಿಧ ರೀತಿಯಲ್ಲಿವೆ.

ನೀಲಿ, ತಿಳಿಹಳದಿ, ಹಸಿರು, ಬಿಳಿ, ಕಂದುಬಣ್ಣಗಳನ್ನುಈ ಕೃತಿಯಲ್ಲಿ ಕಾಣಬಹುದು. ಈ ಕೃತಿಯಲ್ಲಿ ಒಂದೇ ವರ್ಣದ ಎರಡು ಮೂರು ಛಾಯೆಗಳನ್ನು ಬಳಸಿದ್ದು ಹೆಚ್ಚು ಕಂಡುಬರುವುದಿಲ್ಲ ಬದಲಾಗಿ ಪ್ರತಿ ಭಾಗಕ್ಕೂ ಬೇರೆ ಬೇರೆ ವರ್ಣ ಬಳಸಲಾಗಿದೆ. ಪ್ರತಿ ಚಿತ್ರಗಳಿಗೂ ಸೂಕ್ಷ್ಮವಾದ ಬಾಹ್ಯ ರೇಖೆಗಳನ್ನು ಎಳೆಯಲಾಗಿದೆ.[೫]

**ಚಾಂದಬೀಬಿ**

ಬಿಜಾಪುರದ ರಾಣಿಯಾಗಿದ್ದು ಚಾಂದಬೀಬಿಯ ಚಿತ್ರ ಇದಾಗಿದೆ. ಭಾವ ಭಂಗಿಯನ್ನು ನೋಡಿದರೆ ಕೃತಿಯ ರಾಣಿಯ ಆಕೃತಿಯನ್ನು ಸಮರ್ಥಗೊಳಿಸಿದೆ. ಈ ಚಿತ್ರ ಕಿರುರೂಪ ಚಿತ್ರದಂತೆ ರಚನೆಯಾಗಿದೆ. ಚಿತ್ರದಲ್ಲಿ ಚಾಂದಬೀಬಿಯ ಉಡುಗೆಯ ಆಕರ್ಷಕವಾಗಿದ್ದು. ವಿವಿಧ ನಕ್ಷೆಯ ವರ್ಣಗಳಿಂದ ಕೂಡಿದೆ. ಹಳದಿ ವರ್ಣದ ಪಾರದರ್ಶಕ ಮೇಲ್ ದಾವನಿ ಅವಳ ಚೆಲುವನ್ನು ಇನ್ನು ಅಂದಗೊಳಿಸಿದೆ. ನೀಲಿ ಹಿನ್ನೆಲೆಯಲ್ಲಿ ಈ ಕೃತಿ ಪೂರ್ತಿಗೊಂದಿದೆ. ಪ್ರಕೃತಿಯಲ್ಲಿ ವಿಹರಿಸುತ್ತಿರುವ ದೃಶ್ಯವನ್ನು ಇಲ್ಲಿ ರಚಿಸಲಾಗಿದೆ.

**ಖಾವಸ್ ಖಾನ್**

ಬಿಜಾಪುರದ ಆಸ್ಥಾನದ ಚಿತ್ರ ಇದ್ದಾಗಿದ್ದು. ಖಾವಸ್ ಖಾನ್‌ನ ಚಿತ್ರವು ವೀರಾವೇಶವಾಗಿ ಯುದ್ಧಕ್ಕೆ ತಯಾರಾಗಿ ನಿಂತಿರುವಂತೆ ತೋರುತ್ತದೆ. ಮುಖವನ್ನು ಸೂಕ್ಷ್ಮವಾಗಿ ಗಮನಿಸಿದರೆ ಸಿಟ್ಟಿನಿಂದಿರುವಂತೆ ಕಂಡುಬರುತ್ತದೆ. ಮೀನಿನಾಕಾರದ ಕಣ್ಣು, ಚಪ್ಪಟೆಮೂಗು, ಇಳಿಬಿದ್ದ ಮೀಸೆ, ಚಪ್ಪಟೆ ಮೂಗು, ಈಟಿ, ಕೈಯಲ್ಲಿ ಕತ್ತಿ, ಹೆಗಲ ಮೇಲಿಂದ ಇಳಿಬಿದ್ದ ವಸ್ತ್ರವು ಹಳದಿ ಪಟ್ಟಿಕೆಯನ್ನು ಹೊಂದಿದೆ. ಕೊರಳಲ್ಲಿ ಅಂಗಿಯ ಮೇಲೆ ಬಿಳಿ ಮುತ್ತಿನ ಸರಗಳು ರಚನೆಗೊಂಡಿವೆ. ತಲೆಯ ಪೀಠವು ಕೆಂಪಾಗಿದ್ದು, ರೇಖೆಯಿಂದ ಕೂಡಿದೆ. ಚಿತ್ರವು ಮಸಕಾಗಿ ತನ್ನ ಹೊಳಪನ್ನು ಕಳೆದುಕೊಂಡಿದೆ.

**ಕರ್ನಾಟಕ ವಿಶ್ವವಿದ್ಯಾಲಯದ ಜಾನಪದ ವಸ್ತುಸಂಗ್ರಹಾಲಯ, ಧಾರವಾಡ**

ಡಾ.ಆರ್.ಸಿ.ಹಿರೇಮಠ ಕನ್ನಡ ಅಧ್ಯಯನ ಪೀಠದಿಂದ ಜಾನಪದ ಅಧ್ಯಯನ ವಿಭಾಗವು ೧೯೯೬ರಲ್ಲಿ ಪ್ರತ್ಯೇಕಗೊಂಡಿತು. ಜಾನಪದ ಅಧ್ಯಯನದಲ್ಲಿ ಸ್ನಾತಕೋತ್ತರ ಪದವಿಯನ್ನು ಆರಂಭಿಸಿತು. ಜಾನಪದ ಸಾಹಿತ್ಯವು ಸ್ನಾತಕೋತ್ತರ ಕನ್ನಡ ಪದವಿಗೆ ಸಮಾಂತರವಾಗಿ ಇದ್ದ ಸಮಯದಲ್ಲಿ ಡಾ.ಆರ್.ಸಿ.ಹಿರೇಮಠ ಕನ್ನಡ ಅಧ್ಯಯನ ಪೀಠದ ಒಂದು ಕೋಣೆಯಲ್ಲಿ ರಾಜ್ಯದ ವಿವಿದ ಭಾಗಗಳಿಂದ ಸಂಗ್ರಹಿಸಿದ ಜನಪದ ವಸ್ತುಗಳನ್ನು ಜಾನಪದ ವಸ್ತು ಸಂಗ್ರಹಾಲಯವನ್ನು ಕಟ್ಟಿ ಬೆಳಸಬೇಕೆಂಬ ಉದ್ದೇಶದಿಂದ ಕೂಡಿ ಹಾಕಲಾಗಿತ್ತು. ಆ ಇಡೀ ಕೋಣೆಯಲ್ಲಿದ್ದ ಜನಪದ

೦೫. ಡಾ. ಎ. ಮುರಿಗೆಪ್ಪ (ಪ್ರಸಂ.): ಬಾದಾಮಿ ಚಾಲುಕ್ಯರು, ಪುಟ – ೪೦೦

ವಸ್ತುಗಳು ಸಹಜವಾಗಿ ಜಾನಪದ ಅಧ್ಯಯನ ವಿಭಾಗಕ್ಕೆ ಸೇರಿದ್ದವು. ಆವಸ್ತುಗಳ ಜೊತೆಗೆ ೧೯೯೬ರಿಂದ ೨೦೦೦ ಇಸ್ವಿಯವರೆಗೆ ಜಾನಪದ ಅಧ್ಯಯನ ವಿಭಾಗದ ರೂವಾರಿಗಳಾದ ಸೋಮಶೇಖರ ಇಮ್ರಾಪೂರವರು ಹಾಗೂ ಶಾಲಿನಿ ರಘುನಾಥ ಕೂಡಿಕೊಂಡು ಇನ್ನಷ್ಟು ಹೆಚ್ಚಿಗೆ ಜನಪದ ವಸ್ತುಗಳನ್ನು ಪ್ರತಿವರ್ಷ ಸಂಗ್ರಹಿಸಿ ಕೂಡಿ ಹಾಕಿದರು. ಜನಪದ ವಸ್ತುಗಳನ್ನು ದಾಖಲಿಸಿ, ವರ್ಗೀಕರಿಸಿ, ನಂತರ ಪ್ರದರ್ಶನ ಮಾಡಿದ್ದಾರೆ. ಸುಮಾರು ೨೦೦ ಜನಪದ ವಸ್ತುಗಳನ್ನು ಕ್ರಮಬದ್ಧವಾಗಿ ವರ್ಗೀಕರಿಸಿ, ಜೋಡಿಸಿ ಪ್ರದರ್ಶನ ಮಾಡಲಾಗಿದೆ. ವಿವರಣೆ ಸಹಿತ ವರ್ಗೀಕರಿಸಿದ ಜನಪದ ವಸ್ತುಗಳಲ್ಲಿ ಕೆಲವನ್ನು ಇಲ್ಲಿ ಛಾಯಾಚಿತ್ರಗಳೊಂದಿಗೆ ಪರಿಚಯಿಸಲಾಗಿದೆ. ಇಲ್ಲಿ ವಿವಿಧ ಮಾದರಿಯ ತೊಟ್ಟಿಲುಗಳು, ಬೀಸಣಿಕೆಗಳ ಮತ್ತು ಚತ್ತರಗಿಗಳು, ಬಣ್ಣದ ತೊಟ್ಟಿಲು ಕುದುರೆಗೆ ಸಂಬಂಧಪಟ್ಟ ಸಾಮಾನುಗಳು, ಬುಡಕಟ್ಟು ಸಮಾಜದ ಆಭರಣಗಳು, ಹೀಗೆ ಅನೇಕ ಕಲಾತ್ಮಕ ವಸ್ತುಗಳನ್ನು ಸಂಗ್ರಹಿಸಿದ್ದಾರೆ.[೬]

ಈ ವಿಭಾಗದಲ್ಲಿ ಕರ್ನಾಟಕದ ಜನಪದ ರಂಗಭೂಮಿಯ ಕಲೆಯಲ್ಲಿ ಯಕ್ಷಗಾನಕ್ಕೆ ಒಂದು ವಿಶಿಷವಿ ಸ್ಥಾನವಿದೆ. ಈ ಕಲೆಯ ಉಡಿಗೆ ತೊಡಿಗೆಗಳು ಆಕರ್ಷಣೀಯವಾದವು ಯಕ್ಷಗಾನದ ಮುಖವಾಡವನ್ನು ನುರಿತ ಕಲಾವಿದರಿಂದ ತಯಾರಿಸಿ, ಉತ್ತರವಾದ ದುಂಡಾದ ಗಾಜಿನ ಶೋಕೇಸಿನಲ್ಲಿ ಇಟ್ಟಿದ್ದು ಕಂಡುಬರುತ್ತದೆ. ಮೇಲಗಡೆಗೆ ಬೆಳಕಿನ ವ್ಯವಸ್ಥೆ ಮಾಡಿ ಮಧ್ಯದಲ್ಲಿ ಮೂರ್ತಿ ಇಟ್ಟು ಪ್ರದರ್ಶನ ಮಾಡಿದ್ದಾರೆ. ಈ ವಸ್ತು ಸಂಗ್ರಹಾಲಯದಲ್ಲಿ ೫೦ಕ್ಕೂ ಹೆಚ್ಚು ತೊಗಲುಗೊಂಬೆಗಳಿದ್ದು, ಅವುಗಳು ಕೆಡದಂತೆ ಸಂರಕ್ಷಿಸಿ ಇಡಲಾಗಿದೆ. ಅವುಗಳಲ್ಲಿ ಕೆಲವು ಚಿತ್ರಗಳು ಈ ಕೆಳಗಿನಂತಿವೆ.

**ಹೊಲವನ್ನು ಊಳುತ್ತಿರುವ ರೈತ**

ತೊಗಲು ಬೊಂಬೆ ಚಿತ್ರಗಳು ಕೇವಲ ಕೇವಲ ಸಾಂಪ್ರದಾಯಿಕ ಮತ್ತು ಧಾರ್ಮಿಕ ಚಿತ್ರಗಳಲ್ಲದೆ, ಸಾಮಾಜಿಕ ಚಿತ್ರಗಳ ರಚನೆಯನ್ನು ಕೂಡ ಮಾಡುತ್ತಾರೆ ಎನ್ನುವುದಕ್ಕೆ ಈ ಚಿತ್ರ ಉತ್ತಮ ನಿದರ್ಶನವಾಗಿದೆ. ರೈತರಿಗೆ ಎತ್ತುಗಳೇ ಅವರ ಸರ್ವಸ್ವವಾಗಿರುತ್ತವೆ. ಅವುಗಳಲ್ಲಿ ದೈವೀ ಸ್ವರೂಪದಲ್ಲಿ ಆರಾಧಿಸುತ್ತಾನೆ. ಈ ಚಿತ್ರದಲ್ಲಿ ಎರಡು ಎತ್ತುಗಳಿಗೆ ನೇಗಿಲನ್ನು ಹೂಡಿರುವ ರೈತ ಹಸನ್ಮುಖನಾಗಿಸಾಗುತ್ತಿದ್ದಾನೆ. ಸರಳ ಸುಂದರ ಈ ಚಿತ್ರದಲ್ಲಿ ವರ್ಣಗಳ ಬಳಕೆ ಮಿತವಾಗಿದೆ. ಎತ್ತುಗಳ ಜನಪದ ಅಲಂಕಾರಿಕ ರೀತಿಯಲ್ಲಿ ಸಿಂಗಾರಗೊಂಡಿವೆ.

**ಮೊಸರನ್ನು ಕಡೆಯುತ್ತಿರುವ ಗೋಪಿಕೆಯರು**

ಗೋಪಿಕಾ ಸ್ತ್ರೀಯರು ಸುಂದರ ವರ್ಣವಿನ್ಯಾಸವುಳ್ಳ ಚಿತ್ರ ಇದಾಗಿದ್ದು, ಸುಂದರ

೦೬. ಡಾ. ಸಂತೋಷ ಭದ್ರಾಪೂರ : ಕರ್ನಾಟಕದಲ್ಲಿಯ ಜಾನಪದ ವಸ್ತುಸಂಗ್ರಹಾಲಯಗಳ ಅಧ್ಯಯನ, ಪುಟ – ೧೨೦

ಸ್ತ್ರೀಯರು ಮರಕ್ಕೆ ಮೊಸರು ಕಡೆಯುವ ಕಡಗೋಲನ್ನು ಕಟ್ಟಿ ಮೊಸರನ್ನು ಕಡೆಯುತ್ತಿದ್ದಾರೆ. ಸಾಂಪ್ರದಾಯಿಕ ಉಡುಗೆ ತೊಟ್ಟಿರುವ ಸ್ತ್ರೀಯರು ಅನೇಕ ರೀತಿಯ ವಿವಿಧ ವಿನ್ಯಾಸದ ಆಭರಣಗಳನ್ನು ಧರಿಸಿದ್ದಾರೆ. ಅವರ ಉಡುಗೆಗಳು ಚಿಕಣಿ ಶೈಲಿಯನಕ್ಷೆಗಳು ಸುಂದರವಾಗಿ ಮೂಡಿವೆ. ಹಾಗೆಯೇ ತೊಟ್ಟಿಲಿನ ವಿನ್ಯಾಸವು ಅಲಂಕಾರಿಕ ರೀತಿಯಲ್ಲಿ ರಚನೆಗೊಂಡಿದೆ. ತ್ರಿಭುಜಾಕೃತಿಯ, ವೃತ್ತಾಕಾರದ ನಕ್ಷೆಗಳು ಕೆಂಪು, ನೀಲಿ, ಹಸಿರು, ವರ್ಣಗಳಿಂದ ರಚಿತಗೊಂಡಿವೆ.

**ನಾಗಮಂಡಲದ ಚಿತ್ರ**

ವಿಶಿಷವಿವಾದ ಈ ಚಿತ್ರವು ರೀತಿಯಲ್ಲಿ ರಚನೆಯಾಗಿ ಸುರಳಿಯಾಕಾರದ ನಕ್ಷೆಯಂತೆ ಹಾವು ತನ್ನನ್ನು ಹೆಣೆದು ಕೊಂಡಿದೆ. ಕಂದು ಮತ್ತು ಕಪ್ಪು ವರ್ಣದಲ್ಲಿ ರಚನೆಗೊಂಡ ಈ ಚಿತ್ರವನ್ನು ಒಂದು ಕೋಲಿನ ಆಧಾರದಿಂದ ನಿಲ್ಲಿಸಲಾಗಿದೆ. ಹಾವಿನ ಮುಖವು ಸ್ಪಷ್ಟವಾಗಿಲ್ಲ. ವರ್ಣಗಳು ಉತ್ತಮ ರೀತಿಯಲ್ಲಿವೆ.

**ಬೇಂದ್ರೆ ಸ್ಮಾರಕ ಭವನದಲ್ಲಿನ ಕಲಾಕೃತಿಗಳು**

**ನಾನು ಬಡವಿ ಆತ ಬಡವ ಒಲವೆ ನಮ್ಮ ಬದುಕು**

೨ x ೨೧/೨ ಅಳತೆಯ ಚಿತ್ರವನ್ನು ದಯಾನಂದ ಕಾಮಕರ ರಚನೆ ಮಾಡಿದ್ದಾರೆ. ಸೃಜನ್ಮಾಕ ಚಿತ್ರ ಇದಾಗಿದ್ದು ತಮ್ಮ ಶೈಲಿಯಲ್ಲಿ ರಚನೆ ಮಾಡಿದ್ದಾರೆ. ಬೇಂದ್ರೆಯವರ "ಒಲವೆ ನಮ್ಮ ಬದುಕು" ಕವನ ಸಂಕಲನದಿಂದ ಗೀತೆಯ ಶೀರ್ಷಿಕೆಯನ್ನು ಇಲ್ಲಿ ಚಿತ್ರಿಸಿದ್ದಾರೆ. ಹಳ್ಳಿಯ ಮಹಿಳೆಯ ನಿರಾಭರಣಳಾಗಿದ್ದು, ಮಸುಕಾದ ಹಸಿರು ಸೀರೆಯನ್ನು ಧರಿಸಿದ್ದಾಳೆ. ಸಾಂಕೇತಿಕವಾಗಿ ಕೈಯಲ್ಲಿ ನಾಲ್ಕು ಬಳೆಗಳಿವೆ. ಚಿತ್ರದಲ್ಲಿ ಮಹಿಳೆಯ ಆಕೃತಿಯ ಪ್ರಧಾನವಾಗಿ ತೋರುತ್ತದೆ. ನೀಳವಾದ ಕೈಗಳು, ಅಗಲವಾದ ಕಣ್ಣು, ಪ್ರೌಢತೆಯನ್ನು ತೋರಿಸುತ್ತವೆ. ಮಹಿಳೆ ಮತ್ತು ಪುರಷನ ಆಕೃತಿಗಳು ಸಹಜತೆ ಮತ್ತು ಸರಳ ರೀತಿಯಿಂದ ರಚಿತಗೊಂಡಿವೆ.

ಮಹಿಳೆಯ ಮುಖ ಭಾವು ಸಂತೃಪ್ತಿಯಿಂದ ಇರುವಂತೆ ಬಾಸವಾಗುತ್ತದೆ. ಚಿತ್ರದಲ್ಲಿ ಹಳದಿ ವರ್ಣವು ಪ್ರಧಾನವಾಗಿದೆ. ನೀಲಿ ಬಣ್ಣದ ಹಿನ್ನೆಲೆಯು ತಂಪು ವಾತಾವರಣದ ಸೂಚನೆಯನ್ನು ತೋರುತ್ತದೆ. ಎಲೆಗಳು ಮತ್ತು ಚಂದ್ರನನ್ನು ಸೃಜನ್ಮಾಕ ರೀತಿಯಿಂದ ಚಿತ್ರಿಸಲಾಗಿದ್ದು ಚಿತ್ರದ ಮುಖ್ಯ ವಿಷಯಕ್ಕೆ ಪೂರಕವಾದಂತೆ ಇದೆ. ದಾಂಪತ್ಯಬದುಕಿನ ಸಂತೃಪ್ತಿಯನ್ನು ಗುಟ್ಟನ್ನು ಈ ಚಿತ್ರ ಬಯಲು ಮಾಡುತ್ತದೆ. ಅವರೀರ್ವರಲ್ಲಿಯ ಒಲವು ನೈಜವಾಗಿ ಚಿತ್ರಿತವಾಗಿದೆ.

**ಡುರುಕಿ**

೨ x ೨೧/೨ ಅಳತೆಯ ಶ್ರೀ ಪಿ.ಎಸ್.ಕಡೇಮನಿಯವರು ರಚಿಸಿದ ಈ ಕಲಾಕೃತಿಯ

ಡುರುಕಿ ಎಂಬ ವಿಷಯದ ಕುರಿತು ರಚನೆಯಾಗಿದೆ. ಹಳದಿ ಮತ್ತು ಹಸಿರು ವರ್ಣದ ಹಿನ್ನೆಲೆಯಲ್ಲಿ ಕಪ್ಪು ಕೆಂಪು ಗಾಡವರ್ಣದ ಗೂಳಿಯೊಂದರ ಕಲಾತ್ಮಕ, ಸೃಜನ್ಮಾಕವಾಗಿ ರಚಿಸಿದ ಚಿತ್ರ ಇದಾಗಿದ್ದು, ಚಿತ್ರದಲ್ಲಿ ಗೂಳಿಯ ಶಕ್ತಿ ಗಾಂಭಿರ್ಯ, ಬಲಿಷವಿ ವಸಾಹತುಷಾಹಿಯ ಅಧಿಕಾರವನ್ನು ತೋರಿಸುವ ವರ್ಣ ಚಿತ್ರವಾಗಿದೆ. ಗೂಳಿಯ ಆಕೃತಿಯ ಬಲಾಡ್ಯವನ್ನು ತೋರುವಂತೆ ಇದೆ. ನೀಳ ಕೊರಳಿನ ಗೂಳಿಯ ಡುಬ್ಬ ಹಾಗೂ ನರಿಗೆಗಳ ವಿನ್ಯಾಸವು ವಿಶೇಷವಾಗಿದೆ. ಗೂಳಿಯ ವೇಗವನ್ನು, ಅದರ ಶಕ್ತಿ ಸೌಂದರ್ಯವನ್ನು ಅದರ ನಿಂತಭಂಗಿ ಬಾಲಬೀಸಿದ ರೀತಿಯಲ್ಲಿ ಕಾಣಬಹುದು. ಗೂಳಿಯ ಚಿತ್ರವು ಪ್ರಧಾನವಾಗಿದೆ.

ಈ ಹಿನ್ನೆಲೆಯಲ್ಲಿ ಪ್ರಕೃತಿಯನ್ನು ಕಿರಿದಾಗಿ ಗೂಳಿಯ ಅಟ್ಟಹಾಸವನ್ನು, ಹಿರಿದಾಗಿ ತೋರಿಸಿದಂತೆ ಕಾಣುತ್ತದೆ. ಪ್ರಕೃತಿಯ ಚಿತ್ರಣ ಕಿರಿದಾಗಿದ್ದರೂ ವರ್ಣ ಸಂಯೋಜನೆ ಉತ್ತಮ ರೀತಿಯಲ್ಲಿದೆ. ಮೂರು ಜನ ರೈತರು ಈ ಪ್ರಕೃತಿಯಲ್ಲಿ ಸಂತೋಷದಿಂದ ತಮ್ಮ ಕೃಷಿ ಕೆಲಸಕ್ಕೆ ಸಾಗಿದ್ದಾರೆ. ಒಂದು ರೀತಿಯಲ್ಲಿ ಗೂಳಿಯ ಕೌರ್ಯದ ಚಿತ್ರಿತವಾಗಿದ್ದರೆ. ಇನ್ನೊಂದೆಡೆ ಪ್ರಕೃತಿಯ ಸಮೃದ್ಧ ಭಾವವು ಈ ಚಿತ್ರವನ್ನು ಆವರಿಸಿದೆ. ವರ್ಣಗಾರಿಕೆ, ಸಂಯೋಜನೆ, ಸೃಜನಾತ್ಮಕತೆ ಈ ಚಿತ್ರದಲ್ಲಿದ್ದು ಇದೊಂದು ಉತ್ತಮ ಕೃತಿಯಾಗಿದೆ.

**ನಾಕುತಂತಿ**

೨ x ೨೧/೨ ಅಳತೆಯ ಬಾಬುರಾವ ನಡೋಣ ಅವರು ರಚಿಸಿದ ಕಲಾಕೃತಿ ಇದಾಗಿದ್ದು. ಅಮೂರ್ತ ರೀತಿಯ ಕಲಾಕೃತಿ ಇದಾಗಿದೆ. ಜ್ಞಾನ ಪೀಠಪ್ರಶಸ್ತಿ ಪಡೆದ ನಾಕುತಂತಿ ಕೃತಿ ಆಧಾರಿತವಾಗಿದೆ. ಈ ಕೃತಿಯ ಕಡುನೀಲಿ, ಬೂದು ಬಣ್ಣದ ತಿಳಿ ಹಳದಿ ಮತ್ತು ಹಸಿರು ಹಿನ್ನೆಲೆಯಲ್ಲಿದೆ. ವೀಣೆಯೊಂದನ್ನು

ಈ ಕೃತಿಯಲ್ಲಿ ಪ್ರಧಾನವಾಗಿದೆ. ಇದು ಕಪ್, ನೀಲಿ, ಬೂದು ವರ್ಣಗಳಲ್ಲಿ ರಚಿತವಾಗಿದೆ. ವೀಣೆಯು ಹಿನ್ನೆಲೆಯಲ್ಲಿ ಹೆಚ್ಚಾಗಿ ಬೆರೆತುಕೊಂಡಿದೆ. ಇದರ ವಿನ್ಯಾಸವು ಕೇವಲ ಒಂದು ಮುಖ ಮಾತ್ರ ಕಾಣುತ್ತದೆ. ಈ ಕೃತಿಯಲ್ಲಿ ಬಣ್ಣದ ಪ್ರಭಾವು ಹೆಚ್ಚಾಗಿದೆ. ಈ ಕೃತಿಯು ಅಮೂರ್ತ ರೀತಿಯಲ್ಲಿ ರಚನೆಯಾಗಿದ್ದು. ಇಲ್ಲಿ ಬಣ್ಣದ ಮತ್ತು ಕುಂಚದ ಪ್ರಭಾವವನ್ನು ತೋರಿಸುತ್ತವೆ. ಅಸ್ಪಷ್ಟವಾದ ವರ್ಣಛಾಯೆಗಳು, ನೆರಳು ಬೆಳಕಿನ ಸಂಯೋಜನೆಯೊಂದಿಗೆ ಈ ಕೃತಿ ಪೂರ್ಣವಾಗಿದೆ. ಹಿನ್ನೆಲೆಯ ತಿಳಿ ಬಣ್ಣಗಳು ಮುಖ್ಯಕಲಾಕೃತಿಯನ್ನು ಎದ್ದು ತೋರುವಂತೆ ಬಾಸವಾಗುತ್ತವೆ. ಹಿನ್ನೆಲೆಯನ್ನು ಆಕಾಶದ ರೀತಿಯಲ್ಲಿ ಚಿತ್ರಿಸಿದ್ದು ದುಂಡಾದ ಕಪ್ಪಾದ ಆ ಕೃತಿಯೊಂದು ಚಂದ್ರನಂತೆ ಕೂಡ ತೋರುತ್ತದೆ.

**ಬೇಂದ್ರೆಯವರು ಭಾವಚಿತ್ರ**

೩x೩ ಅಳತೆಯ ಬೇಂದ್ರೆಯವರ ಭಾವಚಿತ್ರವನ್ನು ಶ್ರೀ ಎ.ಬಿ.ಉಪ್ಪಾರ ಅವರು ರಚಿಸಿದ್ದಾರೆ. ಬೇಂದ್ರೆಯವರು ತರುಣರಾಗಿದ್ದ ಚಿತ್ರ ಇದಾಗಿದೆ.

ಬೇಂದ್ರೆಯವರ ಈ ಕಲಾಕೃತಿಯು ಛಾಯಾಚಿತ್ರದಂತೆ ರಚಿತವಾಗಿದೆ. ಬೇಂದ್ರೆಯವರ ಪ್ರಶಾಂತ ಮುಖ ಭಾವ ನಿಶ್ಚಲ ತೇಜಪೂರ್ಣ ಕಣ್ಣುಗಳು ಈ ಕೃತಿಯಲ್ಲಿ ಎದ್ದು ಕಾಣುವಂತೆ ತೋರುತ್ತದೆ. ಬೇಂದ್ರೆಯವರ ತಲೆಯ ಮೇಲೆ ಕಂದು ವರ್ಣದ ತೋಪಿಯನ್ನು ಧರಿಸಿದ್ದು, ಅದು ವಿಶೇಷವಾಗಿದೆ. ಬೇಂದ್ರೆಯವರ ಛಾಯಾ ಚಿತ್ರವನ್ನು ಎಲ್ಲರು ಹೆಚ್ಚಾಗಿ ನೋಡಿದ್ದು ಮುಪ್ಪಿನಾವಸ್ಥೆಯಲ್ಲಿರುವ ಛಾಯಾಚಿತ್ರವನ್ನು ಅಂತಹವರಿಗೆ ಈ ಛಾಯಾ ಚಿತ್ರ ತುಂಬಾ ಹೊಸ ಚಿತ್ರದಂತೆ ತೋರುತ್ತದೆ. ತರುಣನ ಭಾವನೆ, ಮುಗ್ಧ ನಗು, ನೀಳವಾದ ನಾಸಿಕ, ನೆರಳು ಬೆಳಕಿನ ಸಂಯೋಜನೆ ಅದ್ಭುತವಾಗಿ ಮೂಡಿವೆ. ಕಂದುಬಣ್ಣದ ಇವರ ಉಡುಪು ಹಸಿರು ಹಿನ್ನೆಲೆಯಲ್ಲಿ ಎದ್ದು ತೋರುತ್ತವೆ. ಬೇಂದ್ರ ಭವನದಲ್ಲಿ ಬೇಂದ್ರೆಯವರ ವಿವಿಧ ರೀತಿಯ ಭಾವಚಿತ್ರಗಳನ್ನು ಎ. ಬಿ. ಉಪ್ಪಾರ, ಕೆ.ವಿ.ಕಾಳೆಯವರಿಂದ ರಚನೆ ಮಾಡಿಸಿ ಪ್ರದರ್ಶನ ಮಾಡಿದ್ದಾರೆ.

ಪ್ರಾಚೀನ ಪರಂಪರೆಯಿಂದ ಬೆಳೆದು ಬಂದ ಕಲೆಯನ್ನು ನಾವು ಇಂದು ಹಲವು ರೀತಿಯಲ್ಲಿ ಅಭಿವೃದ್ಧಿ ಹೊಂದಿ ಬೆಳಕಿಗೆ ಬರುತ್ತಿರುವುದು ಕಂಡುಬರುತ್ತದೆ. ಕಲಾಕೃತಿಗಳನ್ನು ರಚನೆ ಮಾಡುವುದು, ಪ್ರದರ್ಶನ ಮಾಡುವುದು ಕೂಡ ಇಂದಿನ ಯುವ ಕಲಾವಿದರ ಹವ್ಯಾಸವಾಗಿದೆ. ಇದರಿಂದಾಗಿಯೇ ಒಂದು ವ್ಯವಸ್ಥಿತ ರೀತಿಯಲ್ಲಿ ಕಲಾವಿದರ ಕಲಾಕೃತಿಗಳನ್ನು ರಚಿಸುವುದಕ್ಕೆ ಹಾಗೂ ಪ್ರದರ್ಶನಕ್ಕೆ ಅವಕಾಶ ಕೊಟ್ಟು, ಕಲಾವಿದನಿಗೆ ಹಾಗೂ ಕಲಾಕೃತಿಗೆ ಹೆಚ್ಚಿನ ಮಹತ್ವ ತರುವಲ್ಲಿ ಇಂದು ವಸ್ತುಸಂಗ್ರಹಾಲಯಗಳು ಸಹಾಯಕವಾಗಿವೆ. ವಸ್ತು ಸಂಗ್ರಹಾಲಯದಲ್ಲಿ ಚಿತ್ರಕಲಾಕೃತಿಗಳನ್ನು ಪ್ರದರ್ಶನ ಮಾಡಿ ಸಾರ್ವಜನಿಕರಿಗೆ ಮುಕ್ತವಾಗಿ ನೋಡಲು ಅವಕಾಶ ಮಾಡಿ, ಕಲಾಪ್ರಜ್ಞೆ ಹಾಗೂ ಜಾಗ್ರತಿಯನ್ನುಂಟು ಮಾಡುವ ಕಾರ್ಯ ಮಾಡುವಲ್ಲಿ ವಸ್ತುಸಂಗ್ರಹಾಲಯಗಳು ಇನ್ನು ಮುಂದುವರಿಯಬೇಕಿದೆ.

ಧಾರವಾಡದಲ್ಲಿ ಅನೇಕ ಖಾಸಗಿ ಮತ್ತು ಸರಕಾರಿ ವಸ್ತುಸಂಗ್ರಹಾಲಯಗಳಿವೆ. ಸರಕಾರಿ ಆರ್ಟ್ ಗ್ಯಾಲರಿ, ಡಾ. ಎಂ.ವಿ. ಮಿಣಜಿಗಿ ಕಲಾಗ್ಯಾಲರಿ ಹೀಗೆ ಹಲವು ಕಲಾಗ್ಯಾಲರಿ, ವಸ್ತುಸಂಗ್ರಹಾಲಯ ಮತ್ತು ಧಾರವಾಡದ ಕಲಾಶಾಲೆಗಳಲ್ಲಿ ಅನೇಕ ಹಿರಿಯ ಕಲಾವಿದರ ಕಲಾಕೃತಿಗಳು ಸಂಗ್ರಹಗೊಂಡಿವೆ. ಕೆಲವು ಕಡೆಗಳಲ್ಲಿ ಈ ಕಲಾಕೃತಿಗಳು ವ್ಯವಸ್ಥಿತ ರೀತಿಯಲ್ಲಿ ಪ್ರದರ್ಶನಗೊಂಡಿವೆ. ಮತ್ತು ಕೆಲವು ನಿರ್ಲಕ್ಷ್ಯಕ್ಕೆ ಒಳಗಾಗಿವೆ. ಕರ್ನಾಟಕ ವಿಶ್ವವಿದ್ಯಾಲಯ, ಜಾನಪದ ವಿಭಾಗದ ವಸ್ತುಸಂಗ್ರಹಾಲಯದಲ್ಲಿ ಪ್ರದರ್ಶನ ಮಾಡಿದ ತೊಗಲುಗೊಂಬೆ ಚಿತ್ರಗಳು

ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿದ್ದರೆ, ಸಾರ್ವಜನಿಕರಿಗೆ ಮತ್ತು ಅಧ್ಯಯನಕಾರರಿಗೂ ಅನುಕೂಲವಾಗುತ್ತದೆ. ಕನ್ನಡ ಸಂಶೋಧನಾ ಸಂಸ್ಥೆಯಲ್ಲಿ ಅನೇಕ ಉತ್ತಮ ಕಲಾಕೃತಿಗಳಿವೆ. ಅದರಲ್ಲೂ ಹಿರಿಯ ಕಲಾವಿದ ಡಾ. ಎಂ.ವಿ. ಮಿಣಜಿಗಿಯವರ ಬಾದಾಮಿಯ ಭಿತ್ತಿಚಿತ್ರಗಳ ಪ್ರತಿಕೃತಿಗಳಿವೆ. ಈ ಕಲಾಕೃತಿಗಳ ನಿರ್ವಹಣೆ ಉತ್ತಮ ರೀತಿಯಲ್ಲಿ ಆಗಬೇಕಿದೆ. ದ.ರಾ. ಬೇಂದ್ರೆಯವರ ಬೇಂದ್ರೆ ಸ್ಮಾರಕ ಭವನದಲ್ಲಿ ಬೇಂದ್ರೆಯವರ ಭಾವಚಿತ್ರಗಳು ಮತ್ತು ಅವರ ಕೃತಿಗಳ ಕುರಿತು ರಚನೆ ಮಾಡಿದ ಚಿತ್ರಗಳನ್ನು ವ್ಯವಸ್ಥಿತ ರೀತಿಯಲ್ಲಿ ಪ್ರದರ್ಶನ ಮಾಡಿದ್ದಾರೆ. ಬೇಂದ್ರೆಯವರ ಭಾವಚಿತ್ರಗಳಲ್ಲಿ ವಿಶೇಷವಾಗಿ ಅವರು ತರುಣರಾಗಿದ್ದಾಗಿನ ಚಿತ್ರವು ನೈಜ ಚಿತ್ರದಂತೆ ತೋರುತ್ತದೆ.

ಒಟ್ಟಾರೆಯಾಗಿ ಧಾರವಾಡ ಜಿಲ್ಲೆಯಲ್ಲಿ ವಸ್ತುಸಂಗ್ರಹಾಲಯ, ಕಲಾಗ್ಯಾಲರಿ, ಕಲಾಶಾಲೆಗಳಲ್ಲಿ ಅನೇಕ ಉತ್ತಮ ಕಲಾಕೃತಿಗಳು ಸಂಗ್ರಹಗೊಂಡಿವೆ. ಇವುಗಳನ್ನು ವ್ಯವಸ್ಥಿತ ರೀತಿಯಲ್ಲಿ ಪ್ರದರ್ಶನ ಮಾಡಿ ಸಾರ್ವಜನಿಕರಿಗೆ ವೀಕ್ಷಣೆಗೆ ಅವಕಾಶ ಕಲ್ಪಿಸಿಕೊಡುವ ಕಾರ್ಯವಾಗಬೇಕಿದೆ.

❑❑❑

# ಕನ್ನಡ ಸಂಶೋಧನಾ ಸಂಸ್ಥೆಯ ವಸ್ತು ಸಂಗ್ರಹಾಲಯದ ಕಲಾಕೃತಿಗಳು



ನೃತ್ಯಗಾರರು



ಸೇವಕರೊಡನೆ ರಾಣಿ



ಹಾರುತ್ತಿರುವ ವಿದ್ಯಾದರ ದಂಪತಿಗಳು



ಹೆಂಗಳೆಯರ ದೃಶ್ಯ



ನೃತ್ಯಗಾರರು



ಬೇಟೆಯ ದೃಶ್ಯ

# ಕನ್ನಡ ಸಂಶೋಧನಾ ಸಂಸ್ಥೆಯ ವಸ್ತು ಸಂಗ್ರಹಾಲಯದ ಕಲಾಕೃತಿಗಳು



ಜಯಚಾಮರಾಜೇಂದ್ರ ಒಡೆಯರು



ಖಾವಾಸಖಾನ್



ಚಾಂದ ಬೀಬಿ



ಹಾವಿಗೆ ಹಾಲನ್ನು ಕುಡಿಸುತ್ತಿರುವ ಗೋವಿನ ಚಿತ್ರ

# ಕರ್ನಾಟಕ ವಿಶ್ವವಿದ್ಯಾಲಯ ಜನಪದ ವಿಭಾಗದ ವಸ್ತುಸಂಗ್ರಹಾಲಯದ ತೊಗಲುಗೊಂಬೆ ಚಿತ್ರಗಳು



ನಾಗಮಂಡಲದ ಚಿತ್ರ



ಮೊಸರನ್ನು ಕಡೆಯುತ್ತಿರುವ ಗೋಪಿಕಾ ಸ್ತ್ರೀಯರು



ಯುದ್ಧದ ಸನ್ನಿವೇಶ



ರೈತನ ಚಿತ್ರ

# ಬೇಂದ್ರೆ ಸ್ಮಾರಕ ಭವನದಲ್ಲಿರುವ ಕಲಾಕೃತಿಗಳು



'ಒಲವೇ ನಮ್ಮ ಬದುಕು' ಕೃತೀಯ ಚಿತ್ರಕಲಾಕೃತಿ



'ನಾಕುತಂತಿ' ಕೃತೀಯ ಚಿತ್ರಕಲಾಕೃತಿ



ಡುರುಕಿ



ಬೇಂದ್ರೆಯವರ ಮನೆಯ ನಿಸರ್ಗ ಚಿತ್ರಣ

## ಅಧ್ಯಾಯ – ೬

# ಧಾರವಾಡ ಜಿಲ್ಲೆಯ ಚಿತ್ರಕಲಾ ಶಿಕ್ಷಣ ಸಂಸ್ಥೆಗಳು ಮತ್ತು ಕಲಾವಿದರು

"ಚಿತ್ರಕಲೆ ಒಂದು ನಾಡಿನ ಜನರ ನಾಗರೀಕತೆ, ಸಂಸ್ಕೃತಿಯ ಬೆಳವಣಿಗೆಯ ಜೊತೆಗೆ ಜನರ ಇತಿಹಾಸ, ಇರುವಿಕೆ, ಸಾಧನೆಗಳ ಕಲ್ಪನೆ ಮಾಡಿಕೊಡುತ್ತದೆ. ಸಾವಿರಾರು ವರ್ಷಗಳಿಂದ ಮಾನವನ ಇತಿಹಾಸ ಹಲವಾರು ರೀತಿಯಿಂದ ವಿವಿಧ ಹಂತಗಳಲ್ಲಿ ಬೆಳೆಯುತ್ತಾ ಬಂದಿದೆ. ಜೊತೆಗೆ ಚಿತ್ರ ಕಲೆಯೂ ಸಹ ಧಾರ್ಮಿಕ, ಪೌರಾಣಿಕ, ಸಾಮಾಜಿಕವಾಗಿ ಎಲ್ಲ ವಿಭಾಗಗಳಲ್ಲಿ ಬೆಳೆದು ನಿಂತಿದೆ. ಆ ಕಾಲದ ಅವಕಾಶಗಳನ್ನು ಸಾಮಾಜಿಕ ಸ್ಥಿತಿ ಗತಿಗಳ ನೀತಿ ಅನೀತಿಗಳ ಚಿತ್ರಣ ಕೊಡುತ್ತಾ ಬಂದಿದೆ. ಈ ದೆಸೆಯಲ್ಲಿ ರಾಷ್ಟ್ರ ಬೆಳೆಯುವುದರ ಜೊತೆಗೆ ಪ್ರಾಂತೀಯ ಭಾಗಗಳಲ್ಲಿಯು ರಾಜಾಶ್ರಯಗಳಿಂದ ಕಲೆ ವಿವಿಧ ಶೈಲಿಗಳಲ್ಲಿ ತಾಂತ್ರಿಕಲೆ, ಸಂವೇದನೆ, ಕಳಕಳಿ, ಧಾರ್ಮಿಕ ಜೀವನ ವೈವಿಧ್ಯಮಯವಾಗಿ, ಚಿತ್ರಕಾರರು ಸೃಷ್ಟಿಸಿದ್ದಾರೆ. ಉತ್ಕೃಷ್ಟ ಕಲಾಕೃತಿಗಳು ರಾಷ್ಟ್ರದ ಹಿರಿಮೆಯನ್ನು ಹೆಚ್ಚಿಸಿವೆ."[೧]

"ಕರ್ನಾಟಕದ ಚಿತ್ರಕಲೆಯ ಇತಿಹಾಸ ಶಿಲಾಯುಗದಿಂದಲೇ ಆರಂಭವಾಗಿರುವುದಾಗಿ ತಿಳಿದುಬರುತ್ತದೆ. ಈ ಶಿಲಾಯುಗದ ಜನ ಗುಡ್ಡಗಳಲ್ಲೋ, ಗವಿಗಳಲ್ಲೋ, ಇಳಿಜಾರು ಬಂಡೆಗಳ ಬುಡದಲ್ಲೋ ವಾಸಿಸುತ್ತಿದ್ದರು. ಹಾಗೆ ನೆಲೆಸಿದ ಇತಿಹಾಸದ ಆರಂಭದ ಕಾಲದ ಮಾನವ ಚಿತ್ರಗಳನ್ನು ರಚಿಸುವ ಪ್ರವೃತ್ತಿಯುಳ್ಳವನಾಗಿದ್ದನೆಂಬ ಅಂಶ, ಅವನು ಚಿತ್ರಿಸಿದ ಅತ್ಯಂತ ಪ್ರಾಚೀನ ಗುಹಾಚಿತ್ರಗಳಿಂದ ತಿಳಿದುಬರುತ್ತದೆ."[೨] "ಕನ್ನಡ ನಾಡಿನಲ್ಲಿ ಚಿತ್ರಕಲೆಯು ಬೆಳೆದುಬಂದ ಕುರುಹು ಕ್ರಿ.ಪೂ.೨ನೆಯ ಶತಮಾನದಿಂದಲೇ ಕಾಣಬರುತ್ತದೆ. ಅಜಂತಾದ ಭಿತ್ತಿಚಿತ್ರಗಳು ಕ್ರಿ.ಪೂ.೨ನೆಯ

---

೦೧. ಪಿ.ಆರ್.ತಿಪ್ಪೇಸ್ವಾಮಿ (ಸಂ) : ಚಿತ್ರಕಲಾ ಪ್ರಪಂಚ, ಪುಟ – ೫೬೭

೦೨. ಅದೇ., ಪುಟ – ೫೨೨

ಶತಮಾನದಿಂದಲೇ ಆರಂಭವಾಗಿ ೭ನೆಯ ಶತಮಾನದ ತನಕ ಬೆಳೆದು ಬಂದವು. ಅಜಂತಾದ ಭಿತ್ತಿಚಿತ್ರಗಳನ್ನು ಬರೆಸಿದ ಚಾಲುಕ್ಯ ಕುಲದೀಪಿಕರನ್ನು ಕನ್ನಡಿಗರು ಎಂದೆಂದಿಗೂ ಮರೆಯುವಂತಿಲ್ಲ."[೩] "ಚಿತ್ರಕಲೆಯ ಪ್ರಾಚೀನತೆಯನ್ನು ಕುರಿತು ಪುರಾಣ, ಕಾವ್ಯ ಶಾಸ್ತ್ರಗ್ರಂಥಗಳಲ್ಲಿ ಅನೇಕ ಉಲ್ಲೇಖಗಳು ಕಂಡುಬರುತ್ತವೆ. ಚಿತ್ರಶಾಲೆ, ಚಿತ್ರಗೃಹಗಳು ಇದ್ದುವೆಂಬ ಅಂಶ ರಾಮಾಯಣ, ಮಹಾಭಾರತದ ಗ್ರಂಥಗಳಲ್ಲಿ ವ್ಯಕ್ತವಾಗಿದೆ."[೪]

"ಮಾನವನ ಮೊದಲ ಪಾಠ ಚಿತ್ರಕಲೆಯಿಂದಲೇ ಆರಂಭವಾಯಿತು. ಭಾಷೆಹುಟ್ಟುವುದಕ್ಕಿಂತ ಮೊದಲೇ ಸಂಜ್ಞೆಗಳ ಮೂಲಕ ಮಾನವನು ವ್ಯವಹರಿಸುತ್ತಿದ್ದನೆಂದು ಕಂಡುಬರುತ್ತವೆ. ಹಾಗೆಯೇ ಲಿಪಿಯ ಉಗಮಕ್ಕಿಂತ ಮೊದಲೇ ಚಿತ್ರಕಲೆ ಬಳಕೆಯಲ್ಲಿತ್ತೆಂದು ತಿಳಿದು ಬರುತ್ತದೆ. ಎಲ್ಲ ಕಲೆಗಳಲ್ಲಿ ಚಿತ್ರಕಲೆ ವಿಶಿಷ್ಟವಾಗಿ ಕಾಣಿಸಿಕೊಳ್ಳಲು ಅದು ಧರ್ಮ, ಅರ್ಥ, ಕಾಮ, ಮೋಕ್ಷ ಪ್ರಧಾನವಾದುದೆಂಬ ನಂಬಿಗೆಯೂ ಇದೆ."[೫]

"ಕರ್ನಾಟಕ ಕಲಾಕ್ಷೇತ್ರಕ್ಕೆ ಉತ್ತರ ಕರ್ನಾಟಕದ ಕೊಡುಗೆ ಅಪಾರವಾಗಿದೆ. ಅನೇಕ ಕ್ಷೇತ್ರಗಳಲ್ಲಿ ವೈವಿಧ್ಯತೆ ಮತ್ತು ವೈಶಿಷ್ಟ್ಯತೆಗಳಿಂದ ನಾಡಿನ ಜನರ ಗಮನಸೆಳೆದ ಧಾರವಾಡ ಜಿಲ್ಲೆ ಲಲಿತಕಲಾ ಕ್ಷೇತ್ರಕ್ಕೆ ಅದರಲ್ಲೂ ಚಿತ್ರಕಲೆಗೆ ಈ ಜಿಲ್ಲೆಯ ಕೊಡುಗೆ ಅತ್ಯಂತ ಮೌಲಿಕವಾದುದಾಗಿದೆ."[೬] ಉತ್ತರ ಕರ್ನಾಟಕದಲ್ಲಿ ಚಿತ್ರಕಲಾ ಶಿಕ್ಷಕರ ತರಬೇತಿ ಶಿಕ್ಷಣವನ್ನು ಮೊದಲಬಾರಿಗೆ ಶಾಸ್ತ್ರೀಯ ನೆಲೆಯಲ್ಲಿ ಪ್ರಾರಂಭಿಸಿದ ಕೀರ್ತಿ ಧಾರವಾಡದ್ದು. ಅದರಲ್ಲಿ ವಿಶೇಷವಾಗಿ ಇಲ್ಲಿಯ ಕಲಾ ಶಾಲೆಗಳು ಮತ್ತು ಶಿಕ್ಷಣ ಸಂಸ್ಥೆಗಳು, ಹಿರಿಯ ಕಲಾವಿದರ ಕಲಾ ಚಟುವಟಿಕೆಗಳಿಂದ ಚಿತ್ರಕಲೆಯನ್ನು ಬೆಳೆಸುವಲ್ಲಿ ಪ್ರಮುಖ ಪಾತ್ರವಹಿಸಿದೆ.

ಧಾರವಾಡ ಜಿಲ್ಲೆ ವಿದ್ಯಾಕಾಶಿ ಎಂದೇ ಪ್ರಸಿದ್ಧಿ ಪಡೆದ ನಗರವಾಗಿದೆ. ಧಾರವಾಡದಲ್ಲಿ ಒಟ್ಟು ಆರು ಕಲಾ ಶಾಲೆಗಳಿವೆ. ಈ ಕಲಾ ಶಾಲೆಗಳು ತಮ್ಮ ಕಲೆಯ ಮೂಲಕ ಸಮಗ್ರ ನಾಡಿಗೆ ವಿಶಿಷ್ಟವಾದ ಕಾಣಿಕೆ ಮತ್ತು ಶ್ರೇಷ್ಠಕಲಾವಿದರನ್ನು ಹೊರತಂದಿವೆ ಎಂದರೆ ತಪ್ಪಾಗಲಾರದು. ಧಾರವಾಡದಲ್ಲಿ ಹಿರಿಯ ಮತ್ತು ಕಿರಿಯ ಕಲಾ ಸಾಧಕರ ಮೂಲಕ ಈ ಕಲಾಕ್ಷೇತ್ರದಲ್ಲಿ ಹೊಸ ಹೊಸ ಪ್ರಯೋಗದೊಂದಿಗೆ ಹೊಸ ಪ್ರತಿಭೆಗಳನ್ನು ಬೆಳಕಿಗೆ ತರುತ್ತಿದೆ. ಅವರ ಕಲೆಯ ಮೂಲಕ ಈ ಕಲಾ ಕ್ಷೇತ್ರದಲ್ಲಿ ಹೊಸ ಆಯಾಮ, ಬದಲಾವಣೆಗಳೊಟ್ಟಿಗೆ ಒಂದು ಹೊಸ ಸಮಕಾಲೀನ ಕಲಾ ಪರಂಪರೆಯನ್ನು ನಾಗರೀಕ ಸಮುದಾಯಕ್ಕೆ ಪರಿಚಯಿಸುವ ಕಾರ್ಯವು ದೃಶ್ಯಕಲಾ ಸಂಶೋಧನೆಯಿಂದ ಮಾತ್ರ ಸಾಧ್ಯವೆನ್ನಬಹುದು. ಧಾರವಾಡ ಕಲಾಶಾಲೆಗಳು

೦೩. ಪಿ.ಆರ್.ತಿಪ್ಪೇಸ್ವಾಮಿ (ಸಂ) : ಚಿತ್ರಕಲಾ ಪ್ರಪಂಚ, ಪುಟ - ೫೨೩

೦೪. ಅದೇ., ಪುಟ - ೫೨೩

೦೫. ಡಾ.ಎಸ್.ಸಿ.ಪಾಟೀಲ : ವರ್ಣಸಂಚಯ, ಪುಟ - ೯೬

೦೬. ಅದೇ., ಪುಟ - ೯೫

ಹೊಸಪಠ್ಯಕ್ರಮದೊಂದಿಗೆ ಸಂಪ್ರದಾಯಿಕ ಮತ್ತು ಆಧುನಿಕ ಕಲಾ ಪದ್ಧತಿಯನ್ನು ಕಲಿಸುವ ಪರಿಪಾಠ ಹೊಂದಿದೆ. ಈ ಕಲಾಶಿಕ್ಷಣದ ಜೊತೆಗೆ ಇಲ್ಲಿಯ ದೇಶಿ ಪದ್ದತಿಯ ಆಚಾರ ವಿಚಾರ, ಜನಪದ ಮತ್ತು ಶಿಷ್ಟಪದದ ಕಲಾಭಿರುಚಿಗಳ ಅಭ್ಯಾಸವನ್ನು ಕೈಗೊಳ್ಳಲು ಪ್ರಮುಖ ಪಾತ್ರವಹಿಸಿವೆ. ಹೀಗೆ ಈ ಕಲಾ ಶಾಲೆಗಳು ಕೇವಲ ಕಲಾ ಕ್ಷೇತ್ರವಲ್ಲದೆ ಜನಪದ ಕಲೆಗಳನ್ನು ಉಳಿಸಿ, ಬೆಳೆಸುವಲ್ಲಿ ನಮ್ಮ ನಾಡಿಗೆ ಒಂದು ಸಂಸ್ಕೃತಿಯ ಚೌಕಟ್ಟನ್ನು ನಿರ್ಮಿಸುತ್ತಿವೆ. ಇಂತಹ ಈ ಕಲಾ ಶಾಲೆಗಳ ಅಧ್ಯಯನವನ್ನು ಇಲ್ಲಿ ಮಾಡಲಾಗಿದೆ.

ಬ್ರಿಟಿಷರ ಆಳ್ವಿಕೆಯಲ್ಲಿ ಕರ್ನಾಟಕವು ಪ್ರಾಂತೀಯವಾಗಿ ವಿಭಜಿಸಲ್ಪಟ್ಟಿತ್ತು. ಮುಂಬೈ ಕರ್ನಾಟಕವು ರಾಜಕೀಯವಾಗಿ ಮುಂಬೈ ಸರಕಾರದ ಅಧೀನದಲ್ಲಿತ್ತು. ಅವರು ಒಪ್ಪಿಕೊಳ್ಳಲ್ಪಟ್ಟ ಪಠ್ಯಕ್ರಮ ಅಭ್ಯಾಸ ಪತ್ರಿಕೆ, ಪಠ್ಯ ಪುಸ್ತಕಗಳು ಮತ್ತು ಕಲಿಸುವ ವಿಧಿವಿಧಾನಗಳು, ಪ್ರಚಲಿತವಿದ್ದವು, ಕಲಾಶಿಕ್ಷಣಕ್ಕಾಗಿ ಮುಂಬೈ ಒಂದು ಮಹತ್ವದ ಕೇಂದ್ರವಾಗಿತ್ತು. ೧೮೫೭ರಲ್ಲಿ ಸ್ಥಾಪನೆಗೊಂಡ ಸರ್.ಜೆ.ಜೆ.ಸ್ಕೂಲ್ ಆಫ್ ಆರ್ಟ್ ಕಲಾಸಂಸ್ಥೆ ಏಷಿಯಾದಲ್ಲಿಯೇ ಪ್ರಥಮವಾದ ಪಾಶ್ಚಾತ್ಯ ಮಾದರಿಯ ಕಲಾಶಾಲೆ ಇದು ಕಲಾಶಿಕ್ಷಣದಲ್ಲಿ ಅಂತರ ರಾಷ್ಟ್ರೀಯ ಖ್ಯಾತಿಯನ್ನು ಪಡೆದಿತ್ತು. ಬ್ರಿಟೀಷ್ ನಿರೂಪಣಾ ಕಲಾಶಾಲೆಗಳಿಗೆ ಮುಖ್ಯಸ್ಥರಾಗಿ ಬರುವವರು ಲಂಡನ್ನಿನ ರಾಯಲ್ ಅಕಾಡೆಮಿ ಆಫ್ ಆರ್ಟ್‌ನಲ್ಲಿ ಸ್ನಾತಕೋತ್ತರ ಶಿಕ್ಷಣ ಪಡೆದವರು ಮಾತ್ರ ಭಾರತದಲ್ಲಿಯ ಕಲಾಶಾಲೆಗಳ ಮೇಲ್ವಿಚಾರಕರಾಗಿ ಬರುತ್ತಿದ್ದರು. ಸಹಜವಾಗಿಯೇ ಬ್ರಿಟೀಷರ ಶಿಸ್ತು, ಸಮಯ ಪ್ರಜ್ಞೆ, ಗಂಭೀರತೆಗಳು ಮೈಗೂಡಿಸಿಕೊಂಡು ಬರುತ್ತಿದ್ದ ಮೇಲಧಿಕಾರಿಗಳ ಪ್ರಭಾವ, ಕಲಾ ಶಾಲೆಯ ಸಿಬ್ಬಂದಿ ವರ್ಗ ಮತ್ತು ವಿದ್ಯಾರ್ಥಿ ವೃಂದದ ಮೇಲೆ ಪರಿಣಾಮಗಳು ಬೀರುತ್ತಿದ್ದವು. "ಮುಂಬಯಿಯ ಜೆ.ಜೆ.ಕಲಾಶಾಲೆಯಲ್ಲಿ ಕಲೆಯುತ್ತಿರುವ ವಿದ್ಯಾರ್ಥಿಗಳಲ್ಲಿ ಕನ್ನಡಿಗರದೇ ಸಿಂಹಪಾಲು. ಈ ಕಲಾವಿದರಲ್ಲಿ ಪ್ರಮುಖವಾಗಿ ೧. ಶ್ರೀ.ಡಿ.ಜಿ.ಬಡಿಗೇರ, ೨. ಶ್ರೀ.ಜಿ.ಎಸ್.ದಂಡಾವತಿಮಠ, ೩. ಶ್ರೀ.ಎಂ.ವ್ಹಿ.ಮಿಣಜಗಿ, ೪. ಶ್ರೀ.ಡಿ.ವ್ಹಿ.ಹಾಲಬಾವಿ, ೫. ಶ್ರೀ.ಎಂ.ಎ.ಚೆಟ್ಟಿ, ೬. ಸಿ.ವ್ಹಿ.ಕಾರಡಗಿ, ೭. ಶ್ರೀ.ಅಮೀನಸಾಹೇಬಕಮಡೊಳ್ಳಿ ಇವರೆಲ್ಲ ಸಪ್ತವರ್ಣದ ಕಲಾವಿದರಾಗಿ ಒಕ್ಕಟ್ಟಿನಿಂದ ಆತ್ಮೀಯತೆಯಿಂದ ಇರುವ ಗುಂಪನ್ನೇ ದಂಡಾವತಿಮಠ ಅವರು ೧೯೨೩ರ ಅವಧಿಯಲ್ಲಿ ಸಪ್ತವರ್ಣದ ಕನ್ನಡ ಗುಂಪು ಎಂದು ಕರೆಸಿಕೊಂಡಿದ್ದರು."[೭]

ಕರ್ನಾಟಕದ ಅನೇಕ ಚಿತ್ರಕಾರರು ಮುಂಬೈಯ ಸರ್ ಜೆ.ಜೆ.ಕಲಾಶಾಲೆಯಲ್ಲಿ ಚಿತ್ರಕಲಾ ಶಿಕ್ಷಕ ತರಬೇತಿ ಪಡೆದು ಮರಳಿ ತಾಯ್ನಾಡಿಗೆ ಬಂದು ಕೆಲವರು ಧಾರವಾಡ ಜಿಲ್ಲೆಯಲ್ಲಿ ಚಿತ್ರಕಲಾ ಶಿಕ್ಷಣದ ಪ್ರಸಾರಕ್ಕಾಗಿ ಕಲಾಶಾಲೆಗಳನ್ನು ಪ್ರಾರಂಭಿಸಿದರು. "ಅವರಲ್ಲಿ ಪ್ರಮುಖವಾಗಿರುವವರಲ್ಲಿ ಶ್ರೀ.ಡಿ.ವಿ.ಹಾಲಭಾವಿ, ಶ್ರೀ.ಟಿ.ಪಿ.ಅಕ್ಕಿ, ಡಾ.ಎಂ.ವ್ಹಿ.ಮಿಣಜಗಿ ಇವರು

೦೭. ಬಿ.ಎಂ.ಪಾಟೀಲ : ಧಾರವಾಡದ ಹಾಲಭಾವಿ ಸ್ಕೂಲ್ ಆಫ್ ಆರ್ಟ್ ಒಂದು ಐತಿಹಾಸಿಕ ಅಧ್ಯಯನ. ಪುಟ-೩

ಧಾರವಾಡ, ಹುಬ್ಬಳಿ, ಗದಗ ಈ ಸ್ಥಳಗಳಲ್ಲಿ ಚಿತ್ರಕಲಾ ಶಾಲೆಗಳನ್ನು ಪ್ರಾರಂಭಿಸಿದರು. ನಂತರ ಗದಗ ಬೆಟಗೇರಿಯಲ್ಲಿ ಒಂದು ಖಾಸಗಿ ಶಾಲೆಯ ಧಾರವಾಡದಲ್ಲಿ ಒಂದು ಸರಕಾರಿ ಚಿತ್ರಕಲಾ ಶಾಲೆ ಪ್ರಾರಂಭಗೊಂಡವು. ಈ ಕಲಾವಿದರ ಪ್ರಯತ್ನದಿಂದ ಧಾರವಾಡ ಜಿಲ್ಲೆಯಲ್ಲಿ ಶಾಸ್ತ್ರೀಯ ಹಿನ್ನೆಲೆಯಲ್ಲಿ ಪ್ರಥಮಬಾರಿಗೆ ಕಲಾ ಶಿಕ್ಷಣ ಪ್ರಾರಂಭವಾಯಿತು."[೦೮]

**ಧಾರವಾಡ ಜಿಲ್ಲೆಯ ಕಲಾ ಮಹಾವಿದ್ಯಾಲಯಗಳು**

೧. ಹಾಲಭಾವಿ ಸ್ಕೂಲ್ ಆಫ್ ಆರ್ಟ್, ಧಾರವಾಡ

೨. ಶ್ರೀ.ವಿಜಯ ಮಹಾಂತೇಶ ಲಲಿತಕಲಾ ಮಹಾವಿದ್ಯಾಲಯ, ಹುಬ್ಬಳ್ಳಿ

೩. ಸರಕಾರಿ ಚಿತ್ರಕಲಾ ಮಹಾವಿದ್ಯಾಲಯ, ಧಾರವಾಡ

೪. ಭಾರತೀಯ ಕಲಾ ಕೇಂದ್ರ, ಧಾರವಾಡ

೫. ಸೃಜನಾ ಲಲಿತಕಲಾ ಮಹಾವಿದ್ಯಾಲಯ, ಧಾರವಾಡ

೬. ಗಂಗಾಂಭಿಕಾ ಚಿತ್ರಕಲಾ ಮಹಾವಿದ್ಯಾಲಯ, ಧಾರವಾಡ

ಧಾರವಾಡ ಜಿಲ್ಲೆಯಲ್ಲಿ ಬರುವ ಪ್ರಮುಖ ಕಲಾಶಾಲೆಗಳು ಪ್ರಮುಖ ತಾಲ್ಲೂಕಾದ ಧಾರವಾಡ ನಗರದಲ್ಲಿ ೬ ಕಲಾಶಾಲೆಗಳಿವೆ. ಧಾರವಾಡ ಪರಿಸರ ಮತ್ತು ಶೈಕ್ಷಣಿಕ ದೃಷ್ಟಿಯಿಂದ ಮುಂದುವರಿದ ನಗರವಾಗಿದೆ. ಹುಬ್ಬಳ್ಳಿ ನಗರದಲ್ಲಿ ಒಂದು ಕಲಾಶಾಲೆ ಇದೆ. ಹುಬ್ಬಳ್ಳಿಯನ್ನು ವಾಣಿಜ್ಯನಗರ ಎಂದು ಕೂಡ ಕರೆಯುತ್ತಾರೆ. ಈ ದಿನಮಾನಗಳಲ್ಲಿ ಚಿತ್ರಕಲೆಯನ್ನು ಕಲಿಯುವ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಗತೊಡಗಿದೆ. ಇಲ್ಲಿನ ಎಲ್ಲಾ ಕಲಾಶಾಲೆಗಳಲ್ಲಿ ಕಲಿಯುವ ವಿದ್ಯಾರ್ಥಿಗಳು ತಮ್ಮ ಕ್ಷೇತ್ರದಲ್ಲಿ ಹಾಗೂ ಕಲೆಯಲ್ಲಿ ಕ್ರಿಯಾಶೀಲತೆಯನ್ನು ಹೆಚ್ಚಿಸಿಕೊಳ್ಳುತ್ತಿದ್ದಾರೆ. ಇಲ್ಲಿಯ ಕಲಾವಿದ್ಯಾರ್ಥಿಗಳು ರಾಜ್ಯದ ನಾನಾ ಭಾಗಗಳಲ್ಲಿ ಹೋಗಿ ತಮ್ಮ ಕಲಾಕೃತಿಗಳ ಪ್ರದರ್ಶನ ಮತ್ತು ಸಂವಾದ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದಾರೆ. ಕಲಾ ಶಿಬಿರ ಮತ್ತು ಪ್ರಾತ್ಯಕ್ಷಿಕೆಗಳಿಂದ ತಮ್ಮ ಕಲಾಜ್ಞಾನವನ್ನು ವೃದ್ಧಿಸಿಕೊಳ್ಳುತ್ತಾರೆ. ಒಟ್ಟಾರೆಯಾಗಿ ಈ ಜಿಲ್ಲೆಯು ಇಂದು ವಿವಿಧ ರೀತಿಯ ಕಲಾ ಪ್ರಕಾರಗಳನ್ನು ಬೆಳೆಸುತ್ತಾ ಚಿತ್ರಕಲೆಯಲ್ಲಿ ತನ್ನದೇ ಆದ ವಿಶೇಷವಾದ ಪರಂಪರೆಯಿಂದ ಬೆಳೆಯುತ್ತಿದೆ. ರಾಜ್ಯಮಟ್ಟದಲ್ಲಿ, ರಾಷ್ಟ್ರಮಟ್ಟದಲ್ಲಿ ತಮ್ಮ ಕಲಾಪ್ರತಿಭೆಯನ್ನು ತೋರಿದ ಹಿರಿಯ ಕಿರಿಯ ಕಲಾವಿದರನ್ನು ಇಲ್ಲಿ ಕಾಣಬಹುದು.

**೧. ಹಾಲಭಾವಿ ಸ್ಕೂಲ್ ಆಫ್ ಆರ್ಟ್, ಧಾರವಾಡ**

ಧಾರವಾಡದಲ್ಲಿ ಮೊಟ್ಟ ಮೊದಲಿಗೆ ಕಲಾಶಾಲೆಯನ್ನು ಆರಂಭಿಸಿದವರು. ಶ್ರೀ ಡಿ. ವಿ. ಹಾಲಭಾವಿ, ೧೯೩೫ ಜೂನ್ ೧೦ರಂದು ಆರ್.ಎಲ್.ಎಸ್.ಹೈಸ್ಕೂಲದಲ್ಲಿ ಸ್ಕೂಲ್ ಆಫ್

೦೮. ಡಾ.ಎಸ್.ಸಿ.ಪಾಟೀಲ : ವರ್ಣಸಂಚಯ, ಪುಟ-೯೫

ಆರ್ಟ್ ಸ್ಥಾಪನೆ ಮಾಡಿದರು. ಮೊದಲನೇ ವರ್ಷ ಇಬ್ಬರು ವಿದ್ಯಾರ್ಥಿಗಳು ಮಾತ್ರ ಇದ್ದರು. ೧೯೩೫ ಜೂನ್ ೧೦ ರಿಂದ ೧೯೩೬ ಅಕ್ಟೋಬರ್‌ವರೆಗೆ ಅಂದರೆ ಒಂದು ವರುಷ ನಾಲ್ಕು ತಿಂಗಳು ಮಾತ್ರ, ಆರ್.ಎಲ್.ಎಸ್.ಹೈಸ್ಕೂಲಸಲ್ಲಿದ್ದು, ನಂತರ ೧೯೩೬ ಅಕ್ಟೋಬರದಿಂದ ೧೯೩೯ ಜೂನ್‌ವರೆಗೆ ಕರ್ನಾಟಕ ವಿದ್ಯಾವರ್ಧಕ ಸಂಸ್ಥೆಯಲ್ಲಿ ಈ ಕಲಾಶಾಲೆಯನ್ನು ನಡೆಸಲಾಯಿತು. ನಂತರದ ಕೆಲ ದಿನಗಳಲ್ಲಿ ಸ್ವತಃ ದಾನಪ್ಪ ಹಾಲ ಬಾವಿಯವರೇ ಸ್ಕೂಲ್ ಆಫ್ ಆರ್ಟ್ ಕಟ್ಟಡ ಹೇಗಿರಬೇಕೆಂದು ಯೋಚಿಸಿ ಹೊಸ ಕಟ್ಟಡವನ್ನು ತಮ್ಮ ಆರ್ಥಿಕ ತೊಂದರೆಯನ್ನು ಗಮನಿಸದೇ ಧಾರವಾಡದ ಸಿವ್ಹಿಲ್ ಕೋರ್ಟ್ ಎದುರಿಗೆ ಸುಂದರವಾದ ಕಟ್ಟಡವನ್ನು ನಿರ್ಮಿಸಿದರು. ಸ್ಕೂಲ್ ಆಫ್ ಆರ್ಟ್ ಕಟ್ಟಡವನ್ನು ೧೯೪೦ರಲ್ಲಿ ಧಾರವಾಡ ಕಲೆಕ್ಟರ್ ಆಗಿದ್ದ ಶ್ರೀ.ಎ.ಎಮ್.ಡಾಯಸ್ ಅವರು ಉದ್ಘಾಟಿಸಿದರು. ಸ್ಕೂಲ್ ಆಫ್ ಆರ್ಟ್‌ನಲ್ಲಿ ಪ್ರಾರಂಭದಲ್ಲಿ ಕಲಿಸುತ್ತಿದ್ದ ವಿಷಯಗಳು

೧. Drawing Grade, ೨. ರೇಖಾ ಚಿತ್ರ ಮತ್ತು ವರ್ಣ ಚಿತ್ರಕಲೆ, ೩. ಅನ್ವಯಿಕ ಕಲೆ, ೪. ಛಾಯಾಚಿತ್ರಕಲೆ, ೫. ಚಿತ್ರಕಲಾ ಶಿಕ್ಷಕರ ತರಗತಿ, ೬. ಸಂಗೀತ, ೭.ನೃತ್ಯ, ೮. ಕರಕುಶಲಕಲೆ ಹೀಗೆ ಎಂಟು ವಿಷಯಗಳನ್ನು ಕಲಿಸಲಾಗುತ್ತಿತ್ತು. ಮುಂಬಯಿ ಜೆ.ಜೆ.ಸ್ಕೂಲ್ ಆಫ್ ಆರ್ಟ್‌ನವರೇ ಪರೀಕ್ಷೆಗಳನ್ನು ನಡೆಸುತ್ತಿದ್ದರು. ಇದರಿಂದ ಕೆಲ ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತಿದ್ದುದ್ದನ್ನು ಗಮನಿಸಿ ಪರೀಕ್ಷಾ ಕೇಂದ್ರವನ್ನು ಧಾರವಾಡದಲ್ಲಿಯೇ ಪ್ರಾರಂಭ ಮಾಡಿದರು. ೫ ವರುಷಗಳ ಕಾಲಾವಧಿಯಲ್ಲಿಯೇ ಕಲಾಮಂದಿರಕ್ಕೆ ಬೇಕಾದ ಎಲ್ಲ ಸೌಕರ್ಯಗಳನ್ನು ಪೂರೈಸಿದರು.

೧೯೪೧ರಲ್ಲಿ ಹೊಸದಾಗಿ ಎರಡು ಕೋರ್ಸ್‌ಗಳನ್ನು ಪ್ರಾರಂಭ ಮಾಡಿದರು. ೧. ಪ್ರಾಥಮಿಕ ಚಿತ್ರಕಲೆ, ೨. ಮಾಧ್ಯಮಿಕ ಚಿತ್ರಕಲೆ, ಪರಿಣಿತ ಕಲಾಶಿಕ್ಷಕರು ಕಲಾ ಶಾಲೆಗೆ ಬಂದದ್ದುರಿಂದ ಶಾಲೆಯ ಶಿಕ್ಷಣ ಗುಣಮಟ್ಟ ಹೆಚ್ಚಾಗಿ ವಿದ್ಯಾರ್ಥಿಗಳ ಸಂಖ್ಯೆಯೂ ಹೆಚ್ಚಾಯಿತು. ೧೯೫೬ರವರೆಗೆ ಎಲ್ಲಾ ಚಿತ್ರಕಲಾ ಪರೀಕ್ಷೆಗಳನ್ನು ಈ ಸ್ಕೂಲ್ ಆಫ್ ಆರ್ಟ್‌ದಿಂದಲೇ ನಡೆಯಸಲಾಗುತ್ತಿತ್ತು. ಮುಂಬೈ-ಕರ್ನಾಟಕ ಭಾಗ ಮೈಸೂರು ಸರಕಾರದ ಅಧೀನಕ್ಕೆ ಬಂದಿತೋ ಆಗ ಮೈಸೂರು ಸರಕಾರವೇ ಪರೀಕ್ಷಾ ಕೇಂದ್ರಗಳನ್ನು ಪ್ರಾರಂಭಿಸಿದರು. ಎ.ಕೆ.ಗೌರ್ನಮೆಂಟ್ ಹೈಸ್ಕೂಲ್‌ದಲ್ಲಿ ಮೊದಲ ಪರೀಕ್ಷಾ ಕೇಂದ್ರವನ್ನು ಸ್ಥಾಪಿಸಿತು. ಹಾಲಭಾವಿ ಕಲಾಶಾಲೆಯ ಪ್ರಗತಿಯನ್ನು ಗಮನಿಸಿ ಮುಂಬೈ ಸರ್ಕಾರವು ಚಿತ್ರಕಲಾ ಶಿಕ್ಷಕರ ಪರೀಕ್ಷೆಗಳನ್ನು ಕೈಗೊಳ್ಳಲು ೧೯೫೨ರ ಮಾರ್ಚ್ ೪ರಂದು ಅನುಮತಿ ನೀಡಿತ್ತು. ಕರ್ನಾಟಕದಾದ್ಯಂತ ಏಕೈಕ ಚಿತ್ರಕಲಾಶಿಕ್ಷಕರ ಪರೀಕ್ಷಾ ಕೇಂದ್ರವಾಗಿತ್ತು.

### ಸ್ಕೂಲ್ ಆಫ್ ಆರ್ಟ್ ಬೆಳ್ಳಿ ಮಹೋತ್ಸವ

ಹಾಲಭಾವಿ ಸ್ಕೂಲ ಆಫ್ ಆರ್ಟ್ ೨೫ ವರ್ಷ ತನ್ನ ಕಲಾ ಸೃಷಿವಿಯಿಂದ ಕಲಾಜಗತ್ತಿಗೆ ತನ್ನದೇ ಆದ ಕೊಡುಗೆಯನ್ನು ನೀಡುತ್ತಾ ಬಂದು ಕಲಾ ಕ್ಷೇತ್ರವನ್ನು ಉಜ್ವಲಗೊಳಿಸಿತು. ೧೯೬೨ರಲ್ಲಿ

ಹಾಲಭಾವಿ ಸ್ಕೂಲ್ ಆಫ್ ಆರ್ಟ್‌ದ ಬೆಳ್ಳಿಹಬ್ಬವನ್ನು ಆಚರಿಸಿಕೊಂಡಿತು. ಈ ಸಮಾರಂಭಕ್ಕೆ ಕಲಾವಿದ ಪದ್ಮಶ್ರೀ ಕೆ.ಕೆ.ಹೆಬ್ಬಾರ ಅವರು ಮುಖ್ಯ ಅತಿಥಿಗಳಾಗಿ ಬಂದಿದ್ದು ಕಲಾಪ್ರಾತ್ಯಕ್ಷಿಯನ್ನು ನೀಡುವುದರೊಂದಿಗೆ ಅನುಭವವನ್ನು ಹಂಚಿಕೊಂಡರು. ಬೆಳ್ಳಿ ಮಹೋತ್ಸವದ ಕಾರ್ಯಕಾರಿ ಸಮೀತಿಯ ಅಧ್ಯಕ್ಷರಾಗಿ ಪದ್ಮವಿಭೂಷಣ ಡಾ. ಡಿ. ಸಿ. ಪಾವಟೆ ಅವರು ಕೂಡ ಹಾಜರಿದ್ದರು. ೧೯೬೫ರಲ್ಲಿ ಸ್ಕೂಲ್ ಆಫ್ ಆರ್ಟ್‌ದಿಂದ ಡಿ.ವಿ.ಹಾಲಭಾವಿಯವರು ಲಲಿತಕಲೆಯ ಪ್ರಸಾರಕ್ಕಾಗಿ ರಾಜ್ಯದಲ್ಲಿ ಪ್ರಥಮ ಬಾರಿಗೆ ಆರ್ಟ್‌ಗಿಲ್ಡ್ ಎಂಬ ಕನ್ನಡ ಮತ್ತು ಇಂಗ್ಲೀಷ್ ಭಾಷೆಯ ಕಲಾ ಪತ್ರಿಕೆಯೊಂದನ್ನು ಪ್ರಾರಂಭಿಸಿದರು. ೧೯೬೬ರಲ್ಲಿ ಚಿತ್ರಕಲಾ ಶಿಕ್ಷಕರಿಗೆ ಡೆಪ್ಯುಟೇಷನ್ ಮೇಲೆ ತರಬೇತಿಯನ್ನು ಮಾಡಿಕೊಳ್ಳಲು ಸರಕಾರವು ಆದೇಶ ಹೊರಡಿಸಿತು. ಪ್ರಾಥಮಿಕ ಹಾಗೂ ಪ್ರೌಢಶಾಲೆಗಳಲ್ಲಿರುವ ಚಿತ್ರಕಲಾ ಶಿಕ್ಷಕರಿಗೆ ಹೊಸ ವಿಷಯ ಮತ್ತು ತಂತ್ರಗಳ ಕುರಿತು ಅಧ್ಯಯನ ಮಾಡಲು ಅವಕಾಶ ಒದಗಿಸಿದರು.

ಮುಂಬೈ ಸರಕಾರದ ಅಧೀನದಲ್ಲಿದ್ದ ಚಿತ್ರಕಲಾ ಶಾಲೆಗಳು ೧೯೬೫ರಲ್ಲಿ "Mysore Government Higher Art Exumination" ನಡೆಸುವುದಾಗಿ ಒಪ್ಪಿಕೊಂಡಿದ್ದು. ಆಗ ಮತ್ತೆ ಚಿತ್ರಕಲೆಯ ವಿಷಯಗಳಲ್ಲಿ ಬದಲಾವಣೆಗಳಾದವು. ಜೊತೆಗೆ ಪರೀಕ್ಷಾ ಕೇಂದ್ರಗಳು ಹೆಚ್ಚಾದವು. ಧಾರವಾಡ, ಗದಗ, ಬೆಳಗಾವ್, ಬೆಂಗಳೂರು, ಮೈಸೂರು, ಈ ರೀತಿಯಲ್ಲಿ ಮೈಸೂರು ಸರಕಾರದ ಅಧೀನದಲ್ಲಿ ಬದಲಾವಣೆಯಾಗುತ್ತ ಕಲಾಶಾಲೆಗಳು ಬೆಳೆಯುತ್ತಿದ್ದು. ೧೯೬೬ರಲ್ಲಿ ಸ್ಕೂಲ್ ಆಫ್ ಆರ್ಟ್‌ಗೆ, ಮೈಸೂರು ಸರಕಾರವು ಗ್ರ್ಯಾಂಟ್ ಇನ್ ಏಡ್ ಕೋಡ್ ಪ್ರಕಾರ ೨೮೦೦.೦೦ ರೂಪಾಯಿಗಳ ಅನುದಾನವನ್ನು ನೀಡಿತು. ೧೯೭೭ರಲ್ಲಿ ಹಾಲಭಾವಿ ಸ್ಕೂಲ್ ಆಫ್ ಆರ್ಟ್‌ಗೆ ಪ್ರಾಚಾರ್ಯರಾಗಿ ಶ್ರೀಮತಿ ತಾರಾ ಪವಾರ ಅವರು ಬಂದರು. ೧೯೭೯ರಲ್ಲಿ ಸ್ಕೂಲ್ ಆಫ್ ಆರ್ಟ್‌ನ ಪ್ರಾಚಾರ್ಯರಾಗಿ ಶ್ರೀ ಸುರೇಶ ಹಾಲಭಾವಿಯವರು ಬಂದರು. ೧೯೮೦ರಲ್ಲಿ ಡಿ. ಟಿ. ಸಿ. ಕ್ಲಾಸಿನ ಬೆಳ್ಳಿ ಮಹೋತ್ಸವವನ್ನು ಆಚರಿಸಲಾಯಿತು.

**ಸ್ಕೂಲ್ ಆಫ್ ಆರ್ಟ್ ಸುವರ್ಣ ಮಹೋತ್ಸವ**

೧೯೮೫ರಲ್ಲಿ ಸ್ಕೂಲ್ ಆಫ್ ಆರ್ಟ್‌ನ ೫೦ ವರ್ಷಗಳನ್ನು ಪೂರೈಸಿ ಸುವರ್ಣ ಮಹೋತ್ಸವವನ್ನು ಆಚರಿಸಿಕೊಂಡಿತು. ಕಿಟಲ್ ಕಾಲೇಜಿನಲ್ಲಿಯ ಟ್ಯಾಗೋರ್ ಹಾಲಿನಲ್ಲಿ ಕಲಾವಿದ ಶ್ರೀ. ವ್ಹಿ.ಬಿ.ಹಿರೇಗೌಡರ ಅವರು ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾದ ಶ್ರೀ ಸೋಮಶೇಖರ ಸಾಲಿಯವರ ಭಾವ ಚಿತ್ರದ ಪ್ರಾತ್ಯಕ್ಷಿಕೆಯನ್ನು ನೀಡಿದರು. ಜೆ.ಎಸ್.ಎಸ್.ಕಾಲೇಜಿನ ಪ್ರಾಚಾರ್ಯರಾದ ಶ್ರೀ.ಎನ್.ವಜ್ರಕುಮಾರ ಅವರು ಸ್ಮರಣ ಸಂಚಿಕೆಯನ್ನು ಬಿಡುಗಡೆ ಮಾಡಿದರು. ಸುವರ್ಣ ಮಹೋತ್ಸವದ ಅಂಗವಾಗಿ ವಿಚಾರ ಸಂಕಿರಣವನ್ನು ಏರ್ಪಡಿಸಿದ್ದು ಹುಬ್ಬಳ್ಳಿ ಕಲಾಶಾಲೆಯ

ಪ್ರಾಚಾರ್ಯರಾದ ಶ್ರೀ.ಪಿ.ಎಸ್.ಹಿರೇಮಠ, ಡಾ. ಎಸ್. ಸಿ. ಪಾಟೀಲ, ಶ್ರೀ. ಎಂ.ಜಿ.ವಾಚೇದಮಠ ಅವರು ಉಪನ್ಯಾಸ ಮಂಡಿಸಿದರು. ಅತಿಥಿಗಳಾಗಿ ಶ್ರೀ ಸೋಮಶೇಖರ ಸಾಲಿ, ಅಧ್ಯಕ್ಷತೆಯನ್ನು ಶಾಲಾ ಸಂಸ್ಥಾಪಕರಾದ ಶ್ರೀ. ಡಿ. ವಿ. ಹಾಲಭಾವಿಯವರು ವಹಿಸಿಕೊಂಡರು. ಶ್ರೀ. ಡಿ. ವಿ. ಹಾಲಭಾವಿಯರು ಬರೆದ ಶಿಲೋನ ಸಂದರ್ಶನ ಎಂಬ ಗ್ರಂಥದ ಬಿಡುಗಡೆಯನ್ನು ಗದುಗಿನ ಪೂಜ್ಯ ಶ್ರೀ ಜಗದ್ಗುರು ತೋಂಟದಾರ್ಯ ಮಹಾಸ್ವಾಮಿಗಳು ನೆರವೇರಿಸಿದರು.

**ಸ್ಕೂಲ್ ಆಫ್ ಆರ್ಟ್ ವಜ್ರಮಹೋತ್ಸವ**

೧೯೯೫ರಲ್ಲಿ ಸ್ಕೂಲ್ ಆಫ್ ಆರ್ಟ್‌ನ ೬೦ ಸಂವತ್ಸರಗಳನ್ನು ಅತ್ಯಂತ ಯಶಸ್ವಿಯಾಗಿ ಪೂರೈಸಿಕೊಂಡು ವಜ್ರಮಹೋತ್ಸವವನ್ನು ಆಚರಿಸಿಕೊಂಡಿತು. ಫೈನ್ ಆರ್ಟ್ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಚಂದ್ರಕಾಂತ ಬೆಲ್ಲದ ಅವರು ಸ್ಕೂಲ್ ಆಫ್ ಆರ್ಟ್ ಪ್ರಾಚಾರ್ಯರು ಹಾಗೂ ಸಿಬ್ಬಂದಿಯ ಸಭೆಯನ್ನು ಮಾಡಿ ವರ್ಷವಿಡೀ ವಜ್ರಮಹೋತ್ಸವದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವಂತೆ ನಿರ್ಧರಿಸಲಾಯಿತು. ಜಲವರ್ಣ ಮತ್ತು ರೇಖಾಚಿತ್ರ ಶಿಬಿರವು ಆಗಸ್ಟ ೩೧ ರಿಂದ ಸೆಪ್ಟೆಂಬರ್ ೩ ರವರೆಗೆಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ನಡೆಯಿತು. ಶಿಬಿರದ ನಿರ್ದೇಕರಾಗಿ ಶ್ರೀ. ವಿ. ಬಿ. ಹಿರೇಗೌಡರ ಉದ್ಘಾಟನೆಯನ್ನು ಎಚ್.ಆರ್.ರಘುನಾಥಭಟ್ಟ ಮುಖ್ಯಸ್ಥರು ಪ್ರಾಚೀನ ಭಾರತೀಯ ಇತಿಹಾಸ ವಿಭಾಗ ಕ.ವಿ.ವಿ.ಧಾರವಾಡ ಇವರಿಂದ ನೆರವೇರಿತು. ಸೆಪ್ಟಂಬರ್ ೧ ರಂದು ಇಂಪ್ರೆಷ್ ನಿಷವಿ ಕಲಾವಿದರ ಕಲಾಕೃತಿಗಳ ಸ್ಲೈಡ್‌ಷೋ ಮತ್ತು ಉಪನ್ಯಾಸವನ್ನು ಹುಬ್ಬಳ್ಳಿಯ ಬಿ.ವ್ಹಿ.ಬಿ.ಪಾಲಿಟೆಕ್ನಿಕ್ ಕಾಲೇಜದ ಇಂಟೀರಿಯರ್ ಡಿಜಾಯನ ವಿಭಾಗದ ಮುಖ್ಯಸ್ಥರಾದ ಶ್ರೀಮತಿ ರೇಖಾ ಶೆಟ್ಟರ್ ಅವರು ನಡೆಸಿಕೊಟ್ಟರು.

ಡಾ.ಎಸ್.ಸಿ.ಪಾಟೀಲರು ಜನಪದ ಚಿತ್ರಕಲೆಯ ಕುರಿತು ಉಪನ್ಯಾಸ ಮಂಡಿಸಿದರು. ವಜ್ರಮಹೋತ್ಸವದ ಎರಡನೇ ಕಾರ್ಯಕ್ರಮ ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು ಎಂಬ ವಿಚಾರ ಸಂಕಿರಣವನ್ನು ಸೆಪ್ಟಂಬರ್ ೨೯ರಿಂದ ಅಕ್ಟೋಬರ್ ೧ರವರೆಗೆ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ನಡೆಯಿತು. ಈ ವಿಚಾರ ಸಂಕಿರಣವನ್ನು ಲೋಕಸಭೆಯ ಉಪಾಧ್ಯಕ್ಷರಾಗಿದ ಶ್ರೀ.ಎಸ್.ಮಲ್ಲಿಕಾರ್ಜುನಯ್ಯ ಉದ್ಘಾಟಿಸಿದರು. ಅತಿಥಿಗಳಾಗಿ ಸಾಹಿತಿ ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ ಭಾಗವಹಿಸಿದರು. ಅಧ್ಯಕ್ಷತೆಯನ್ನು ಕರ್ನಾಟಕ ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿದ್ದ ಡಾ.ಎಸ್.ರಾಮೇಗೌಡ ಅವರು ವಹಿಸಿಕೊಂಡಿದ್ದರು. ಈ ಕಾರ್ಯಕ್ರಮದ ಸಂಯೋಜಕರಾಗಿ, ಸಂಚಾಲಕರಾಗಿ ಡಾ.ಎಸ್.ಸಿ.ಪಾಟೀಲ ಅವರು ಕಾರ್ಯನಿರ್ವಹಿಸಿದರು.

"ಚಿತ್ರಕಲೆಯೊಂದಿಗೆ ಇತರ ಕ್ಷೇತ್ರಗಳಾದ ವಾಣಿಜ್ಯೋದ್ಯಮ, ಸಂಗೀತ, ನೃತ್ಯ, ಶಿಲ್ಪ, ಸಮಾಜ, ವಿಮರ್ಶೆ, ಮನಃಶಾಸ್ತ್ರ, ಶಾಸನಗಳು, ಸಮಕಾಲೀನತೆ, ರಂಗಭೂಮಿ, ಶಿಕ್ಷಣ, ಇತಿಹಾಸ,

ಇವುಗಳ ಚಿತ್ರಕಲೆಯೊಂದಿಗೆ ಇರುವ ಸಂಬಂಧವನ್ನು ಕುರಿತು ಉಪನ್ಯಾಸಗಳನ್ನು ಮಂಡನೆ ಮಾಡಲಾಯಿತು. ಈ ಉಪನ್ಯಾಸಗಳು ಉಪಯುಕ್ತವಾಗಿದ್ದು ಇವುಗಳನ್ನು ಕೂಡಿಸಿ ಪುಸ್ತಕ ರೂಪದಲ್ಲಿ ಪ್ರಕಟಿಸಿ ವಜ್ರಮಹೋತ್ಸವದ ಮುಕ್ತಾಯ ಸಮಾರಂಭದಲ್ಲಿ ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು ಎಂಬ ಪುಸ್ತಕ ಧಾರವಾಡದ ಹಿರಿಯ ನ್ಯಾಯವಾದಿ ಶ್ರೀ.ಜಿ.ಎಂ.ಪಾಟೀಲ ಅವರು ಬಿಡುಗಡೆಗೊಳಿಸಿದರು.[೧೯]

ಈ ಕಾರ್ಯಕ್ರಮದ ಕೇಂದ್ರಬಿಂದುವಾಗಿದ್ದ ವಯೋವೃದ್ಧ ಶ್ರೀ. ಡಿ. ವಿ. ಹಾಲಭಾವಿಯವರಿಗೆ ಸನ್ಮಾನದ ನಂತರ ಹಾಲಭಾವಿ ಸ್ಕೂಲ್ ಆಫ್ ಆರ್ಟ್‌ನ ೬೦ನೇ ವರ್ಷದ ಸವಿನೆನಪಿಗಾಗಿ ಚಿತ್ರಾಕ್ಷಿ ಸ್ಮರಣ ಸಂಚಿಕೆಯನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮಾಜಿ ಸಚಿವೆ ಶ್ರೀಮತಿ ಬಿ.ಟಿ.ಲಲಿತ ನಾಯಕ ಅವರು ಬಿಡುಗಡೆ ಮಾಡಿದರು. ಮುಖ್ಯ ಅತಿಥಿಗಳಾಗಿ ಕಲಾಗುರು ಶ್ರೀ ಆರ್.ಎಂ.ಹಡಪದ, ಚಿತ್ರನಟ ಶ್ರೀ.ಸುರೇಶ ಹೆಬ್ಬಿಕರ ಆಗಮಿಸಿದರು. ಶ್ರೀ.ವಿ.ಜಿ.ಅಂದಾನಿ, ಫೈನ್ ಆರ್ಟ್ ಸಂಸ್ಥೆಯ ಅಧ್ಯಕ್ಷರಾದ ಶ್ರೀ.ಚಂದ್ರಕಾಂತ ಬೆಲ್ಲದ ಶಾಸಕರು ಅಧ್ಯಕ್ಷತೆಯನ್ನು ವಹಿಸಿದ್ದರು.

೨೦೦೫ರಲ್ಲಿ ಶ್ರೀ ಸುರೇಶ ಹಾಲಭಾವಿಯವರು ಪ್ರಾಚಾರ್ಯರ ಹುದ್ದೆಯಿಂದ ನಿವೃತ್ತಿಯಾದ ನಂತರ ಶ್ರೀಮತಿ ಗಾಯಿತ್ರಿ ಗೌಡರ ಅವರು ಪ್ರಾಚಾರ್ಯರಾಗಿ ಬಂದರು. ಶ್ರೀ.ಎನ್.ಕೆ.ಹಾಲಕೇರಿ, ಶ್ರೀ.ಡಾ.ರೇಣುಕಾ ಮಾರ್ಕಾಂಡೆ, ಶ್ರೀ.ಸಿ.ಜೆ.ಪಾಟೀಲ, ಶ್ರೀ.ಬಿ.ಎಂ.ಪಾಟೀಲ, ಶ್ರೀ.ಎಸ್.ಎಮ್.ಲೋಹಾರ, ಶ್ರೀ.ಎನ್.ಎನ್.ಚಿನ್ನಣ್ಣವರ ಇವರುಗಳು ಉಪನ್ಯಾಸಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

**ಸಮಕಾಲೀನ ಸಂದರ್ಭದಲ್ಲಿ ಕಲಾಮಹಾವಿದ್ಯಾಲಯದ ಚಟುವಟಿಕೆಗಳು**

೨೦೦೮ರಲ್ಲಿ ಹಾಲಭಾವಿ ಸ್ಕೂಲ್ ಆಫ್ ಆರ್ಟ್, ಕಲಾಶಾಲೆಯನ್ನು ಜಗದ್ಗುರು ಶಿವರಾತ್ರೀಶ್ವರ ಸಂಸ್ಥೆ ಜೆ.ಎಸ್.ಎಸ್. ಸುತ್ತೂರು ಮಠ ಮೈಸೂರು ಇವರಿಗೆ ಕಲಾಶಾಲೆಯ ಆಡಳಿತವನ್ನು ಹಸ್ತಂತರಿಸಲಾಯಿತು. ಇಲ್ಲಿನ ವಿದ್ಯಾರ್ಥಿಗಳಿಗೆ ತಮ್ಮ ಕಲೆಯನ್ನು ಯಾವ ರೀತಿಯಾಗಿ ಬಳಸಿಕೊಳ್ಳಬಹುದು ಎಂಬುದರ ಕುರಿತು ಅವರಿಗೆ ವಿದ್ಯಾರ್ಥಿ ದೆಸೆಯಿಂದಲೇ ತರಬೇತಿ ನೀಡುವ ಹೊಸ ಹೊಸ ಕಾರ್ಯಕ್ರಮಗಳನ್ನು ನಡೆಸಿ ಕೊಡುತ್ತಾರೆ. ಹುಬ್ಬಳ್ಳಿ ಧಾರವಾಡ ಮಹಾನಗರದ ವಾಣಿಜ್ಯೋದ್ಯಮಿಗಳನ್ನು ತಮ್ಮ ಕಲಾ ಶಾಲೆಯ ಕಾರ್ಯಕ್ರಮಗಳಿಗೆ ಆಹ್ವಾನಿಸಿ ಅವರಿಂದ ಸಹ ಉಪನ್ಯಾಸಗಳನ್ನು ಕೊಡಿಸುತ್ತಾರೆ. ಇದರಿಂದ ವಿದ್ಯಾರ್ಥಿಗಳಿಗೆ ತಮ್ಮ ಕಲಾಕೃತಿಗಳನ್ನು ಉತ್ತಮ ರೀತಿಯಿಂದ ರಚಿಸಲು ಮತ್ತು ಮಾರಾಟ ಮಾಡುವ ಕೌಶಲ್ಯವು ಕರಗತವಾಗುತ್ತದೆ. ಇದರಿಂದ

---

೧೯. ಜಿ.ಎಂ.ಪಾಟೀಲ : ಧಾರವಾಡದ ಹಾಲಭಾಪಿ ಸ್ಕೂಲ್ ಆಫ್ ಆರ್ಟ್ ಒಂದು ಐತಿಹಾಸಿಕ ಅಧ್ಯಯನ. ಪುಟ-೪೪

ಅವರ ಆರ್ಥಿಕ ಸ್ಥಿತಿಯು ಕೂಡ ಸುಧಾರಿಸುತ್ತದೆ. ರಾಜ್ಯ ಮಟ್ಟದ ಮತ್ತು ರಾಷ್ಟ್ರಮಟ್ಟದ ಕಲಾಪ್ರದರ್ಶನ, ಕಲಾಶಿಬಿರ, ಗ್ರಾಫಿಕ್ ಕಾರ್ಯಗಾರ, ಲಲಿತಕಲೆಗಳ ಕುರಿತು ವಿಚಾರ ಸಂಕೀರ್ಣ, ಪ್ರಾತ್ಯಕ್ಷಿಕೆ, ಸ್ಲಾಯಿಡ್ ಶೋ, ಚರ್ಚೆ ನಡೆಸಿ ವಿದ್ಯಾರ್ಥಿಗಳ ಸರ್ವಾಂಗೀಣ ಪ್ರಗತಿಗೆ ಬುನಾದಿ ಒದಗಿಸುತ್ತಾರೆ.

ಶ್ರೀ. ಡಿ. ವಿ. ಹಾಲಭಾವಿಯವರು ತಾವು ಪ್ರಾಚಾರ್ಯರಾಗಿದ್ದಾಗ ಸಂಗ್ರಹಿಸಿದ ಮಹತ್ವದ ಗ್ರಂಥಗಳು, ಅವರು ರಚಿಸಿದ ಪುಸ್ತಕ, ಲೇಖನಗಳು, ಕಲಾ ಇತಿಹಾಸದ ಪಠ್ಯ ಪುಸ್ತಕಗಳು ಅವರ ಕಲಾಕೃತಿಗಳ ಛಾಯಾಚಿತ್ರಗಳು ಈ ಕಲಾಶಾಲೆಯ ಗ್ರಂಥಾಲಯದ ಸಂಗ್ರಹದಲ್ಲಿವೆ. ಶ್ರೀ. ಡಿ. ವಿ. ಹಾಲಭಾವಿಯವರ ಸಮಕಾಲೀನ ಕಲಾವಿದರ ಅಪರೂಪದ ಕಲಾಕೃತಿಗಳು ಮತ್ತು ಛಾಯಾಚಿತ್ರಗಳನ್ನು ಸಹ ಈ ಕಲಾಶಾಲೆಯವರು ಸಂಗ್ರಹಿಸಿ ವಿದ್ಯಾರ್ಥಿಗಳಿಗೆ ತೋರಿಸಿ ಅವುಗಳ ಕುರಿತು ಉಪನ್ಯಾಸ ಕೊಡುತ್ತಾರೆ. ಇದರಿಂದ ಹಿಂದಿನ ಇತಿಹಾಸ, ಕಲಾಕೃತಿಗಳ ತಂತ್ರ, ಶೈಲಿ, ವರ್ಣಗಾರಿಕೆಯನ್ನು ತಿಳಿಯಲು ಸಹಾಯವಾಗುತ್ತವೆ ಮತ್ತು ಆ ಕಾಲದ ಚಿತ್ರಕಲಾಕೃತಿಯ ಕುರಿತು ಅರಿಯಲು ಈ ಮೂಲಕ ಸಾಧ್ಯವಾಗುತ್ತದೆ. ಈ ರೀತಿಯ ವಾತಾವರಣದಲ್ಲಿ ಬೆಳೆಯುವ ಕಲಾ ವಿದ್ಯಾರ್ಥಿಗಳು ತಮ್ಮ ಕಲೆಯ ಮೂಲಕ ಧಾರವಾಡದ ಚಿತ್ರಕಲಾ ಪರಂಪರೆಯನ್ನು ಒಂದು ಉನ್ನತ ಮಟ್ಟದಲ್ಲಿ ಬೆಳೆಸಿಕೊಂಡು ಬರುತ್ತಿದ್ದಾರೆ.

**೨. ಶ್ರೀವಿಜಯ ಮಹಾಂತೇಶ ಲಲಿತಕಲಾ ಮಹಾವಿದ್ಯಾಲಯ, ಹುಬ್ಬಳ್ಳಿ**

೧೯೫೦ರಲ್ಲಿ ಕರ್ನಾಟಕ ಫೈನ್ ಆರ್ಟ್ ಸೊಸೈಟಿಯಿಂದ ಕಲಾಮಂದಿರ ಎಂಬ ಹೆಸರಿನಲ್ಲಿ ಹುಬ್ಬಳ್ಳಿಯ ಸರಾಫಗಟ್ಟಿಯ ಸಿಂದಗಿಯವರ ಕಟ್ಟದಲ್ಲಿ ಡಾ.ಎಂ.ವಿ.ಮಿಣಜಗಿಯವರು ಮುಂಬಯಿಯ ಸರ್.ಜೆ.ಜೆ.ಸ್ಕೂಲ್ ಆಫ್ ಆರ್ಟ್‌ದ ಪಠ್ಯಕ್ರಮದ ಅನುಸಾರವಾಗಿ ಚಿತ್ರಕಲಾ ಶಾಲೆಯನ್ನು ಪ್ರಾರಂಭಿಸಿದರು. ಇದರ ಜೊತೆ ಜೊತೆಯಾಗಿ ಹವ್ಯಾಸಿ ಚಿತ್ರಕಲಾ ತರಗತಿಗಳನ್ನು ನಡೆಸಲಾಗುತ್ತಿತ್ತು. ಶ್ರೀ. ಮಡಿವಾಳಪ್ಪ ವಿ ಮಿಣಜಗಿಯವರು ೧೯೦೧ ಜನೇವರಿ ೩೦ರಂದು ಬಿಜಾಪುರದಲ್ಲಿ ಜನಿಸಿದರು. ತಂದೆ ವೀರಪ್ಪ ತಾಯಿ ಶರಣವ್ವ ಇವರದು ವ್ಯಾಪಾರಸ್ಥ ಕುಟುಂಬವಾಗಿತ್ತು. ಇವರ ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣವನ್ನು ಬಿಜಾಪುರದಲ್ಲಿಯೇ ಮುಗಿಸಿದರು. ಇವರಿಗೆ ಬಾಲ್ಯದಿಂದಲೂ ಚಿತ್ರ ಸಂಗೀತ ಕಲೆಗಳಲ್ಲಿ ಆಸಕ್ತಿ ಇತ್ತು. ಇವರು ಮುಂದಿನ ಚಿತ್ರಕಲಾ ಅಭ್ಯಾಸಕ್ಕಾಗಿ ಮುಂಬೈನ ಸರ್.ಜೆ.ಜೆ.ಸ್ಕೂಲ್ ಆಫ್ ಆರ್ಟ್‌ನಲ್ಲಿ ಚಿತ್ರಕಲೆಯಲ್ಲಿ ಡಿಪ್ಲೊಮಾ ಅಧ್ಯಯನ ಮಾಡಿ ಆರ್ಟ್ ಮಾಸ್ಟರ್ ಅಭ್ಯಾಸ ಮಾಡಿದರು. ಶಿಷ್ಯವೇತನ ಪಡೆದು ಭಿತ್ತಿಚಿತ್ರ ರಚನೆಯ ಅಧ್ಯಯನವನ್ನು ಮಾಡಿದರು. ೧೯೩೦ರಲ್ಲಿ ಇಂಗ್ಲೆಂಡ್‌ಗೆ ಪ್ರಯಾಣ ಬೆಳೆಸಿ ತಮ್ಮ ಕಲಾ ವ್ಯಾಸಂಗವನ್ನು ಲಂಡನ್ನಿನ ರಾಯಲ್ ಕಾಲೇಜ್ ಆಫ್ ಆರ್ಟ್ಸ ಶಾಲೆಯಲ್ಲಿ ಮುಂದುವರೆಸಿದರು.

೧೯೩೯ರಲ್ಲಿ ತಮ್ಮ ಕಲಾ ಶಿಕ್ಷಣವನ್ನು ಯಶಸ್ವಿಯಾಗಿ ಪೂರೈಸಿಕೊಂಡು ಭಾರತಕ್ಕೆ ಮರಳಿ ತಮ್ಮ ಕಲಾ ಸೇವೆಯನ್ನು ಮುಂದುವರೆಸಿದರು. ಚಿತ್ರಕಲಾವಿದರಾಗಿ ರಾಷ್ಟ್ರೀಯ ಅಂತರಾಷ್ಟ್ರೀಯ ಖ್ಯಾತಿಯನ್ನು ಪಡೆದಿದ್ದರು. ಆದರೆ ಕರ್ನಾಟಕದ ಎಷ್ಟೋ ಬಡ ವಿದ್ಯಾರ್ಥಿಗಳು ದೂರದ ಮುಂಬೈ ನಗರದಲ್ಲಿ ವಾಸಿಸಿ ಶಿಕ್ಷಣ ಪಡೆಯುವುದು ಸುಲಭವಾಗಿ ಸಾಧ್ಯವಾಗುವುದಿಲ್ಲವೆಂದು ಅರಿತುಕೊಂಡ ೧೯೪೭-೪೮ರಲ್ಲಿ ಹುಬ್ಬಳ್ಳಿಗೆ ಬಂದರು ನಂತರ ಹಳೇ ಬಸ್ ನಿಲ್ದಾಣದ ಡಾಕ್ಟರ್ ಹಿಪ್ಪರಗಿಯವರ ಕಟ್ಟಡದಲ್ಲಿ ಹವ್ಯಾಸಿ ಚಿತ್ರಕಲಾ ತರಬೇತಿಯನ್ನು ಪ್ರಾರಂಭಿಸಿದರು.

ಕರ್ನಾಟಕ ಏಕೀಕರಣ ಆದ ನಂತರ ಶ್ರೀ ಎಸ್.ಆರ್.ಕಂಠಿಯವರು ಶಿಕ್ಷಣ ಸಚಿವರಾಗಿದ್ದರು. ಅದೇ ಸಮಯದಲ್ಲಿ ಮೂರು ಸಾವಿರ ಮಠದ ಜಗದ್ಗುರುಗಳವರು ಅವರ ಸಮ್ಮುಖದಲ್ಲಿ ೧೯೬೮ರ ಸುಮಾರಿಗೆ ಜಗದ್ಗುರುಗಳು ೨೫೦೦೦ ರೂಪಾಯಿಗಳನ್ನು ನೂತನ ಕಟ್ಟಡ ಕಟ್ಟಿಸಲು ದೇಣಿಗೆಯನ್ನು ಕೊಡಲು ಆಶ್ವಾಸನೆಯನ್ನು ನೀಡಿ ತಮ್ಮ ಪೂರ್ವಾಶ್ರಮದ ಗುರುಗಳಾದ ಶ್ರೀವಿಜಯ ಮಹಾಂತೇಶ ಹೆಸರಿನಿಂದ ಕಲಾಮಂದಿರಕ್ಕೆ ಮರು ನಾಮಕರಣ ಮಾಡಲಾಯಿತು. ಈ ಸಮಾರಂಭಕ್ಕೆ ವರಕವಿ ದ. ರಾ. ಬೇಂದ್ರೆ ಪತ್ರಕರ್ತರಾದ ಶ್ರೀ. ಪಾಟೀಲ ಪುಟ್ಟಪ್ಪನವರು ಉಪಸ್ಥಿತರಿದ್ದರು.

ಡಾ. ಎಂ. ವಿ. ಮಿಣಜಗಿಯವರು ತಮ್ಮ ಜನ್ಮ ದಿನ ಜನವರಿ ೩೦ ರಂದು ಚಿತ್ರಕಲಾ ಸ್ಪರ್ಧೆಯನ್ನು ಏರ್ಪಡಿಸುವ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದರು. ೧೯೫೧ರಿಂದ ಚಿಕ್ಕ ಮಕ್ಕಳ ಚಿತ್ರಕಲಾ ಸ್ಪರ್ಧೆಯೆಂದು ಅದಕ್ಕೆ ಹೆಸರನಿಟ್ಟ ಪ್ರತಿ ವರ್ಷವು ಈ ಕಾರ್ಯಕ್ರಮವನ್ನು ನಡೆಸಿಕೊಂಡು ಹೋಗುತ್ತಿದ್ದರು. ೫೧ನೇ ಜನ್ಮ ದಿನದ ಅಂಗವಾಗಿ ಚಿಕ್ಕಮಕ್ಕಳ ಚಿತ್ರ ಕಲಾ ಪ್ರದರ್ಶನವನ್ನು ಏರ್ಪಡಿಸಿದರು. ಮಿಣಜಗಿಯವರು ಚಿತ್ರಕಲೆಯಲ್ಲಿ ಅಭಿರುಚಿ ಇದ್ದು ಕಲಿಯುವಂತಹ ಮಕ್ಕಳಿಗೆ ಮೆಟ್ರಿಕ್ ಪರೀಕ್ಷೆ ಮುಗಿಕೊಳ್ಳುವುದರೊಳಗಾಗಿಯೇ Lower/Higher ಡ್ರಾಯಿಂಗ್ ಗ್ರೇಡ್ ಪರೀಕ್ಷೆಗಳನ್ನು ನಡಿಸಿ ಅದರ ಮೂಲಕ ಜ್ಞಾನದ ಅರಿವು ಮೂಡಿಸಿ ಚಿತ್ರಕಲೆಯನ್ನು ಕಲಿಯಲು ಅವಕಾಶ ಮಾಡಿಕೊಡುತ್ತಿದ್ದರು. ಈ ಕಲಾ ಮಂದಿರದಲ್ಲಿ ನಡೆಯುವ ಕಲಾಪ್ರದರ್ಶನಗಳು ಉತ್ತಮ ರೀತಿಯಲ್ಲಿರುತ್ತಿದ್ದವು. ೦೮.೦೧.೧೯೫೪ರಲ್ಲಿ ನಡೆದ ಚಿತ್ರಕಲಾ ಪ್ರದರ್ಶನವನ್ನು ಆಗಿನ ಉಪರಾಷ್ಟ್ರಪತಿ ಡಾ. ಸರ್ವಪಲ್ಲಿ ರಾಧಾಕೃಷ್ಣನ್‌ರವರು ನೆರವೇರಿಸಿದರು.

೧೯೫೫ರಲ್ಲಿ ಶ್ರೀ. ಮಿಣಜಗಿಯವರ ೫೫ನೆಯ ಹುಟ್ಟುಹಬ್ಬದ ಅಂಗವಾಗಿ ಮೂರು ದಿನಗಳ ಕಾಲ ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳಿಗಾಗಿ ಚಿತ್ರಕಲಾ ಸ್ಪರ್ಧೆ, ಪ್ರದರ್ಶನ ಮತ್ತು ಸಾಂಸ್ಕೃತಿಕ ಕಾರ್ಯಕ್ರಮವನ್ನು ಏರ್ಪಡಿಸಿದರು. ೧೯೮೪ ನವೆಂಬರ್ ೮ರಂದು ಕರ್ನಾಟಕ ಫೈನ್ ಆರ್ಟ್ ಎಜುಕೇಶನ್ ಸೊಸೈಟಿ ನಡೆಸುತ್ತಿದ್ದ ಶ್ರೀ ವಿಜಯ ಮಹಾಂತೇಶ ಲಲಿತಕಲಾ

ಮಹಾವಿದ್ಯಾಲಯ ಸಂಪೂರ್ಣ ಆಡಳಿತವನ್ನು ಜಗದ್ಗುರು ಮೂರು ಸಾವಿರ ಮಠ ವಿದ್ಯಾವರ್ಧಕ ಸಂಘಕ್ಕೆ ಹಸ್ತಾಂತರಿಸಲಾಯಿತು.

ಡಾ.ಎಂ.ವಿ.ಮಿಣಜಗಿಯವರು ೧೯೬೫ರಲ್ಲಿ ಪ್ರಾಚಾರ್ಯ ಹುದ್ದೆಯಿಂದ ನಿವೃತ್ತರಾದರು. ಕಲಾಮಂದಿರದಲ್ಲಿ ಅಧ್ಯಾಪಕರಾಗಿದ್ದ ಶ್ರೀ. ಬಸವರಾಜ ಹಳಿಜೋಳ ಅವರು ಅಧಿಕಾರ ವಹಿಸಿಕೊಂಡರು ೩೪ ವರ್ಷಗಳ ಸೇವೆ ಸಲ್ಲಿಸಿದರು. ಇವರು ನಂತರ ೧೯೮೭ರಲ್ಲಿ ಶ್ರೀ ಕಂಠೇಪ್ಪನವರು ಅಧಿಕಾರವಹಿಸಿಕೊಂಡು ಕಲಾ ಮಂದಿರ ಏಳಿಗೆಗಾಗಿ ಮಡಿದರು. ಇವರ ಅಕಾಲಿಕ ಮರಣದ ನಂತರ ಕಲಾ ಶಾಲೆಯ ಉಪನ್ಯಾಸಕರಾಗಿದ್ದ ಶ್ರೀ.ಪಿ.ಎಸ್.ಹಿರೇಮಠರವರು ಪ್ರಾಚಾರ್ಯರಾಗಿ ಸೇವೆಯನ್ನು ಆರಂಭಿಸಿದ್ದರು. ೧೯೯೫ರ ಜನವರಿ ೩೦ರಂದು ಸಂಸ್ಥಾಪಕರಾದ ಡಾ.ಎಂ.ವಿ.ಮಿಣಜಗಿಯವರ ೯೫ನೇ ಜನ್ಮದಿನದ ಅಂಗವಾಗಿ ಕರ್ನಾಟಕ ಲಲಿತ ಕಲಾ ಅಕಾಡೆಮಿಯವರು ಮೂರು ದಿನಗಳ ಕಾಲ ಏರ್ಪಡಿಸಿದ್ದ ಡಾ.ಎಂ.ವಿ.ಮಿಣಜಗಿಯವರ ಸ್ಮಾರಕ ಉಪನ್ಯಾಸ ಮತ್ತು ಕಲಾ ಪ್ರದರ್ಶನದ ಉದ್ಘಾಟನೆಯನ್ನು ಹಿರಿಯ ಪತ್ರಿಕೋದ್ಯಮಿ ಶ್ರೀ ಪಾಟೀಲ ಪುಟ್ಟಪ್ಪನವರು ನೆರವೇರಿಸಿದರು. "ಡಾ.ಅ.ಸುಂದರ ಅವರು ಕರ್ನಾಟಕದ ಬೌದ್ಧ ಶಿಲ್ಪ ಕಲೆ ಎನ್ನುವ ವಿಷಯ ಉಪನ್ಯಾಸವನ್ನು ಮಂಡಿಸಿದರು. ಡಾ.ಬಿ.ಕೆ.ಹಿರೇಮಠರವರು ಕರ್ನಾಟಕದ ಕಲೆಗೆ ಉತ್ತರ ಕರ್ನಾಟಕದ ಕಲಾವಿದರ ಕೊಡುಗೆ ಎನ್ನುವ ವಿಷಯವನ್ನು ಮಂಡಿಸಿದರು. ದೃಶ್ಯಾನುಭವ ಮತ್ತು ಗ್ರಹಿಕೆಯ ವಿಧಾನ ಎನ್ನುವ ವಿಷಯ ಉಪನ್ಯಾಸವನ್ನು ಎಚ್.ಎ.ಅನಿಲಕುಮಾರ ಅವರು ಮಂಡಿಸಿದರು. ಆಧುನಿಕ ಕಲೆ ಎಂದರೇನು ಎನ್ನುವ ಉಪನ್ಯಾಸವನ್ನು ಶ್ರೀ ವಿಜಯರಾವ್ ಅವರು ಮಾಡಿದರು. ಈ ಸಮಾರಂಭದ ಅಧ್ಯಕ್ಷಸ್ಥಾನವನ್ನು ಕರ್ನಾಟಕ ಲಲಿತ ಕಲಾ ಅಕಾಡೆಮಿಯ ಆಗಿನ ಅಧ್ಯಕ್ಷರಾಗಿದ್ದ ಶ್ರೀ.ಪಿ.ಆರ್.ತಿಪ್ಪೇಸ್ವಾಮಿಯವರು ವಹಿಸಿಕೊಂಡಿದ್ದರು."[೧೦]

**ಪ್ರಸ್ತುತ ಚಿತ್ರಕಲಾ ಮಹಾವಿದ್ಯಾಲಯದ ಅಧ್ಯಾಪಕ ವೃಂದ**

ಪ್ರಭಾರಿ ಪ್ರಾಚಾರ್ಯರಾಗಿ ಶ್ರೀ.ಎಂ.ಸಿ. ಚೆಟ್ಟಿ, ಶ್ರೀ. ಸಿ. ಡಿ. ಜಟ್ಟಣ್ಣವರ, ಶ್ರೀ.ಬಿ.ವೈ. ನಾಗನಗೌಡ, ಶ್ರೀ.ವಿ. ಎಮ್. ಕಾನ್‌ಪೇಟ, ಶ್ರೀ.ಆರ್. ಎಫ್. ಹಿರೇಗೌಡರ, ಶ್ರೀ. ಎಂ. ಎಸ್. ಹೊಸಹಳ್ಳಿಮಠ, ಶ್ರೀ.ಎಸ್.ಎಮ್.ಕಾಂಬಳೆ, ಶ್ರೀ. ಸಿ.ಜಿ. ಕಮ್ಮಾರ, ಶ್ರೀಮತಿ ಕೆ.ವಿ.ಕುಗಟೆ ಅವರು ಉಪನ್ಯಾಸಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

**ಸಮಕಾಲೀನ ಸಂದರ್ಭದಲ್ಲಿ ಕಲಾಮಹಾವಿದ್ಯಾಲಯದ ಚಟುವಟಿಕೆಗಳು**

ಕಲಾಶಾಲೆಯ ವಿದ್ಯಾರ್ಥಿಗಳಿಗೆ ಸಮಕಾಲೀನ ಕಲೆಯ ಕುರಿತು ಹೊಸ ಹೊಸ ತಂತ್ರಗಳು,

---

೧೦. ಲತಾರಾಣಿ ಮಲ್ಹಾರ : ಡಾ.ಎಂ.ವಿ.ಮಿಣಜಗಿಯವರ ಶ್ರೀ ವಿಜಯ ಮಹಾಂತೇಶ ಲಲಿತಕಲಾ ಮಹಾವಿದ್ಯಾಲಯದ ಐತಿಹಾಸಿಕ ಅಧ್ಯಯನ, ಪುಟ –

ಶೈಲಿ, ವಿಧಾನಗಳನ್ನು ಕ್ಯಾಮಲಿನ್ ಕಂಪನಿಯ ಸಹಯೋಗದೊಂದಿಗೆ ಕಲಾ ಪ್ರಾತ್ಯಕ್ಷಿಕೆ ಮೂಲಕ ತೋರಿಸಿಕೊಡಲಾಗುತ್ತದೆ. ಕಂಪನಿಯಿಂದ ಬರುವ ಉದ್ಯೋಗಿಗಳು ಬಣ್ಣದ ತಯಾರಿಕೆ ಅವುಗಳ ಗುಣ್ಣಮಟ್ಟ ಮತ್ತು ಬಳಕೆಯ ಕುರಿತು ಮಾಹಿತಿ ನೀಡುತ್ತಾರೆ. ಮತ್ತು ವಿದ್ಯಾರ್ಥಿಗಳಿಗೆ ಪರಿಕರಗಳ ಬಳಕೆಯ ವಿಧಾನವನ್ನು ತೋರಿಸಿ ಬಣ್ಣ, ಕುಂಚ, ಕ್ಯಾನ್ವಾಸ್‌ಗಳನ್ನು ಕಡಿಮೆ ಬೆಲೆಯಲ್ಲಿ ಮಾರಾಟ ಮಾಡುವ ವ್ಯವಸ್ಥೆಯನ್ನು ಈ ಕಲಾಶಾಲೆಯವರು ಪ್ರತಿವರ್ಷದ ಮೊದಲಿಗೆ ಮಾಡುತ್ತಾರೆ. ಇದರಿಂದ ವಿದ್ಯಾರ್ಥಿಗಳಿಗೆ ತುಂಬಾ ಸಹಾಯವಾಗುತ್ತದೆ.

ಕುಂಚ, ಬಣ್ಣ ಪೆನ್ಸಿಲ್ ಇತ್ಯಾದಿ ಅವಶ್ಯಕ ಕಲಾ ಪರಿಕರಗಳ ತಯಾರಿಕೆಯನ್ನು ನೋಡುವುದರೊಂದಿಗೆ ಬಳಸುವ ವಿಧಾನವನ್ನು ಕಲಿಸಿಕೊಡಲಾಗುತ್ತದೆ. ಟೆರ್ರಾಕೋಟ, ಬಾಟಿಕ್, ಗ್ಲಾಸ್‌ಪೇಂಟಿಂಗ್, ಸ್ಯಾಂಡ್ ಬ್ಯಾಸ್ಟ್ ಕಲಾಕೃತಿ ರಚನೆಯ ಕಾರ್ಯಾಗಾರವನ್ನು ಏರ್ಪಡಿಸುತ್ತಾರೆ. ಇದರಿಂದ ಎಲ್ಲಾ ಮಾಧ್ಯಮಗಳನ್ನು ಒಂದೇ ಕಡೆಗೆ ಕಲಿಯುವ ಅವಕಾಶ ದೊರೆತು ವಿದ್ಯಾರ್ಥಿಗಳ ಅಧ್ಯಯನಕ್ಕೆ ಉತ್ತೇಜನ ನೀಡಿದಂತಾಗುತ್ತದೆ. ಈ ಕಲಾಶಾಲೆಯು ಪರಿಣಾಮಕಾರಿಯಾದ ಕಲಾ ಶಿಕ್ಷಣ ನೀಡುವ ಮೂಲಕ ಕರ್ನಾಟಕದ ಸಾಂಸ್ಕೃತಿಕ ರಾಜಧಾನಿಯಾದ ಧಾರವಾಡ ಜಿಲ್ಲೆಯ ಕಲಾ ಕ್ಷೇತ್ರಕ್ಕೆ ತನ್ನ ಕೊಡುಗೆಯನ್ನು ನೀಡುತ್ತಲಿದೆ.

**೩. ಸರಕಾರಿ ಚಿತ್ರಕಲಾ ಮಹಾವಿದ್ಯಾಲಯ, ಧಾರವಾಡ**

ಕ್ರಿ.ಶ.೧೯೫೮-೫೯ನೇ ಸಾಲಿನಲ್ಲಿ ಧಾರವಾಡದ ಸರಕಾರಿ ಚಿತ್ರಕಲಾ ಮಹಾವಿದ್ಯಾಲಯ ಸ್ಥಾಪನೆಯಾಯಿತು. ಈಗಿರುವ ಯುನಿವರ್ಸಿಟಿ ಪಬ್ಲಿಕ್ ಸ್ಕೂಲ್ ಕಟ್ಟಡದಲ್ಲಿ ೧೯೫೮ರ ಪೂರ್ವದಲ್ಲಿ ಎ.ಕೆ.ಗರ್ಲ್ ಹೈಸ್ಕೂಲ್ ಎಂಬ ಹೆಸರಿನ ಪ್ರೌಢಶಾಲೆ ನಡೆಯುತ್ತಿತ್ತು. ಆ ಶಾಲಾ ಮಕ್ಕಳಿಗೆ ಚಿತ್ರಕಲೆಯನ್ನು ಮತ್ತು ಸಂಗೀತವನ್ನು ಬೋಧಿಸಲು ೧೯೫೯ರಲ್ಲಿ ಈಗಿರುವ ಕಟ್ಟದಲ್ಲಿಯೇ ಚಿತ್ರಕಲೆ ಮತ್ತು ಸಂಗೀತ ವಿಭಾಗವನ್ನು ಎ.ಕೆ.ಗರ್ಲ್ ಹೈಸ್ಕೂಲ್ ಒಂದು ವಿಭಾಗವಾಗಿ ಇದು ಕಾರ್ಯಾರಂಭ ಮಾಡಿತು. ಆಗ ಸಂಗೀತ ಶಿಕ್ಷಕರಾಗಿ ಶ್ರೀ.ಸಣ್ಣಕ್ಕಿಯವರು ಚಿತ್ರಕಲಾ ಶಿಕ್ಷಕರಾಗಿ ಶ್ರೀ.ಬಿ.ಎನ್.ಬಡಿಗೇರ ಅವರ ಸೇವೆ ಸಲ್ಲಿಸುತ್ತಿದ್ದರು. ಪ್ರೌಢಶಾಲಾ ವಿದ್ಯಾರ್ಥಿನಿಯರಿಗೆ ಚಿತ್ರ ಕಲೆಯನ್ನು ಕಲಿಸುವ ಉದ್ದೇಶದಿಂದ ಪ್ರಾರಂಭಗೊಂಡ ಈ ಚಿತ್ರಕಲಾ ವಿಭಾಗ ಮುಂದೆ ಕರ್ನಾಟಕದ ವಿಶ್ವವಿದ್ಯಾಲಯದಡಿಯಲ್ಲಿ ಈ ಎ. ಕೆ. ಗರ್ಲ್ ಹೈಸ್ಕೂಲನ್ನು ಪಾಠಾಭ್ಯಾಸ ಶಾಲೆಯನ್ನಾಗಿ ಕರ್ನಾಟಕ ವಿಶ್ವವಿದ್ಯಾಲಯ ಬದಲಾಯಿಸಿ ಬಿ.ಇಡಿ. ವಿದ್ಯಾರ್ಥಿಗಳು ಮಾದರಿ ಪಾಠಗಳನ್ನು ಬೋಧಿಸಲು ಅವಕಾಶ ಮಾಡಿಕೊಡಲು ಇದರ ಹೆಸರನ್ನೇ ಬದಲಾಯಿಸಿದರು. ಅದು ಆಗ ಯುನಿವರ್ಸಿಟಿ ಪಬ್ಲಿಕ್ ಸ್ಕೂಲ್ ಎಂದು ಮರುನಾಮಕರಣಗೊಂಡಿತು. ನಂತರದಲ್ಲಿ ಈ ಚಿತ್ರಕಲೆ ಹಾಗೂ ಸಂಗೀತ ವಿಭಾಗವನ್ನು ಡೈಟ್ ವ್ಯಾಪ್ತಿಗೆ ಒಳಪಡಿಸಲಾಯಿತು. ಆಗ ಡೈಟ್ ಪ್ರಾಚಾರ್ಯರಾಗಿ

ಶ್ರೀ.ಹ.ಗ.ಜೋಶಿಯವರು ಸೇವೆಸಲ್ಲಿಸುತ್ತಿದ್ದರು. ಇವರ ಅಧಿಕಾರಾವಧಿಯಲ್ಲಿ ಸಂಗೀತಕ್ಕೆ ಒಂದು ಪ್ರತ್ಯೇಕ ವಿಭಾಗ ಮಾಡಿ ಅದನ್ನು ಡೈಟ್ ಆವರಣಕ್ಕೆ ಸ್ಥಳಾಂತರಿಸಿಕೊಂಡರು. ಈಗಿರುವ ಚಿತ್ರಕಲಾ ವಿಭಾಗವನ್ನೇ ಸರಕಾರಿ ಚಿತ್ರಕಲಾ ಶಾಲೆ ಎಂದು ಪ್ರತ್ಯೇಕವಾಗಿಸಿ ಅಲ್ಲಿ ಕೇವಲ ಚಿತ್ರಕಲೆಯ ತರಗತಿಗಳನ್ನು ಪ್ರಾರಂಭಿಸಿದರು.

ಶ್ರೀಮಾನ್ ಕಾರಡಗಿಯವರು ಆಗಿನ ಮುಂಬೈ ಪ್ರಾಂತ್ಯದ ಉನ್ನತ ಚಿತ್ರಕಲಾ ಪರೀಕ್ಷೆಗಳನ್ನು ನಡೆಸುತ್ತಿದ್ದರು. ಅವರು ಈ ಚಿತ್ರಕಲಾ ಶಾಲೆಯನ್ನೇ ಪರೀಕ್ಷಾ ಕೇಂದ್ರವನ್ನಾಗಿ ಪರಿವರ್ತಿಸಿದರು. ಇಡೀ ಕರ್ನಾಟಕದ ಎಲ್ಲ ಜಿಲ್ಲೆಗಳಿಂದ ಬರುವ ವಿದ್ಯಾರ್ಥಿಗಳಿಗೆ ಬೇಕಾದಷ್ಟು ಚಿತ್ರಕಲಾ ಶಾಲೆಯನ್ನೇ ಪರೀಕ್ಷಾ ಕೇಂದ್ರವನ್ನಾಗಿ ಪರಿವರ್ತಿಸಿದರು. ಆಗ ಈ ಸರಕಾರಿ ಚಿತ್ರಕಲಾ ಶಾಲೆಯಲ್ಲಿ ಕೇವಲ ಎಲಿಮೆಂಟರಿ ಡ್ರಾಯಿಂಗ್ ಮತ್ತು ಎರಡನೇ ವರ್ಷ ಇಂಟರ್ ಮೀಡಿಯಟ್ ಪೇಂಟಿಂಗ್ ತರಗತಿಗಳನ್ನು ಮಾತ್ರ ನಡೆಸಲಾಗುತ್ತಿತ್ತು. ೧೯೭೨-೭೩ರಲ್ಲಿ ಶ್ರೀ.ಬಿ.ಎನ್.ಬಡಿಗೇರ ಅವರ ಚಿತ್ರಕಲಾ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದರು. ಆಗ ಬೆಳಗಾವಿ ವಿಭಾಗದ ಸಹ ನಿರ್ದೇಶಕರಾಗಿ ಸೇವೆಯನ್ನು ಸಲ್ಲಿಸುತ್ತಿದ್ದ ಶ್ರೀ.ಟಿ.ರಾಮಯ್ಯ ಅವರು ಸಹ ಈ ಕಲೆಯಲ್ಲಿ ಪ್ರಾವೀಣ್ಯತೆಯನ್ನು ಹೊಂದಿದವರು. ಅಲ್ಲದೇ ಕಲಾ ಪ್ರೇಮಿಗಳಾಗಿದ್ದರು. ಅವರ ಆಸಕ್ತಿ ಅಭಿರುಚಿ ಕಾರಡಗಿಯವರು ಆಗಿನ ಬೆಳಗಾವಿ ವಿಭಾಗದ ಸಹನಿರ್ದೇಶಕರಾಗಿದ್ದ ಡಿ.ರಾಮಯ್ಯನವರು ಶ್ರೀ.ಎಂ.ಸಿ.ತೆಂಬದವರು ಡೈಟ್ ಪ್ರಾಚಾರ್ಯರಾಗಿದ್ದ. ಶ್ರೀ. ಹಗ.ಜೋಷಿಯವರಂತಹ ಅಧಿಕಾರಿಗಳ ಇಚ್ಛಾಶಕ್ತಿಗಳಿಂದ ಇದನ್ನು ಒಂದು ಪೂರ್ಣ ಪ್ರಮಾಣದ ಚಿತ್ರಕಲಾ ಶಾಲೆಯನ್ನಾಗಿ ಮಾಡಲು ಸಾಧ್ಯವಾಯಿತು.

ಅದರಂತೆ ಕಾರ್ಯಪ್ರವೃತ್ತರಾದ ಇವರುಗಳು ಚಿತ್ರಕಲೆಯನ್ನು ಕಲಿಯಲು ಬರುವ ವಿದ್ಯಾರ್ಥಿಗಳ ಸಂಖ್ಯೆಗನುಸಾರ ಶಿಕ್ಷಕರ ಸಂಖ್ಯೆ ಹೆಚ್ಚಿಸಲು ಚಿಂತನೆ ನಡೆಸಿದರು. ನಂತರದಲ್ಲಿ ಈಗಿರುವ ಸರಕಾರಿ ಹೆಣ್ಣು ಮಕ್ಕಳ ಟ್ರೇನಿಂಗ್ ಕಾಲೇಜಿನಲ್ಲಿ ಸೇವೆ ಸಲ್ಲಿಸುತ್ತಿದ್ದ ಶ್ರೀ.ಎಂ.ಆರ್.ಬಾಳಿಕಾಯಿಯವರನ್ನು ಸರಕಾರಿ ಚಿತ್ರಕಲಾ ಶಾಲೆಗೆ ವರ್ಗಾವಣೆ ಮಾಡಿದರು. ಆಗ ಇಲ್ಲಿ ಶಿಕ್ಷಕರ ಸಂಖ್ಯೆ ಎರಡಾಯಿತು. ಶ್ರೀ. ಬಿ.ಎನ್.ಬಡೀಗೇರ ಮತ್ತು ಶ್ರೀ. ಎಂ. ಆರ್. ಬಾಳಿಕಾಯಿಯವರು ಎಲಿಮೆಂಟರಿ ಡ್ರಾಯಿಂಗ್, ಇಂಟರ್ ಮೀಡಿಯೆಟ್ ಪೇಂಟಿಂಗ್ ಹಾಗೂ ಅಡ್ವಾನ್ಸ್ ಡಿಪ್ಲೊಮಾ ತರಗತಿಗಳನ್ನು ನಡೆಸುವಂತಾಯಿತು.[೧೧] ಆಗಲೇ ಇದು ಇಡೀ ಕರ್ನಾಟಕದ ಏಕೈಕ ಉನ್ನತ ಚಿತ್ರ ಕಲಾ ಪರೀಕ್ಷಾ ಕೇಂದ್ರವಾಗಿ ಚಿರಪರಿಚತವಾಗಿತ್ತು.

ಸರಕಾರಿ ಗಂಡುಮಕ್ಕಳ ಟ್ರೈನಿಂಗ್ ಕಾಲೇಜಿನ ಹೆಸರಾಂತ ಉಪನ್ಯಾಸಕರಾದ ಶ್ರೀ. ಎಂ.ಸಿ.ತೆಂಬದ ಅವರು ಪ್ರಾಚಾರ್ಯರಾಗಿದ್ದಾಗ ಶ್ರೀ. ಹ.ಗ.ಜೋಷಿಯವರ ಪ್ರಯತ್ನದ ಫಧಿಂದ ೧೯೭೫ರಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಅನುಮತಿಯ ಮೇರೆಗೆ ಐದು ವರ್ಷದ ಡ್ರಾಯಿಂಗ್

೧೧. ಸಂದರ್ಶನ, ಎಂ.ಆರ್.ಬಾಳಿಕಾಯಿ, ಧಾರವಾಡ. ದಿ. ೨೬ ಏಪ್ರಿಲ್ ೨೦೧೩

ಹಾಗೂ ಪೇಂಟಿಂಗ್ ವರ್ಗಗಳನ್ನು ಪ್ರಾರಂಭಿಸಲಾಯಿತು. ಆಗ ಇದು ಪೂರ್ಣ ಪ್ರಮಾಣದ ಉನ್ನತ ಚಿತ್ರಕಲಾ ಶಿಕ್ಷಣ ನೀಡುವ ಸರಕಾರಿ ಚಿತ್ರಕಲಾ ಶಾಲೆಯಾಗಿ ಬೆಳವಣಿಗೆಯನ್ನು ಹೊಂದುತ್ತಾ ಸಾಗಿತ್ತು. ಮುಂದೆ ೧೯೮೦-೮೧ನೆಯ ಸಾಲಿನಲ್ಲಿ ಶ್ರೀ.ಎನ್.ಎಂ.ದಾಟನಾಳರವರು ಕಾರವಾರ ಜಿಲ್ಲೆಯ ಹಳಿಯಾಳದ ತೇರಗಾಂ ಸರಕಾರಿ ಪ್ರೌಢಶಾಲೆಯಿಂದ ವರ್ಗವಾಗಿ ಇಲ್ಲಿಗೆ ಹಾಜರಾದರು. ಅವರೂ ಸಹ ಈ ಕಲಾ ಶಾಲೆಯ ಉನ್ನತಿಗೆ ಹೆಚ್ಚಿನ ಆಸಕ್ತಿ ಉಳ್ಳವರಾಗಿರುವುದರಿಂದ ಅವರು ಹಾಗೂ ಅವರೊಂದಿಗೆ ಅಧಿಕಾರಗಳ ಬೆಂಬಲ ರಾಜಕೀಯ ವ್ಯಕ್ತಿಗಳ ಬೆಂಬಲದಿಂದ ೧೯೮೧ರಿಂದ ಇಲ್ಲಿ ಹೊಸತಾಗಿ ಪ್ರಾರಂಭವಾದ ಡಿ.ಎಂ.ಸಿ.ತರಗತಿಗಳನ್ನು ನಡೆಸಲು ಸರಕಾರದ ಅನುಮತಿ ಪತ್ರವನ್ನು ಪಡೆಯುವಲ್ಲಿ ಯಶಸ್ವಿಯಾದರು. ಈ ಮೊದಲು ಇದ್ದ ಡಿ.ಟಿ.ಸಿ.ಬದಲಾಗಿ ಡಿ.ಎಂ.ಸಿ ಎಂಬ ಹೆಸರಿನ ಎರಡು ವರ್ಷದ ಚಿತ್ರಕಲಾ ಶಿಕ್ಷಕರ ತರಬೇತಿ ವರ್ಗಗಳು ೧೯೮೧ರಿಂದಲೇ ಪ್ರಾರಂಭಗೊಂಡವು.

ಇದರಿಂದ ಸರಕಾರಿ ಚಿತ್ರಕಲಾ ಶಾಲೆಯು ಮತ್ತಷ್ಟು ಬೆಳೆಯಲು ಸಹಕಾರಿಯಾಯಿತು. ಸರಕಾರಿ ಚಿತ್ರಕಲಾ ಶಿಕ್ಷಣ ಸಂಸ್ಥೆಯಾಗಿರುವದರಿಂದ ಸರಕಾರಿ ಫೀ ಹಣವನ್ನು ಮಾತ್ರ ಪಡೆಯಲಾಗುತ್ತಿತ್ತು ಮತ್ತು ಕಲಿಕೆಗೆ ಬೇಕಾದ ಸಾಮಗ್ರಿಗಳಾದ ಡ್ರಾಯಿಂಗ್ ಪೇಪರ್, ಪೆನ್ಸಿಲ್, ರಬ್ಬರ್, ಸ್ಕೇಲು, ಡ್ರಾಯಿಂಗ್ ಬೋರ್ಡುಗಳು, ಬಣ್ಣ, ಕುಂಚಗಳನ್ನು ಸಹ ಈ ಸಮಯದಲ್ಲಿ ಉಚಿತವಾಗಿ ನೀಡಲಾಗುತ್ತಿತ್ತು. ಈ ಸಾಮಗ್ರಿಗಳನ್ನು ಸರಕಾರದ ಧನ ಸಹಾಯದಿಂದ ಖರೀದಿಸಿ ಉಚಿತವಾಗಿ ನೀಡುತ್ತಿದ್ದುದರಿಂದ ಇಲ್ಲಿಗೆ ಆಗ ಕಲಿಯಲು ಬರುವವರ ಸಂಖ್ಯೆ ಕೂಡಾ ಹೆಚ್ಚಾಗತೊಡಗಿತ್ತು.

೧೯೯೯ರಲ್ಲಿ ಕರ್ನಾಟಕ ಸರಕಾರವು ಇಲ್ಲಿನ ಚಿತ್ರಕಲಾ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ನೀಡಿ ಸರಕಾರಿ ಚಿತ್ರಕಲಾ ಮಹಾವಿದ್ಯಾಲಯವೆಂದು ಉನ್ನತೀಕರಿಸಿ, ಅನುಮತಿ ನೀಡುವುದರೊಂದಿಗೆ ಬಿ.ಎಫ್.ಎ.ಪದವಿ ತರಗತಿಗಳನ್ನು ನಡೆಸಲು ಅನುಮತಿ ನೀಡಿತು. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಸಂಲಗ್ನತೆ ಪಡೆದು ಇಲ್ಲಿ ವಿಶ್ವವಿದ್ಯಾಲಯ ಮಟ್ಟದ ಪದವಿ ವರ್ಗಗಳನ್ನು ಪ್ರಾರಂಭ ಮಾಡಿದರು. "ಭಾರತ ಸ್ವಾತಂತ್ರ್ಯದ ಸುವರ್ಣ ಸ್ವಾತಂತ್ರ್ಯೋತ್ಸವದ ಸವಿನೆನಪಿಗಾಗಿ ಸರಕಾರಿ ಚಿತ್ರಕಲಾ ಮಹಾವಿದ್ಯಾಲಯದ ಎರಡು ವರ್ಗಗಳನ್ನು ಸರ್ಕಾರಿ ಆರ್ಟ್ ಗ್ಯಾಲರಿಯನ್ನಾಗಿ ಪರಿವರ್ತಿಸಲಾಯಿತು."[೧೨]

**ಪ್ರಸ್ತುತ ಚಿತ್ರಕಲಾ ಮಹಾವಿದ್ಯಾಲಯದ ಅಧ್ಯಾಪಕ ವೃಂದ**

ಶ್ರೀ.ಎನ್.ಎಂ.ದಾಟನಾಳ ಪ್ರಾಚಾರ್ಯರಾಗಿ, ಶ್ರೀ.ಡಿ.ಎಂ.ಬಡಿಗೇರ, ಶ್ರೀ.ಎಸ್.ಕೆ.ಪತ್ತಾರ,

---

೧೨. ಸಿ.ಸಿ.ಬಾರಕೇರ : ಚಿತ್ರಕಲಾ ಪ್ರಪಂಚಕ್ಕೆ ಧಾರವಾಡ ಸರಕಾರಿ ಚಿತ್ರಕಲಾ ಮಹಾವಿದ್ಯಾಲಯದ ಕೊಡುಗೆ, ಪುಟ –

ಶ್ರೀ.ಬಿ.ಹೆಚ್.ಕುರಿಯವರ, ಶ್ರೀ.ಎಸ್.ಐ.ಅಲೂರ, ಶ್ರೀ.ಸಿ.ಸಿ.ಬಾರಕೇರ, ಶ್ರೀ.ವಿ.ಆರ್.ಬಡಿಗೇರ, ಶ್ರೀಮತಿ ಬಿ.ಎಂ.ಬದಾಮಿ ಇವರು ಚಿತ್ರಕಲಾ ಶಿಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

**ಪ್ರಸ್ತುತ ಕಾರ್ಯಚಟುವಟಿಕೆಗಳು**

ಧಾರವಾಡ ಸರಕಾರಿ ಚಿತ್ರಕಲಾ ಮಹಾವಿದ್ಯಾಲಯ ಚಿತ್ರಕಲಾ ಶಿಕ್ಷಣದ ವಿವಿಧ ಕಲಾಪ್ರಕಾರಗಳು, ಮಾಧ್ಯಮಗಳು ಹಾಗೂ ಆಯಾಮಗಳನ್ನು ಅನೇಕ ವಿದ್ಯಾರ್ಥಿಗಳಿಗೆ ಕಲಿಸಿ, ಪ್ರೋತ್ಸಾಹಿಸಿ, ವಿದ್ಯಾರ್ಥಿಗಳು ಬೆಳೆಯಲು ಗುಣಾತ್ಮಕ ಶಿಕ್ಷಣ ನೀಡಿದೆ. ತನ್ನದೇ ಆದ ರೀತಿಯಲ್ಲಿ ಮಹತ್ವದ ಕೊಡುಗೆಗಳನ್ನು ಚಿತ್ರಕಲಾ ಕ್ಷೇತ್ರಕ್ಕೆ ನೀಡಿದೆ. ಈ ಕಲಾಸಂಸ್ಥೆ ನಾಟಕ, ಸಂಗೀತ ಕಲೆಗಳಿಗೂ ಕಲಾಸಂಸ್ಥೆ ಆಗಾಗ ನೆಲೆಯನ್ನು ಒದಗಿಸಿಕೊಡುವಲ್ಲಿ ಸಹಕಾರ ನೀಡುತ್ತಾ ಬಂದಿವೆ. ಚಿತ್ರಕಲಾವಿದರಿಗೆ ಅಕಾಡೆಮಿಯ ಕಲಾಚಟುವಟಿಕೆಗಳಿಗೆ ಕಲಾಶಿಬಿರಗಳಿಗೆ, ಕಲಾಪ್ರದರ್ಶನಗಳಿಗೆ ಉತ್ತಮ ಕಲಾಗ್ಯಾಲರಿಯ ಸೌಲಭ್ಯಗಳನ್ನು ನೀಡಿ ದೇಶದ ಮತ್ತು ನಾಡಿನ ಅನೇಕ ಕಲಾವಿದರಿಗೆ ಕಲಾವಿದ್ಯಾರ್ಥಿಗಳಿಗೆ ಉತ್ತಮ ಭವಿಷ್ಯ ರೂಪಿಸಿಕೊಡುವಲ್ಲಿ ಅಪಾರ ಕೊಡುಗೆ ನೀಡಿದೆ.

**೪. ಭಾರತೀಯ ಕಲಾಕೇಂದ್ರ, ಧಾರವಾಡ**

೧೯೭೦ರಲ್ಲಿ ಶ್ರೀ.ಎನ್.ಜಿ.ಬಡಿಗೇರ ಅವರು ತಾವೇ ಸ್ವತಂತ್ರವಾದ ಭಾರತೀಯ ಕಲಾ ಕೇಂದ್ರವೆಂಬ ಲಲಿತಕಲೆಗಳ ಶಾಲೆಯನ್ನು ಪ್ರಾರಂಭಿಸಿದರು. ಈ ಸಂಸ್ಥೆಯ ನಿರ್ದೇಶಕರಾಗಿ ಕಲಾ ಶಾಲೆಯ ಸರ್ವಾಂಗೀಣ ಪ್ರಗತಿಗಾಗಿ ತಮ್ಮ ಜೀವನವನ್ನು ಮುಡಿಪಾಗಿಟ್ಟಿದ್ದರು. ಇವರು ಹಗಲಿರುಳು ಶ್ರಮಿಸಿದ್ದುದರ ಫಲವಾಗಿ ಈಗ ಇದೊಂದು ನಾಡಿನ ಪ್ರತಿಷಿವಿತ ಕಲಾಶಾಲೆಯೆಂಬ ಅಗ್ಗಳಿಕೆಗೆ ಪಾತ್ರವಾಗಿದೆ. ಶ್ರೀ ಎನ್.ಜಿ.ಬಡಿಗೇರ ಅವರು ತಮ್ಮಲ್ಲಿರುವ ಕಲಾ ಶಿಕ್ಷಣವನ್ನು ಮತ್ತೊಂದು ಪೀಳಿಗೆಗೆ ಧಾರೆಯೆರೆಯಬೇಕು ಮತ್ತು ಅದು ಒಂದು ಉತ್ತಮವಾದ ಕಲಾಪರಂಪರೆಯ ಬೆಳೆಸಬೇಕು ಎನ್ನುವ ಉತಕ್ಕಟ ಬಯಕೆ ಅವರದಾಗಿತ್ತು. ಈ ಕಾರಣಕ್ಕಾಗಿ ಧಾರವಾಡವನ್ನು ಆಯ್ಕೆ ಮಾಡಿಕೊಂಡು ಇಲ್ಲಿಯೇ ತಮ್ಮದೇ ಆದ ಕಲಾಶಾಲೆಯನ್ನು ಹುಟ್ಟು ಹಾಕಿ ತಾವು ಪಡೆದಿರುವ ದೇಶವಿದೇಶಗಳ ಕಲಾ ಜ್ಞಾನದ ಸಂಪತ್ತನ್ನು ಶೈಕ್ಷಣಿಕ ರೂಪದಲ್ಲಿ ವಿದ್ಯಾರ್ಥಿಗಳಿಗೆ ಕೊಡತೊಡಗಿದರು.

ಶ್ರೀ.ಎನ್.ಜಿ.ಬಡಿಗೇರವರು ಸಂಸ್ಥೆಯು ಬಗ್ಗೆ ಅಪಾರ ಪ್ರೀತಿ, ಗೌರವ, ಹೊಂದಿದವರಾಗಿದ್ದರು. ಉತ್ತಮ ಕಲಾ ಶಿಕ್ಷಕರು, ಉತ್ಸಾಹಿಗಳು ಕ್ರಿಯಾಶೀಲರು ಆಗಿದ್ದರು. ತಮ್ಮ ಜೀವಿತ ಅವಧಿಯವರೆಗೂ ಸಂಸ್ಥೆಯ ಪ್ರಗತಿಯಲ್ಲಿ ಮುನ್ನಡೆದವರು ಯುವ ಕಲಾವಿದರಿಗೆ ಮಾರ್ಗದರ್ಶಿಯಾದವರು.[೧೩]

೧೩. ಸಂದರ್ಶನ, ವಿಜಯಲಕ್ಷ್ಮಿ ಸತ್ತಿಗೇರಿ, ಹುಬ್ಬಳ್ಳಿ, ದಿ. ಮೇ ೧೮, ೨೦೧೩

**ಪ್ರಸ್ತುತ ಮಹಾವಿದ್ಯಾಲಯದ ಕಲಾಚಟುವಟಿಕೆಗಳು**

ಈ ಕಲಾಶಾಲೆಯು ಪ್ರಾರಂಭದಿಂದಲೂ ಅನೇಕ ಕಲಾ ಚಟುವಟಿಕೆಗಳನ್ನು ಹಮ್ಮಿಕೊಳ್ಳುತ್ತಾ ಅಭಿವೃದ್ಧಿ ಪಥದಲ್ಲಿ ಸಾಗಿ ಬಂದಿದೆ. ವರ್ಷವೂ ವಿದ್ಯಾರ್ಥಿಗಳಿಗಾಗಿ ಚಿತ್ರಕಲಾ ಸ್ಪರ್ಧೆ, ಕಲಾಶಿಬಿರ, ಕಲಾ ಉಪನ್ಯಾಸ, ಕಲಾಪ್ರದರ್ಶನ, ಕ್ರೀಡೆ ಹೀಗೆ ಹತ್ತು ಹಲವು ಕಾರ್ಯ ಚಟುವಟಿಕೆಗಳನ್ನು ಹಮ್ಮಿಕೊಳ್ಳುತ್ತಾ ವಿದ್ಯಾರ್ಥಿಗಳ ಶೈಕ್ಷಣಿಕ ಬೆಳವಣಿಗೆಯಲ್ಲಿ ಮಹತ್ತರ ಪಾತ್ರವಹಿಸಿದೆ. ರಾಜ್ಯದ ಪ್ರಮುಖ ಕಲಾವಿದರನ್ನು ಕರೆಸಿ ಕಲಾಪ್ರಾತ್ಯಕ್ಷಿಕೆ ಏರ್ಪಡಿಸಿದೆ. ಕಲಾಶಿಬಿರಗಳನ್ನು ಕಲೆಗೆ ಸಂಬಂಧಿಸಿದ ಉಪನ್ಯಾಸಗಳನ್ನು ವಿದ್ಯಾರ್ಥಿಗಳಿಗೆ ಚಿತ್ರಕಲಾ ಸ್ಪರ್ಧೆಗಳನ್ನು ಏರ್ಪಡಿಸಲಾಗುತ್ತದೆ. ಕಲಾಶಿಕ್ಷಕರ ಹಾಗೂ ವಿದ್ಯಾರ್ಥಿಗಳು ರಚಿಸಿದ ಕಲಾಕೃತಿಗಳ ಕಲಾ ಪ್ರದರ್ಶನ ನಡೆಸಲಾಗುತ್ತದೆ.

**ಪ್ರಸ್ತುತ ಭಾರತೀಯ ಕಲಾಕೇಂದ್ರದ ಅಧ್ಯಾಪಕ ವೃಂದ**

ಪ್ರಸ್ತುತ ಭಾರತೀಯ ಕಲಾಕೇಂದ್ರದಲ್ಲಿ ಶ್ರೀ.ಜೆ.ವಿ.ಕಮ್ಮಾರ ಪ್ರಾಚಾರ್ಯರಾಗಿ, ಶ್ರೀ.ಯು.ಎಸ್.ಹಿರೇಮಠ, ಎನ್.ಎಸ್.ನಾಯ್ಕ, ಶ್ರೀ.ಜೆ.ಸಿ.ಕೋಟೂರ, ಶ್ರೀ.ವಿ.ಬಿ.ಸತ್ತಿಗೇರಿ, ಶ್ರೀ.ಎನ್.ಆರ್.ನಾಯ್ಕರ ಇವರು ಉಪನ್ಯಾಸಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ಈ ಕಲಾ ಕೇಂದ್ರದಲ್ಲಿ ಅಧ್ಯಯನ ಮಾಡಿದ ಅನೇಕ ವಿದ್ಯಾರ್ಥಿಗಳು ಉತ್ತಮ ಅಂಕಗಳನ್ನು ಪಡೆದು ಕಾಲೇಜಿಗೆ ಕೀರ್ತಿ ತಂದಿದ್ದಾರೆ. ಅನೇಕ ವಿದ್ಯಾರ್ಥಿಗಳು ರ್‍ಯಾಂಕ್‌ಗಳನ್ನು ಪಡೆದು ಕಲಾ ಕೇಂದ್ರದ ಕೀರ್ತಿಯನ್ನು ಹೆಚ್ಚಿಸಿದ್ದಾರೆ. ಇಲ್ಲಿ ಕಲಿತ ವಿದ್ಯಾರ್ಥಿಗಳು ಇಂದು ದೇಶದ ಅನೇಕ ಭಾಗಗಳಲ್ಲಿ ಕಲಾವಿದರಾಗಿ, ಚಿತ್ರಕಲಾ ಶಿಕ್ಷಕರಾಗಿ, ಉಪನ್ಯಾಸಕರಾಗಿ, ಛಾಯಾಚಿತ್ರಗಾರರಾಗಿ ಬೇರೆ ಬೇರೆ ಇಲಾಖೆಗಳಲ್ಲಿ ಕಲಾವಿದರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ.

ಎಂ.ಆರ್.ಬಾಳೀಕಾಯಿ, ಡಾ.ಎಸ್.ಸಿ.ಪಾಟೀಲ, ಬಾಗೂರು ಮಾರ್ಕಂಡೇಯ, ಲತಾರಾಣಿ ಮಲ್ಹಾರ, ಎಫ್.ವಿ.ಚಿಕ್ಕಮಠ, ರೇಣುಕಾ ಮಾರ್ಕಂಡೇಯ, ಯು.ಎಸ್.ಹಿರೆಮಠ, ಪ್ರಶಾಂತನಾಯಕ ಡಾ.ಶಿವಾನಂದ ಬಂಟನೂರ ಇನ್ನೂ ಅನೇಕ ಜನ ಈ ಕಲಾಕೇಂದ್ರದಿಂದ ಅಧ್ಯಯನ ಮಾಡಿ ಕಲಾಕೇಂದ್ರಕ್ಕೆ ಹೆಸರನ್ನು ತಂದಿದ್ದಾರೆ.

**೫. ಸೃಜನ ಕಲಾನಿಕೇತನ ಮಹಾವಿದ್ಯಾಲಯ, ಧಾರವಾಡ**

೧೯೯೧ರಲ್ಲಿ ಸೃಜನ ಕಲಾನಿಕೇತನ ಮಹಾವಿದ್ಯಾಲಯವನ್ನು ಆರ್.ಧರಣೇಶ, ಎಫ್.ವಿ.ಚಿಕ್ಕಮಠ, ಶಿವಾನಂದ ಬಂಟನೂರು ಇವರು ಪ್ರಾರಂಭಿಸಿದರು. ಸಮಗ್ರ ಲಲಿತ ಕಲೆಗಳಾದ ಸಾಹಿತ್ಯ, ಶಿಲ್ಪಕಲೆ, ಸಂಗೀತ, ಚಿತ್ರಕಲೆ, ಇವುಗಳನ್ನು ಒಂದೇ ಸೂರಿನಡಿ ಕಲಿಸುವ ಉದ್ದೇಶವನ್ನಿಟ್ಟುಕೊಂಡು ಈ ಕಲಾಶಾಲೆಯನ್ನು ಆರಂಭಿಸಿದರು. ಆದರೆ ಈ ಮೂವರು ಚಿತ್ರಕಲಾ

ಪದವಿಧರರಾಗಿದ್ದ ಕಾರಣ ಕೇವಲ ಚಿತ್ರಕಲೆಯನ್ನು ಕಲಿಸುವ ನಿರ್ಧಾರ ಕೈಗೊಂಡರು. ಮುಂಬೈ ಕರ್ನಾಟಕ ವ್ಯಾಪ್ತಿಗೆ ಒಳಪಡುವ ಈ ಭಾಗದಲ್ಲಿ ಚಿತ್ರಕಲೆಯಲ್ಲಿ ಕೇವಲ ಡಿಪ್ಲೊಮಾ, ಆರ್ಟ್‌ಮಾಸ್ಟರ್ ಕೋರ್ಸ್‌ಗಳು ಮಾತ್ರ ಇದ್ದವು. ಈ ಅಂಶಗಳನ್ನು ಗಮನಿಸಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದ ಬಿ.ಎಫ್.ಎ ಪದವಿಯನ್ನು ಆರಂಭ ಮಾಡಿದರು. ಧಾರವಾಡ ಜಿಲ್ಲೆಯ ಮೊದಲ ಪದವಿ ಕಲಾಶಾಲೆ ಇದಾಗಿದೆ. ಡಾ.ಸಿದ್ಧನಗೌಡ ಪಾಟೀಲ (CPI) ಕಾರ್ಯಕರ್ತರು ಡಾ.ಎಂ.ಎಂ.ಕಲಬುರ್ಗಿ, ಡಾ.ಎ.ಮುರಿಗೆಪ್ಪ, ಡಾ.ಶಿವಾನಂದ ಶೆಟ್ಟರ, ಡಾ.ಸಂಪಿಗೆ ತೋಂಟದಾರ್ಯ, ದಿವಂಗತ ವಾಯ್.ಎಮ್. ಮಾದರ, ಪ್ರೊ.ಕಲ್ಲಕೋಳಿಕರ ಇವರ ಪ್ರೋತ್ಸಾಹ ಮತ್ತು ಮಾರ್ಗದರ್ಶನದಲ್ಲಿ ಈ ಕಲಾಶಾಲೆಯು ತನ್ನ ಕಾರ್ಯವನ್ನು ವಿಸ್ತರಿಸತೊಡಗಿತು.

ನಮ್ಮ ಕಲೆಗಳನ್ನು ಅಭಿವೃದ್ಧಿಪಡಿಸುವುದು ಒಂದೆಡೆಯಾದರೆ ಶೈಕ್ಷಣಿಕ ಕ್ರಮದಲ್ಲಿ ಪದವಿ ಮತ್ತು ಸ್ನಾತಕೋತ್ತರ ಪದವಿಗಳನ್ನು ಕಲಿಸುವ ಮುಖ್ಯ ಉದ್ದೇಶವು ಈ ಕಲಾ ಮಹಾವಿದ್ಯಾಲಯಕಿತ್ತು. ಶ್ರೀನಗರದ ಖಾಸಗಿ ಕಟ್ಟಡದಲ್ಲಿ ತರಗತಿಗಳು ಮೊದಲು ನಡೆಯುತ್ತಿದ್ದವು. ಪ್ರಸ್ತುತ ಮಹಿಳಾ ಮಂಡಳದಲ್ಲಿ ಈ ಕಲಾ ಮಹಾವಿದ್ಯಾಲಯವಿದೆ.

ಧಾರವಾಡ ಜಿಲ್ಲೆಯ ಕಲಾಶಾಲೆಗಳಲ್ಲಿ ಕಲಿಯುವ ವಿದ್ಯಾರ್ಥಿಗಳಿಗೆ ಬಸ್‌ಪಾಸನ್ನು ಸೌಲಭ್ಯವಿರಲಿಲ್ಲ ಕಾರಣ ಚಿತ್ರಕಲೆ ಕಲೆಯುವುದು ಒಂದು ಹವ್ಯಾಸಿ ತರಗತಿ ಅದು ಶೈಕ್ಷಣಿಕವಾದ ಶಿಕ್ಷಣವಲ್ಲ ಎಂದು ಬಸ್‌ಪಾಸ್‌ಅನ್ನು ಕೊಡಲು ನಿರಾಕರಿಸುತ್ತಿದ್ದುದ್ದನ್ನು ಗಮನಿಸಿ ಈ ಕಲಾಶಾಲೆಯ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರು ಎರಡು ಸಲ ಮುಷ್ಕರ ಮತ್ತು ಮನವಿ ಮಾಡಿಕೊಂಡದ್ದು ಮಂತ್ರಿಗಳ ಗಮನಕ್ಕೆ ಬಂದು ಚಿತ್ರಕಲಾ ವಿದ್ಯಾರ್ಥಿಗಳಿಗೂ ಬಸ್‌ಪಾಸ್ ದೊರೆಯುವಂತಾಯಿತು.[೧೪]

"ಪ್ರಾಚಾರ್ಯರಾಗಿ ಶ್ರೀ.ಎಫ್.ವಿ.ಚಿಕ್ಕಮಠ ಅವರು ಕಾರ್ಯನಿರ್ವಹಿಸುತ್ತಿದ್ದಾರೆ. ಶ್ರೀ.ಡಾ.ಮಧುಮತಿ ಇವರು ಉಪನ್ಯಾಸಕರಾಗಿ, ಮಾರ್ಗದರ್ಶನ ಮಾಡುತ್ತಿದ್ದಾರೆ, ೬೦ ಜನ ವಿದ್ಯಾರ್ಥಿಗಳು ಶೈಕ್ಷಣಿಕ ವರ್ಷದಲ್ಲಿ ಉತ್ತೀರ್ಣರಾಗಿದ್ದಾರೆ. ವಾರ್ಷಿಕ ಕಲಾ ಪ್ರದರ್ಶನವನ್ನು ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಏರ್ಪಡಿಸುತ್ತಾರೆ.

### ಮಹಾವಿದ್ಯಾಲಯದ ಪ್ರಸ್ತುತ ಕಲಾಚಟುವಟಿಕೆಗಳು

ಪ್ರತಿ ವರ್ಷವೂ ಅನೇಕ ಶೈಕ್ಷಣಿಕ ಕಾರ್ಯಕ್ರಮದ ಜೊತೆಗೆ, ವಿದ್ಯಾರ್ಥಿಗಳಿಗೆ ಮನೋರಂಜನೆ, ಸಾಮಾಜಿಕ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತದೆ. ಈ ಕಲಾಶಾಲೆಯು ಮಹಿಳಾ ಮಂಡಲದ ಆವರಣದಲ್ಲಿರುವುದರಿಂದ ಅಲ್ಲಿ ನಡೆಯುವ ಕಾರ್ಯಕ್ರಮದಲ್ಲಿ ಕಲಾಪ್ರದರ್ಶನ ಮಾಡುವ ಅವಕಾಶವನ್ನು ವಿದ್ಯಾರ್ಥಿಗಳಿಗೆ ಮಾಡಿಕೊಡುತ್ತಾರೆ

೧೪. ಸಂದರ್ಶನ, ಡಾ. ಶಿವಾನಂದ ಬಂಟನೂರ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ದಿ. ೨೨ ಜೂನ್, ೨೦೧೩

ವಾರ್ಷಿಕ ಕಲಾಪ್ರದರ್ಶನ ವಿದ್ಯಾರ್ಥಿಗಳನ್ನು ವಿವಿಧ ಕಲಾಶಿಬಿರಗಳಿಗೆ ಕಳುಹಿಸುವ ವ್ಯವಸ್ಥೆಯನ್ನು ಮಾಡಿಕೊಡಲಾಗುತ್ತದೆ. ಹೀಗೆ ವರ್ಷವಿಡೀ ವಿದ್ಯಾರ್ಥಿಗಳಿಗೆ ಹೊಸ ಹೊಸ ಕಾರ್ಯಕ್ರಮದ ಜೊತೆಗೆ ಉತ್ತಮ ರೀತಿಯಲ್ಲಿ ಬೋಧನೆಯನ್ನು ಮಾಡಿ ಅವರ ಭವಿಷ್ಯ ರೂಪಿಸುವಲ್ಲಿ ನಿರತರಾಗಿದ್ದಾರೆ.

**೬. ಗಂಗಾಂಬಿಕೆ ಚಿತ್ರಕಲಾ ಶಾಲೆ, ಧಾರವಾಡ**

೧೯೯೦ರಲ್ಲಿ ಧಾರವಾಡದ ಸೆಂಟ್ ಜೋಸೆಫ್ ಹೈಸ್ಕೂಲಿನಲ್ಲಿ ಕಲಾ ಶಿಕ್ಷಕರಾಗಿ ಸೇವೆಸಲ್ಲಿಸಿದ ಶ್ರೀ.ಎಸ್.ಬಿ.ಜರಳಿಯವರು ನಿವೃತ್ತಿಯ ನಂತರ ಗಂಗಾಂಬಿಕಾ ಚಿತ್ರ ಕಲಾಶಾಲೆಯನ್ನು ಪ್ರಾರಂಭಿಸಿದರು. ಶ್ರೀ.ಎಚ್.ಕೃಷ್ಣಮೂರ್ತಿ, ಶ್ರೀ.ಮಾಚಾಳ, ಶ್ರೀ.ರವಿಗೋಡಕೆಯವರು ಉಪನ್ಯಾಸಕರಾಗಿ ಕಾರ್ಯನಿರ್ವಹಿಸುತ್ತಿದ್ದರು. ಕಾರಾಣಾಂತರದಿಂದ ಈಗ ಈ ಕಲಾಶಾಲೆಯನ್ನು ಮುಚ್ಚಲಾಗಿದೆ. "ಕಲೆಯು ಮಾನವನ ಹುಟ್ಟಿನೊಂದಿಗೆ ದೈವದತ್ತವಾಗಿ ಬಂದ ಒಂದು ಚಮತ್ಕಾರವೇ ಸರಿ ಸಾವಿರಾರು ವರುಷಗಳಿಂದ ಮಾನವ ಜನಾಂಗಗಳ ಬೆಳವಣಿಗೆಯೊಂದಿಗೆ ಜೊತೆ ಜೊತೆಯಾಗಿ ಅವನ ಬದುಕಿನ ಪ್ರಮುಖ ಅಂಗವಾಗಿ ಕಲಾ ಸಂಸ್ಕೃತಿಯ ಬೆಳವಣಿಗೆಯಾಗುತ್ತಲೇ ಬಂದಿದೆ.

ಕಾಲದಿಂದ ಕಾಲಕ್ಕೆ ಬದುಕಿನ ರೀತಿ ಬದಲಾದಂತೆ ಕಲೆಯೂ ಬದಲಾವಣೆಯಾಗುತ್ತಲೇ ಬಂದಿದೆ ಎಂಬುದು ಸರ್ವವಿದಿತ. ಒಂದು ಕಾಲದ ಸಂಸ್ಕೃತಿಯಿಂದ ಇನ್ನೊಂದು ಕಾಲದ ಸಂಸ್ಕೃತಿಗೆ ಸಂಬಂಧವನ್ನು ಜೋಡಿಸುವ ಸಂಪರ್ಕ ಸಾಧನೆಯಾಗಿರುವ ಭಾಷೆಯಂತೆ ಕಲೆಯೂ ಸಂರ್ಪಕ ಮಾಧ್ಯಮವಾಗಿದೆ. ಸಂಪರ್ಕ ಸೇತುವೆಯಾಗಿದೆ. ಕಲೆಯು ಒಂದು ಸಾಮಾಜಿಕ, ಧಾರ್ಮಿಕ ಅಗತ್ಯವೂ ಆಗಿದೆ ಎಂಬುದಕ್ಕೆ ದೇವಾಲಯಗಳ, ಚರ್ಚುಗಳ ನಿರ್ಮಾಣ ಹಾಗೂ ಅವುಗಳಲ್ಲಿ ಚಿತ್ರಿಸಲ್ಪಟ್ಟ ಚಿತ್ರಗಳು ಸಾಮಾಜಿಕ ಅಗತ್ಯವಾದ ಧರ್ಮದೊಂದಿಗೆ ಸಮನ್ವಯಗೊಂಡುದ್ದನ್ನು ಕಾಣುತ್ತೇವೆ. ಇಲ್ಲದಿದ್ದಲ್ಲಿ ಗುಹಾಂತರ ದೇವಾಲಯಗಳಾಗಲಿ, ಪಿರಮಿಡ್ಡುಗಳಾಗಲಿ, ಚರ್ಚುಗಳಾಗಲಿ, ಕಲಾಪೂರ್ಣವಾದ ದೇವ ಮಂದಿರಗಳಾಗಲೀ ಹೇಗೆ ಬೆಳೆಯುತ್ತಿದ್ದವು."[೧೫]

"ಕಲೆಯ ಪರಿಮಿತಿ ಕಲಾವಿದನ ಅಭಿವ್ಯಕ್ತಿ ಕೌಶಲ್ಯ ಸಾಮರ್ಥ್ಯಕ್ಕನುಗುಣವಾಗಿರುತ್ತದೆ. ಕಲಾವಿದನು ತಾನು ಆರಿಸಿಕೊಂಡಿರುವ ವಸ್ತುವನ್ನು ಕುರಿತು ತನ್ನ ವಿಚಾರ ಹಾಗೂ ಭಾವನೆಗಳನ್ನು ಅಭಿವ್ಯಕ್ತಿಸುವ ಚಮತ್ಕಾರವೇ ಕಲೆ ಈ ಚಮತ್ಕೃತಿಯು ಚಿತ್ರರೇಖನ ವರ್ಣಚಿತ್ರ ನಿರ್ಮಾಣ, ಮೂರ್ತಿಶಿಲ್ಪ, ಸಂಗೀತ ಸಾಹಿತ್ಯ ಹಾಗೂ ವಾಸ್ತುಶಿಲ್ಪ ರಚನೆಯಲ್ಲಿ ರೂಪಿತವಾಗುವಂತೆ ದೈಹಿಕ ಪರಿಶ್ರಮದ ಕೃತಿಯಲ್ಲಿ ರೂಪಿತವಾಗಲಾರದು. ಚಿತ್ರ, ಶಿಲ್ಪ, ವಾಸ್ತುಶಿಲ್ಪ, ಸಾಹಿತ್ಯ, ಸಂಗೀತ

---

೧೫. ವಿ.ಟಿ.ಕಾಳೆ : ಚಿತ್ರಕಲಾ ದರ್ಪಣ, ಪುಟ-೩

ಕೃತಿಗಳಲ್ಲಿ ಮನುಷ್ಯನ ಭಾವನೆ ಹಾಗೂ ವಿಚಾರಗಳು ಅಭಿವ್ಯಕ್ತಿ, ಮಾಧ್ಯಮಗಳಾಗಿರುತ್ತವೆ. ರಸಾನುಭೂತಿಯ ಚಿಲುಮೆಗಳಾಗಿ ಚಿಮ್ಮುತ್ತವೆ. ಆದ್ದರಿಂದ ಅವುಗಳನ್ನು ಮಾತ್ರ ಲಲಿತಕಲೆಗಳು ಎಂದು ಕರೆಯಲಾಗುತ್ತದೆ. ಸುತ್ತಲಿನ ಪರಿಸರದ ವಿಷಯದಲ್ಲಿ ಪ್ರತಿಯೊಬ್ಬ ವ್ಯಕ್ತಿಗೂ ತನ್ನದೇ ಆದ ಒಂದು ಆಂತರಿಕ ನೋಟವಿರುತ್ತದೆ. ತಾನು ನೋಡುವ ವಸ್ತುವನ್ನು ಕುರಿತು ತನ್ನದೇ ಆದ ಪರಿಕಲ್ಪನೆಯಿಂದ ತನ್ನ ಭಾವನೆಗಳನ್ನು ವ್ಯಕ್ತಪಡಿಸುತ್ತಾನೆ. ಯಾವುದೇ ಒಂದು ಕಲಾಕೃತಿಯು ಕಲಾವಿದನ ಕೇವಲ ಅನುಭವದಿಂದಾಗಲೀ ಬುದ್ಧಿಶಕ್ತಿಯಿಂದಾಗಲೀ ಸ್ಫೂರ್ತಿಗೊಂಡಿರದೇ ಸೀಮಿತ ವೇಳೆಯಲ್ಲಿ ನಿರ್ದಿಷ್ಟವಾದ ಭಾವನೆಗಳ ಒತ್ತಡದಿಂದ ಸ್ಫೂರ್ತಿಗೊಂಡಿರುತ್ತದೆ."[೧೬]

ಪ್ರತಿಯೊಬ್ಬ ಕಲಾವಿದ ಒಂದು ಹೊಸ ಮಾಧ್ಯಮದ ಮೂಲಕ ಒಂದು ಹೊಸ ರೀತಿಯ ಕಲಾ ಪ್ರಕಾರವನ್ನು ಸೃಷ್ಟಿಸುತ್ತಾನೆ. ಅದು ಕಲಾಪರಂಪರೆಗೆ ಸೃಜನಾತ್ಮಕ ಕೊಡುಗೆಯಾಗುತ್ತದೆ. "ಶ್ರೇಷವಿವಾದ ಕಲೆ ಎಂದು ಹಳೆಯದಾಗುವುದಿಲ್ಲ. ಕಲಾವಿದನಲ್ಲಿ ವೈಚಾರಿಕ ದೃಷ್ಟಿ ಎಷ್ಟು ಬೆಳೆಯುತ್ತದೋ ಅಷ್ಟು ಗಾಢವಾದ ಚಿತ್ರ ರಚಿಸುತ್ತಾನೆ. ಅದು ನಿತ್ಯ ನೂತನವಾಗಿರುತ್ತದೆ ಎಂದು ಕಲಾವಿದ ಬಸವರಾಜ ಹಳಿಜೋಳರು ಆಧುನಿಕ ಕಲೆಯ ಬಗ್ಗೆ ಹೇಳಿದ್ದಾರೆ."[೧೭] ಕಲೆ ಮತ್ತು ಕಲಾವಿದರು ಧಾರವಾಡದ ಆಸ್ತಿ ಎನ್ನಬಹುದು. ಇಲ್ಲಿಯಕಲಾವಿದರು ರಾಷ್ಟ್ರ ಮತ್ತು ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಬೆಳೆದು ಸಾಧನೆ ಮಾಡಿದ್ದಾರೆ. ಹಿರಿಯ ಕಲಾವಿದರು ತಾವು ಕಲಿತ ವಿದ್ಯೆಯನ್ನು ನಿರಂತರವಾಗಿ ನದಿಯಂತೆ ಹರಿಯುತ್ತಿರಲಿ ಎಂದು ಕಲಾ ಶಾಲೆಗಳ ಸ್ಥಾಪನೆ ಮಾಡಿ ಅಜರಾಮರಾಗಿದ್ದಾರೆ. ಇವರು ತೋರಿದ ದಾರಿಯಲ್ಲಿ ಇಂದು ಅನೇಕ ಕಲಾವಿದರು ಕಲಾಸಾಧನೆಯನ್ನು ಮಾಡಿ ಕಲಾಕ್ಷೇತ್ರಕ್ಕೆ ತಮ್ಮದೇಯಾದ ಕೊಡುಗೆಗಳನ್ನು ನೀಡಿದ್ದಾರೆ. ಈ ಹಿನ್ನೆಲೆಯಲ್ಲಿ ಅಧ್ಯಯನದ ವ್ಯಾಪ್ತಿಯನ್ನು ಮಿತಿಗೊಳಿಸಿಕೊಂಡು ಈ ಜಿಲ್ಲೆಯಲ್ಲಿನ ೫೫ ವರ್ಷಗಳ ಮೇಲ್ಪಟ್ಟ ಕಲಾವಿದರುಗಳ ಕುರಿತು ಅಧ್ಯಯನ ಮಾಡಲಾಗಿದೆ.

### ೧. ಡಾ. ಎಂ. ವಿ. ಮಿಣಜಗಿ

ಎಂ.ವ್ಹಿ.ಮಿಣಜಗಿಯವರು ೧೯೦೧ ಜನೇವರಿ ೩೦ರಂದು ಬಿಜಾಪುರದಲ್ಲಿ ಜನಿಸಿದರು. ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವನ್ನು ಬಿಜಾಪುರದಲ್ಲಿ ಮುಗಿಸಿದರು. ೧೯೨೧ ಜೂನ್‌ನದಲ್ಲಿ ಮುಂಬೈನ ಜೆ.ಜೆ.ಕಲಾಶಾಲೆಯಲ್ಲಿ ಪ್ರವೇಶ ಪಡೆದರು. ಇಲ್ಲಿ ವರ್ಣಚಿತ್ರಕಲೆಯಲ್ಲಿ ಡಿಪ್ಲೊಮಾ ಅಧ್ಯಯನ ಮಾಡಿದರು. ೧೯೨೬ರಲ್ಲಿ ಆರ್ಟ್‌ಮಾಸ್ಟರ್ ಪದವಿಯನ್ನು ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾದರು. ಜೊತೆಗೆ ಶಿಷ್ಯವೇತನ ಪಡೆದು ಭಿತ್ತಿ ಚಿತ್ರ ರಚನೆಯ ಒಂದು ವರ್ಷದ

೧೬. ಎ.ಟಿ.ಕಾಳೆ : ಚಿತ್ರಕಲಾ ದರ್ಪಣ, ಪುಟ-೩

೧೭. ಆರ್.ಜಿ.ರಾಯಕರ : ಬಸವರಾಜ ಹಳಿಜೋಳ, ಪುಟ-೭

ಅಧ್ಯಯನ ಸಹ ಪೂರೈಸಿದರು. ಮುಂದೆ ೧೯೩೦ರಲ್ಲಿ ಇಂಗ್ಲೆಂಡ್‌ಗೆ ತೆರಳಿ ರಾಯಲ್ ಕಾಲೇಜ್ ಆಫ್ ಆರ್ಟ್‌ದಲ್ಲಿ ತಮ್ಮ ಕಲಾ ಅಭ್ಯಾಸವನ್ನು ಆರಂಭಿಸಿದರು. ಲಂಡನ್‌ರಾಯಲ್ ಕಲಾ ಶಾಲೆಯಲ್ಲಿ ವರ್ಣ ಚಿತ್ರಕಲೆ ಬಗ್ಗೆ ಅಧ್ಯಯನ ಮಾಡಿದರೆ ಲಂಡನ್ ಕೌಂಟಿ ಕೌನ್ಸಿಲ್ ಸ್ಕೂಲ್‌ದಲ್ಲಿ ಪೋಟೊ ಎನ್ ಗೇವಿಂಗ್ ಮತ್ತು ಲಿಥೋಪ್ರಾಫಿಕ ಶಾಸ್ತ್ರಗಳ ಅಧ್ಯಯನಮಾಡಿದರು. ಲಂಡನ್‌ದಲ್ಲಿ ಯಶಸ್ವಿ ಕಲಾ ಶಿಕ್ಷಣ ಪೂರೈಸಿ ೧೯೩೯ರಲ್ಲಿ ಭಾರತಕ್ಕೆಮರಳಿದರು.

ಮುಂಬೈಯಲ್ಲಿ ಕೆಲ ಕಾಲ ಇದ್ದು, ಅನೇಕರ ಭಾವ ಚಿತ್ರಗಳನ್ನು ರಚನೆ ಮಾಡಿದರು. ಪೌರಾಣಿಕ, ಐತಿಹಾಸಿಕ, ಧಾರ್ಮಿಕ ವಿಷಯಗಳ ಮೇಲೆ ತಮ್ಮದೇ ವಿಶಿಷ್ಟ ಶೈಲಿಯಲ್ಲಿ ಚಿತ್ರರಚನೆ ಮಾಡಿ ಹೊಸ ಕಲಾಪರಂಪರೆಯನ್ನು ಸೃಷ್ಟಿ ಮಾಡಿದರು. ೧೯೫೦ರಲ್ಲಿ ಮುಂಬೈಯಿಂದ ಹುಬ್ಬಳ್ಳಿಗೆ ಒಂದು ಕರ್ನಾಟಕ ಫೈನ್ ಆರ್ಟ್ ಸೊಸೈಟಿ ಎಂಬ ನೊಂದಾಯಿತ ಸಂಸ್ಥೆಯ ಆಶ್ರಯದಲ್ಲಿ ಕಲಾ ಶಾಲೆಯೊಂದನ್ನು ಪ್ರಾರಂಭಿಸಿದರು. ಕಲಾಮಂದಿರ ಸ್ಥಾಪನೆಯೊಂದಿಗೆ ಕಲಾವಿದರಾಗಿ, ಕಲಾಶಿಕ್ಷಕರಾಗಿ ಕಲಾ ಶಾಲೆಯ ಸಂಸ್ಥಾಪಕರಾಗಿ ಕಾರ್ಯ ನಿರ್ವಹಿಸತೊಡಗಿದರು. ಇದಲ್ಲದೇ ಬೆಂಗಳೂರಿನಲ್ಲಿ ಆರ್ಟ್ ಮಾಸ್ಟರ್ ಶಿಕ್ಷಕರ ತರಬೇತಿಯ ಕಲಾಶಾಲೆಯನ್ನು ಸಂಸ್ಥಾಪಿಸಿದರು. ಇದರ ಜೊತೆಗೆ ಅನೇಕ ಏಕವ್ಯಕ್ತಿ ಕಲಾ ಪ್ರದರ್ಶನಗಳನ್ನು ಸಹ ಮಾಡಿದರು.

೧೯೩೩ರಲ್ಲಿ ಮುಂಬೈಯ ಡಾ.ಆರ್.ರಾವ್ ಅವರ ನಿವಾಸದಲ್ಲಿ, ೧೯೫೨ ೫೩ರಲ್ಲಿ ಹುಬ್ಬಳ್ಳಿ, ಬೆಂಗಳೂರುಗಳಲ್ಲಿ ಯಶಸ್ವಿಯಾಗಿ ಪ್ರದರ್ಶನ ಮಾಡಿದರು. ೧೯೫೪ರಲ್ಲಿ ನಡೆದ ಕಲಾಪ್ರದರ್ಶನವನ್ನು ಅಂದಿನ ಉಪರಾಷ್ಟ್ರಪತಿ ಸರ್ವಪಲ್ಲಿ ರಾಧಾಕೃಷ್ಣನ್ ಅವರು ಉದ್ಘಾಟನೆ ಮಾಡಿದರು. ೧೯೫೯ರಲ್ಲಿ ಹುಬ್ಬಳ್ಳಿ ಹಾಗೂ ಬೆಂಗಳೂರಿನಲ್ಲಿ ಏಕವ್ಯಕ್ತಿ ಕಲಾ ಪ್ರದರ್ಶನದ ಉದ್ಘಾಟನೆಯನ್ನು ರಾಷ್ಟ್ರಪತಿ ಬಾಬು ರಾಜೇಂದ್ರ ಪ್ರಸದ ಅವರು ನೇರವೇರಿಸಿದರು. ಚಿತ್ರಕಲಾ ಕ್ಷೇತ್ರಕ್ಕೆ ಇವರು ನೀಡಿದ ಕೊಡುಗುಯೆಂದರೆ ರಜಪೂತ ಶೈಲಿಯ ಸಂಯೋಜನಾತ್ಮಕ ರಾಗಮಾಲ ಚಿತ್ರಗಳು, ಭಾವಚಿತ್ರಗಳು, ನಿಸರ್ಗಚಿತ್ರಗಳು, ಚಾಲುಕ್ಯ ಅರಸರ ಭಿತ್ತಿಚಿತ್ರಗಳು, ಶರಣ ಸಾಹಿತ್ಯದೃಶ್ಯಗಳು, ಪೌರಾಣಿಕ, ಐತಿಹಾಸಿಕ, ಧಾರ್ಮಿಕ ವಿಷಯಗಳ ಚಿತ್ರಣಗಳು, ರೇಖಾ ಚಿತ್ರಗಳು, ಪಹರಿ, ಚಿತ್ರಗಳು ಹೀಗೆ ಹಲವಾರು ರೀತಿಯ ಕಲಾಕೃತಿಗಳನ್ನು ಅಧ್ಯಯನ ಮಾಡಿದ್ದಾರೆ.

ಜಲವರ್ಣ, ತೈಲವರ್ಣ, ಪೆನ್ಸಿಲ್ ಮಾಧ್ಯಮದಲ್ಲಿ ರಚನೆ ಮಾಡಿದ್ದಾರೆ. ಇವರು ವಿಶೇಷವಾದ ಪಾರಂಪರಿಕ ನೈಜವಾದ ಚಿತ್ರಗಳನ್ನು ಚಿತ್ರಿಸುವಲ್ಲಿ ಸಿದ್ಧಹಸ್ತರಾಗಿದ್ದರು. ಮೃದು ಬಣ್ಣಗಳನ್ನು ಇವರು ತಮ್ಮ ಚಿತ್ರಗಳಲ್ಲಿ ಬಳಸುತ್ತಿದ್ದರಲ್ಲದೇ ನೆರಳು ಬೆಳಕನ್ನು ಅತ್ಯಂತ ಪ್ರಭಾವಶಾಲಿಯಾಗಿ ರಚಿಸುತ್ತಿದ್ದರು. ಚಿತ್ರರಚನೆ ಮಾಡುವ ಚಿತ್ರದಲ್ಲಿ ಅತ್ಯಂತ ಸಣ್ಣ ವಸ್ತುವಿಗೆಸಹ ಅಷ್ಟೆಪ್ರಾಮುಖ್ಯತೆಯನ್ನು ಕೊಟ್ಟಿದ್ದಾರೆ. ಇವರ ಚಿತ್ರದಲ್ಲಿ ಸೂಕ್ಷ್ಮತೆಯನ್ನು ಎಲ್ಲ ನವರಸಗಳಿಂದ

ಕೂಡಿದ ಅಂಶಗಳು ಇರುತಿದದ್ದು ವಿಶೇಷವಾಗಿದೆ.

ಬಣ್ಣಗಳ ಸಂಯೋಜನೆಯ ಬಗೆಗೆ ತಮ್ಮದೇ ಆದ ಅಭಿಪ್ರಾಯವನ್ನು ಹೊಂದಿದ್ದರು. ಹಲವು ಬಗೆಯ ಬಣ್ಣ, ಕಲ್ಲು, ಚಿನ್ನ, ಬೆಳ್ಳಿ ಅರದು ನುಣ್ಣಗೆ ಮಾಡಿ ಬಣ್ಣವನ್ನು ಸಿದ್ಧಪಡಿಸಿಕೊಳ್ಳುತ್ತಿದ್ದರು. ಹೊಳಪು ಬರುವುದಕ್ಕಾಗಿ ರಂಗೋಲಿ ಪುಡಿ, ಗಜ್ಜಗ, ಕವಡೆ ತಿಕ್ಕುತ್ತಿದ್ದರು ಅಭ್ರಕ ಪಾರಜವನ್ನು ಉಪಯೋಗಿಸುತ್ತಿದ್ದರು. ಚಿತ್ರಕಾರ ತಮ್ಮ ಚಿತ್ರಗಳನ್ನು ಗಮನಿಸಿ ಈ ಬಗೆಯಲ್ಲಿ ವರ್ಣಗಳನ್ನು ಅಣಿಗೊಳಿಸಿಕೊಳ್ಳಬೇಕಾಗುವುದೆಂಬುದು ಮಿಣಜಗಿಯವರ ಅಭಿಪ್ರಾಯವಾಗಿತ್ತು.

ದೆಹಲಿಯ ದರ್ಬಾರ ಹಾಲಿನಲ್ಲಿ ಇವರು ಬಿಡಿಸಿದ ಈ ಚಿತ್ರವನ್ನು ಅದ್ಭುತವಾಗಿ ರಚಿಸಿದ್ದಾರೆ. ಅದೇ ತಾನೇ ಲಂಡನದಿಂದ ವ್ಯಾಸಂಗವನ್ನು ಪೂರೈಸಿಕೊಂಡು ಬಂದಿದ್ದರು. ಇವರ ಖ್ಯಾತಿಯನ್ನು ಕೇಳಿದ ಭಾರತ ಸರ್ಕಾರವು ಇವರ ಕಲೆಯನ್ನು ಗುರುತಿಸಿ ದರ್ಬಾರ ಹಾಲಿನ ಭಿತ್ತಿಚಿತ್ರವನ್ನು ರಚಿಸಲಿಕ್ಕೆ ಆಹ್ವಾನ ನೀಡಿದರು. ಇನ್ನಿತರ ಪ್ರಖ್ಯಾತ್ಯ ಕಲಾವಿದರನ್ನು ಕರೆಯಿಸಿ ಇಲ್ಲಿ ಭಿತ್ತಿಚಿತ್ರಗಳನ್ನು ರಚಿಸಿ ಸಂಗ್ರಹಿಸಿದ ಖ್ಯಾತಿ ಬಾರತ ಸರ್ಕಾರಕ್ಕೆ ಇದೆ. ಮೂಲತಃ ಬಿಜಾಪುರದಲ್ಲಿ ಜನಿಸಿದ ಮಿಣಜಗಿ ಅವರು ಸವಿನೆನಪಿಗಾಗಿಯೇ ಬಿಜಾಪೂರದ ಸುಪ್ರಸಿದ್ಧ ಗೋಲಗುಮ್ಮಟ್ಟದ ಚಿತ್ರವನ್ನು ಅವರು ಇಲ್ಲಿ ನಿರ್ಮಿಸಿದ್ದಾರೆ. ಕಲಾಗುರು ರೊಥೆನ್‌ಸ್ಟೆನ್ ಹೇಳಿದಂತೆ ಪರಿಸರದಲ್ಲಿ ಸಿಗುವ ಹಾಗೂ ತಮ್ಮ ತನವನ್ನು ಗುರುತಿಸುವ ಕಲಾಕೃತಿ ರಚನೆ ಮಾಡಿದಾಗಲೇ ಈ ನೆಲದ ವಾಸನೆ ಕಂಡುಕೊಳ್ಳಬಹುದಾಗಿದೆ ಎಂಬಂತೆ ಡಾ.ಮಿಣಜಗಿಯವರು ದೂರದ ದೆಹಲಿಗೆ ಹೋಗಿ ಕನ್ನಡ ನಾಡಿನ ಪ್ರಸಿದ್ಧ ಚಿತ್ರವನ್ನು ಚಿತ್ರಿಸಿ ಬಂದರು. ಈ ಚಿತ್ರದಲ್ಲಿ ಮೂವರು ಮಹಿಳೆಯರು ಇದ್ದರೆ ಮುಂಭಾಗದಲ್ಲಿ ಹಾಗೂ ಹಿಂಭಾಗದಲ್ಲಿ ತಮ್ಮ ಸೌಂದರ್ಯವನ್ನು ಮಾಡಿಕೊಳ್ಳುತ್ತಿದ್ದಾರೆ. ಮಧ್ಯಭಾಗದಲ್ಲಿ ಆದಿಲ್‌ಶಾನ ಹೆಂಡತಿಯು ತನ್ನ ಕನಸಿನ ಗೋಲಗುಮ್ಮಟವನ್ನು ಹಿಡಿದುಕೊಂಡು ಕುಳಿತಿರುವ ದೃಶ್ಯದಾಗಿದೆ. ರಾಣಿಯ ಧರಿಸಿದ ವಸ್ತ್ರವು ನಯನ ಮನೋಹರವಾಗಿದೆ. ಇಲ್ಲಿಯ ಅಂಗವಸ್ತ್ರಗಳು ಅತ್ಯಂತ ನೈಜವಾಗಿ ಮೂಡಿಬಂದಿವೆ.

ಕಲಾವಿದರಾಗಿ, ಕಲಾಶಿಕ್ಷಕರಾಗಿ, ಕಲಾಶಾಲೆಯ ಸಂಸ್ಥಾಪಕರಾಗಿ ಪ್ರಾಚಾರ್ಯ, ಕಾರ್ಯದರ್ಶಿ ಹೀಗೆ ಅನೇಕ ಹುದ್ದೆಗಳನ್ನು ಅಲಂಕರಿಸಿದರು. ಕಲಾವಿದನಿಗೆ ಆಂತರಿಕ ಜ್ಞಾನ, ಪರಿಸರದ ಪ್ರಜ್ಞೆ ಅವಶ್ಯ ಅದನ್ನು ಬೆಳೆಸಿಕೊಳ್ಳಬೇಕು ಕಲೆಯ ಮಾತು ಬಂದಾಗ ಕಲೆ ನಮ್ಮ ನಾಡಿ ದೇಶದ ಸಂಸ್ಕೃತಿಯನ್ನು ಪ್ರತಿಬಿಂಬಿಸುವುದರ ಜೊತೆಗೆ ಪ್ರೇಕ್ಷಕರಿಗೆ ದಾರಿದೀಪವಾಗಿ ಅವನಿಗೆ ಆನಂದ ನೀಡಿ ಮೊದಲಿಗಿಂತ ಉತ್ತಮ ಬದುಕು ಕಲ್ಪಿಸಿದರೆ ಆಗ ಆ ಕಲೆ ಸಾರ್ಥಕವಾಗುತ್ತದೆ ಎಂದು ಹೇಳುತ್ತಿದ್ದರು.

ಕರ್ನಾಟಕದಲ್ಲಿ ಕಲಾ ಶಿಕ್ಷಣ ಬೆಳೆದು ಸಾಮಾನ್ಯ ಜನರಿಗೆ ನಿಲುಕುವಂತಾಗಬೇಕೆಂದು ಬಹಳ ಶ್ರಮಿಸಿದವರು. ಚಿತ್ರಕಲೆಯ ಬೆಳವಣಿಗೆಗೆ ತಮ್ಮ ಜೀವನ ಮುಡಿಪಾಗಿಟ್ಟು ಕ್ರಿಯಾಶೀಲ ವ್ಯಕ್ತಿಯಾಗಿದ್ದರು. ತಮ್ಮ ಐದು ದಶಕದ ಬದುಕಿನಲ್ಲಿ ಚಿತ್ರ ಕಲಾಕ್ಷೇತ್ರಕ್ಕೆ ತಮ್ಮ ಅನೇಕ ಕಲಾಕೃತಿಗಳ ಮೂಲಕ ನೀಡಿದ ಕೊಡುಗೆ ಅಪಾರ. ಶ್ರೀ. ಎಂ.ವಿ.ಮಿಣಜಯವರು ಸಂಗೀತಾಭ್ಯಾಸವನ್ನು ಮಾಡುತ್ತಿದ್ದುದರಿಂದ ವಿವಿಧ ರಾಗಗಳಿಗೆ ಇರುವ ಭಾವಗಳನ್ನು ಅರಿತು, ಅವುಗಳಿಗೆ ಚಿತ್ರಸಂಯೋಜನೆ ಬಣ್ಣ ಸಂಯೋಜನೆಗಳನ್ನು ಮಾಡಿ ರಾಗಗಳಿಗೆ ದೃಶ್ಯ ರೂಪ ಕೊಟ್ಟಿರುವುದನ್ನು ಗುರುತಿಸಿ ೧೯೭೬ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯವು ಅವರಿಗೆ ಗೌರವ ಡಾಕ್ಟರೇಟ್ ಕೊಟ್ಟು ಗೌರವಿಸಿತು.

**೨. ಶ್ರೀ. ಡಿ. ಜಿ. ಬಡಿಗೇರ**

೧೯೦೨ರಲ್ಲಿ ಕಲಘಟಗಿ ತಾಲೂಕಿನ ಮಿಶ್ರಿಕೋಟಿಯಲ್ಲಿ ಜನಿಸಿದರು. ಇವರ ತಂದೆಯವರು ರಚಿಸುತ್ತಿದ್ದ ಶ್ರೀಗಂಧದ ಕೆತ್ತನೆಗಳು, ಹಿತ್ತಾಳೆ, ತಾಮ್ರದಲ್ಲಿ ರಚಿಸುವ ಕುಶಲ ಕಲೆಗಳು ಹೆಚ್ಚು ಪ್ರಭಾವ ಬೀರಿದವು. ೧೯೨೩ರಲ್ಲಿ ಮುಂಬೈಯ ಸರ್.ಜೆ.ಜೆ.ಸ್ಕೂಲ್ ಆಫ್ ಆರ್ಟ್‌ಗೆ ಕಲಾಶಿಕ್ಷಣವನ್ನು ಪಡೆದುಕೊಳ್ಳಲು ಹೋದರು. ೧೯೨೩ರಲ್ಲಿ ಡ್ರಾಯಿಂಗ್ ಮತ್ತು ಪೇಂಟಿಂಗ್ ಡಿಪ್ಲೊಮಾ ಪದವಿಯಲ್ಲಿ ಪಾಸಾಗಿ ಡಾರಿಕರ್ಸ್ ಸೇಠಿ ಸುವರ್ಣ ಪದಕವನ್ನು ಪಡೆದರು. ೧೯೨೮ರಲ್ಲಿ ಆ ಸಂಸ್ಥೆಯ ಫೆಲೋ ಆಗಿ ಆಯ್ಕೆಯಾದರು. ೧೯೩೧ರಲ್ಲಿ ಲಂಡನ್ ರಾಯಲ್ ಅಕಾಡೆಮಿ ಆಫ್ ಆರ್ಟ್‌ನಲ್ಲಿ ಪದವಿಯನ್ನು ಪಡೆದ ಮೊದಲ ಭಾರತೀಯ ಕಲಾವಿದರೆನ್ನಿಸಿಕೊಂಡರು. ೧೯೩೦ರಲ್ಲಿ ಲಂಡನ್‌ದಲ್ಲಿ ಏಕವ್ಯಕ್ತಿ ಪ್ರದರ್ಶನವನ್ನು ಮಾಡಿ ಪ್ರಶಂಸೆಗೆ ಪಾತ್ರರಾದರು. ೧೯೩೧ರಲ್ಲಿ ಭಾರತಕ್ಕೆ ಮರಳುವ ಪೂರ್ವದಲ್ಲಿ ಇಟಲಿ, ಫ್ರಾನ್ಸ್ ದೇಶಗಳಿಗೂ ಭೇಟಿಕೊಟ್ಟು ಚಿತ್ರ ಪ್ರದರ್ಶನವನ್ನು ಮಾಡಿದರು. ತೈಲವರ್ಣದಲ್ಲಿ ಭಾವಚಿತ್ರಗಳನ್ನು ಕರ್ನಾಟಕದ ಐತಿಹಾಸಿಕ ಸ್ಥಳಗಳ ಭೂ ದೃಶ್ಯ ಚಿತ್ರಗಳು ಅಜಂತಾ ಎಲ್ಲೋರಾಗಳ ಭಿತ್ತಿಚಿತ್ರಗಳ ಪ್ರತಿಕೃತಿಗಳಲ್ಲದೇ ಭಾರತೀಯ ಸಂಸ್ಕೃತಿ ಮತ್ತು ಪರಂಪರೆಗಳಿಗೆ ಆಧಾರವಾಗಿ ವೀರಭದ್ರನ ಅವತಾರ, ಟೆಂಪ್ಟೇಶನ್ ಆಫ್ ಬುದ್ಧ, ನಳದಮಯಂತಿ, ತಿಲೋತ್ತಮೆ ಮುಂತಾದ ಆಧ್ಯಾತ್ಮಿಕ ಮತ್ತು ಪುರಾಣ ಆಧಾರಿತ ಸಂಯೋಜನೆಗಳನ್ನು ಮಾಡಿದ್ದಾರೆ.

ಪಾಶ್ಚಾತ್ಯ ದೇಶದಲ್ಲಿ ಕಲಾಭ್ಯಾಸ ಮಾಡಿ ಪೂರ್ವ ಮತ್ತು ಪಶ್ಚಿಮ ಕಲಾಸೌಂದರ್ಯ ಸಿದ್ಧಾಂತವನ್ನು ತಮ್ಮ ಕೃತಿಯಲ್ಲಿ ವ್ಯಕ್ತಪಡಿಸಿದರು. ಕಲಾ ಸಂಘಟನಾ ಚಟುವಟಿಕೆಯಲ್ಲಿ ತೊಡಗಿದರು. ಲಂಡನ್ನಿನಿಂದ ಭಾರತಕ್ಕೆ ಮರಳಿ ಬಂದ ಕೆಲವೇ ದಿನಗಳಲ್ಲಿ ಮುಂಬಯಿಯಲ್ಲಿ ನೂತನ ಕಲಾಮಂದಿರವನ್ನು ೧೦ನವರೆಂಬರ್ ೧೯೩೨ ಸ್ಥಾಪಿಸಿ ಉಚ್ಚಕಲಾ ತರಗತಿಗಳನ್ನು ಕಲಿಸಲು ಪ್ರಾರಂಭಿಸಿದರು. ಶ್ರೀ.ಜಿ.ಎಸ್. ದಂಡಾವತಿ ಮಠರನ್ನು ಇದರ ಕಾರ್ಯ ದರ್ಶಿಯಾಗಿಯೂ

ಕಲಾಶಿಕ್ಷಕರನ್ನಾಗಿಯು ಮಾಡಿದರು ಒಂದು ವರ್ಷದ ಅವಧಿಯಲ್ಲಿ ದಿಲ್ಲಿ, ಕಲ್ಕತ್ತಾ ಮತ್ತು ಬೆಳಗಾಂವಿಯಲ್ಲಿ ಕಲಾಪ್ರದರ್ಶನಗಳನ್ನು ಏರ್ಪಡಿಸುವುದರೊಂದಿಗೆ ಕಲಾ ಸಂಘಟನೆಯನ್ನು ಮಾಡಿದರು. ೧೯೩೩ರಲ್ಲಿ ಕಲಾಗುರು ಸಾಲೋಮನ್ನರ ಸಲಹೆಯಂತೆ ಮುಂಬೈ ಪ್ರಾಂತ್ಯಕ್ಕೆ ಸಿಂಧಪ್ರಾಂತವೂ ಇದರಲ್ಲಿ ಸೇರಿತ್ತು ಡ್ರಾಯಿಂಗ್ ಮತ್ತು ಕ್ರಾಫ್ಟದ ಇನ್‌ಸ್ಪೆಕ್ಟರ್ ಹುದ್ದೆಗೆ ನೇಮಕಗೊಂಡರು. ಕಲಾರಂಗಕ್ಕೆ ಇಂಥ ಉನ್ನತ ಹುದ್ದೆಗೆ ಇವರೆ ಮೊದಲಿಗರು. ೧೯೩೩ರಲ್ಲಿ ಅಧಿಕಾರವನ್ನು ವಹಿಸಿಕೊಂಡರು ಇದರಿಂದ ಅವರ ಕೃತಿ ರಚನೆ ಕಡಿಮೆಯಾದರೂ ಶಿಕ್ಷಣ ಪದ್ದತಿಯಲ್ಲಿ ಚಿತ್ರ ಕಲೆಗೂ ಮಹತ್ವದ ಸ್ಥಾನವನ್ನು ಕಲ್ಪಿಸಿ ಅನೇಕ ಸುಧಾರಣೆಗಳನ್ನು ತಂದರು.

**೩. ಶ್ರೀ. ಡಿ. ವಿ. ಹಾಲಭಾವಿ**

೧೯೦೭ರ ನವೆಂಬರ್ ೨೮ರಂದು ಧಾರವಾಡದಲ್ಲಿ ಜನಿಸಿದರು. ಬಾಲ್ಯದಿಂದಲೂ ಇವರಿಗೆ ಚಿತ್ರಕಲೆಯತ್ತ ವಿಶೇಷವಾದ ಆಸಕ್ತಿ ಇತ್ತು. ೧೯೧೭ರಲ್ಲಿ ಎಲಿಮೆಂಟರಿ ಡ್ರಾಯಿಂಗ್ ಗೇಡ್ ಪರೀಕ್ಷೆಯನ್ನು ಪ್ರಥಮ ಶ್ರೇಣಿಯಲ್ಲಿ ಪಾಸಾದರು. ಇಂಟರ್ ಮಿಡಿಯೇಟ್ ಡ್ರಾಯಿಂಗ್ ಗ್ರೇಡ್ ಪರೀಕ್ಷೆ ಬೆಳಗಾವಿಯಿಂದ ಉಚ್ಚ ಶ್ರೇಣಿಯಲ್ಲಿ ಪಾಸಾದರು. ಇವರು ಚಿತ್ರ ಕಲೆಯಲ್ಲಿ ಹೆಚ್ಚಿನ ವ್ಯಾಸಂಗಕ್ಕಾಗಿ ಮಂಬೈನ ಜೆ.ಜೆ.ಸ್ಕೂಲ್ ಆಫ್‌ಆರ್ಟ್‌ಗೆ ಸೇರಿದರು. ಡಿ.ಟಿ.ಸಿ ಶಿಕ್ಷಕರ ತರಬೇತಿ ಪಡೆದು ಧಾರವಾಡಕ್ಕೆ ಮರಳಿದರು. ಹಾಲಭಾವಿಯವರು ೧೯೩೫ರಲ್ಲಿ ಡ್ರಾಯಿಂಗ್ ಮತ್ತು ಪೇಂಟಿಂಗ್ ಡಿಪ್ಲೊಮಾ ಪರೀಕೆಯಲ್ಲಿ ಉತ್ತಮ ಶ್ರೇಣಿಯಲ್ಲಿ ಪಾಸಾದರು. ೧೯೩೭ರಲ್ಲಿ ಕಲಾ ಶಿಕ್ಷಣದ ಆರ್ಟ್ ಮಾಸ್ಟರ್ ಎ.ಎಮ್.ಪದವಿ ಪರೀಕ್ಷೆಯನ್ನು ಮುಂಬೈ ಪ್ರಾಂತ್ಯದಲ್ಲಿಯೇ ಪ್ರಥಮ ಶ್ರೇಣಿಯಲ್ಲಿ ಪಾಸಾದರು.

೧೯೩೫ರಲ್ಲಿ ಸ್ಕೂಲ್ ಆಫ್ ಆರ್ಟ್ ಪ್ರಾರಂಭಿಸಿದರು. ಉತ್ತರ ಕರ್ನಾಟಕದಲ್ಲಿ ಪ್ರಥಮ ಚಿತ್ರಕಲಾ ಶಾಲೆ ಪ್ರಾರಂಭಿಸಿದ ಕೀರ್ತಿ ಇವರದ್ದು. ಡ್ರಾಯಿಂಗ್ ಗ್ರೇಡ್ ಪೇಂಟಿಂಗ್ ಕೋರ್ಸ್‌ಗಳ ಜೊತೆಗೆ ಫೋಟೋಗ್ರಫಿ, ನೃತ್ಯ ಸಂಗೀತದಂಥ ಲಲಿತಕಲೆಗಳಲ್ಲಿ ಶಿಕ್ಷಣವನ್ನು ಕಲಾಶಾಲೆಯಲ್ಲಿ ಕೊಡಲಾರಂಭಿಸಿದರು. ಪರೀಕ್ಷಾ ಕೇಂದ್ರವನ್ನು ಧಾರವಾಡದಲ್ಲಿ ೫ ವರ್ಷಗಳ ಅವಧಿಯಲ್ಲಿ ಕಲಾಮಂದಿರಕ್ಕೆ ಬೇಕಾದ ಎಲ್ಲಾ ಸೌಕರ್ಯಗಳನ್ನು ಪೂರೈಸಿದರು. ಇವುಗಳ ತರಗತಿಯ ನಿರ್ವಹಣೆಗಾಗಿ ಪ್ರಾಚಾರ್ಯರು, ಮುಂಬೈನಿಂದ ಪರಿಣಿತರಾದ ಶಿಕ್ಷಕರನ್ನು ಕರೆತಂದರು. ಇದರಿಂದ ಕಲಾವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಯಿತು. ೧೯೫೭ರವರೆಗೆ ಎಲ್ಲ ಚಿತ್ರಕಲಾ ಪರೀಕ್ಷೆಗಳನ್ನು ಈ ಕಲಾಮಂದಿರದವತಿಯಿಂದಲೇ ನಿರ್ವಹಿಸಲಾಯಿತು. ಹೀಗೆ ಸ್ಕೂಲ್ ಆಫ್ ಆರ್ಟ್ ಸಂಸ್ಥೆ ಬೆಳೆಯುತ್ತಾ ಸಾಗಿತ್ತು. ಹಾಲಭಾವಿಯವರ ಚಿತ್ರರಚನೆ ಮತ್ತು ಚಿತ್ರಪ್ರದರ್ಶನಗಳು ೧೯೩೦ರಿಂದ ಒಂದು ವ್ಯವಸ್ಥಿತ ಕ್ರಮದಲ್ಲಿ ನಡೆಯತೊಡಗಿದವು. ಇವರ ಚಿತ್ರಗಳು ಭಾರತೀಯ ಸಂಪ್ರದಾಯ

ಶೈಲಿಯಲ್ಲಿ ನಿರೂಪಿತವಾದವು. ೧೯೫೨ರಲ್ಲಿ ಮುಂಬಯಿಯ ಆರ್ಟ್ ಸೊಸೈಟಿಯ ಕಲಾಪ್ರದರ್ಶನದಲ್ಲಿ ಎರೋಡ್ ಟು ಹಳಿಯಾಳ ಎಂಬ ನಿಸರ್ಗ ಕೃತಿಗೆ ಪ್ರಶಸ್ತಿ ಸಿಕ್ಕಿತು ೧೯೫೪ರಲ್ಲಿ ವಿಜಾಪೂರದ ಆಂಟಿ ಫ್ಯಾಮಿನ ಇನ್‌ಸ್ಟಿಟ್ಯೂಟಿಗೆ ಕಳಿಸಿದ ಚಿತ್ರ ವಿ.ಎಚ್.ನಾಯಕ್ ಕಲೆಕ್ಟರವರ ತೈಲ ಚಿತ್ರ, ಡೆಪ್ಯೂಟಿ ಚೆನ್ನಬಸಪ್ಪ, ಡಿ. ಸಿ. ಪಾವಟೆ, ರೊದ್ದ ಶ್ರೀನಿವಾಸರಾವ್ ಮತ್ತು ಟಿ. ಸಿ. ಎಂ. ಧಾರವಾಡದ ಶತಮಾನೋತ್ಸವಕ್ಕೆ ಕಳುಹಿಸಿದ ಚಿತ್ರಗಳೆಲ್ಲ ೧೯೫೭ರಲ್ಲಿ ರಚನೆಗೊಂಡಂತಹುಗಳಾಗಿವೆ. ೧೯೬೦ರಲ್ಲಿ ಬಿ.ಡಿ.ಜತ್ತಿಯವರ ತೈಲಚಿತ್ರ ಲಮಾಣಿಸ್ತ್ರೀ, ಗೋಳಗುಮ್ಮಟದ ಚಿತ್ರವನ್ನು ಇಂಗ್ಲೆಂಡಿನ ಸ್ಯೇ ಎಂಬ ಕಲಾವಿದ ೧೯೬೦ರಲ್ಲಿ ಖರೀದಿಸಿದನು.

ಆರ್ಟ್‌ಗಿಲ್ಡ್ ಎಂಬ ಪತ್ರಿಕೆಯ ಸಂಪಾದಕರಾಗಿ ಚಿತ್ರ ಕಲೆಯ ಬಗ್ಗೆ ಅನೇಕ ಲೇಖನಗಳನ್ನು ಪ್ರಕಟಿಸಿದರು. ನನ್ನ ಸಮಕಾಲೀನ ಕಲಾವಿದರು ಎಂಬ ಗ್ರಂಥವನ್ನು ಬರೆದರು. ೧೯೭೭ರಲ್ಲಿ ಪೋಸ್ಟ್ ಡಿಪ್ಲೊಮಾ ಕ್ಲಬ್ ಸ್ಥಾಪಿಸಿ ಉಚ್ಚಕಲಾ ಶಿಕ್ಷಣವನ್ನು ಪಡೆದ ಕಲಾವಿದರು ಒಂದೆಡೆ ಸೇರಿ ಹೊಸ ಹೊಸ ಕಲಾ ಸಂಪ್ರದಾಯಗಳ ಬಗ್ಗೆ ಶೈಲಿಗಳ ಬಗ್ಗೆ ಪ್ರಾತ್ಯಕ್ಷಿಕ ನಡೆಸಿ ಚರ್ಚಿಸಲು ಅವಕಾಶ ಮಾಡಿಕೊಟ್ಟರು. ಇವರು ಕಾಶ್ಮೀರ ಪ್ರವಾಸಕ್ಕೆ ಹೋದಾಗ ಅಲ್ಲಿ ಸಾಕಷ್ಟು ಕಲಾಕೃತಿಗಳನ್ನು ಜಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಅವುಗಳಲ್ಲಿ ಕಾಶ್ಮೀರ ಕಣಿವೆ ಕಲಾಕೃತಿಯೂ ಒಂದು. ಈ ಕಲಾಕೃತಿಯಲ್ಲಿ ವಿಶಾಲವಾದ ಬೆಟ್ಟಗಳು, ಕೆಳಗಡೆ ಕಣಿವೆಗಳನ್ನು ಗಮನಿಸಬಹುದಾಗಿದೆ. ಬೆಟ್ಟಗಳ ಹಸಿರು ವರ್ಣಗಳಿಂದ ಕೂಡಿದ್ದು, ಕೆಳಗಡೆ ನೀರು ಸ್ವಚ್ಛ ಹಸಿರು ಬಣ್ಣದಿಂದ ಕೂಡಿದ್ದನ್ನು ಚಿತ್ರಿಸಿದ್ದಾರೆ. ಅಕ್ಕಪಕ್ಕದಲ್ಲಿ ಉದ್ದನೆಯ ಗಿಡನ್ನು ಚಿತ್ರಿಸಿ ಕಂದು ಬಣ್ಣದ ಲೇಪನವನ್ನು ಲೇಪಮಾಡಿ ನೆರಳು ಬೆಳಕನ್ನು ತೋರಿಸಿದ್ದಾರೆ.

ಶ್ರೀ ಹಾಲಭಾವಿಯವರು ಭಾವಚಿತ್ರಗಳು, ಶಿರಭಾವ ಚಿತ್ರಗಳನ್ನು ಒಂದು ವಿಶಿಷ್ಟ ರೀತಿಯಲ್ಲಿ ಚಿತ್ರಿಸಿದ್ದಾರೆ. ಭಾವಚಿತ್ರ ಮತ್ತು ನಿಸರ್ಗಚಿತ್ರಗಳನ್ನು ಹೆಚ್ಚಾಗಿ ರಚಿಸುತ್ತಿದ್ದರು. ೧೯೬೫ರಲ್ಲಿ ತೈಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಎಡಭಾಗಕ್ಕೆ ತಿರುಗಿ ಕುಳಿತಿರುವ ಭಾವಚಿತ್ರ ಇದಾಗಿದೆ. ಕಣ್ಣಿನ ನೇರವಾದ ನೋಟ, ಕೇಶಗಳ ವಿನ್ಯಾಸ, ಕೊರಳಲ್ಲಿಯ ಆಭರಣಗಳು ಮತ್ತು ಕೇಶಗಳಲ್ಲಿಯು ಆಭರಣಗಳು ಯಥೇಚ್ಛವಾಗಿ ಮೂಡಿ ಬಂದಿದೆ. ಇಲ್ಲಿ ವೇಷಭೂಷಣಗಳಿಗೆ ಗಾಢವಾದ ನೆರಳು ಬೆಳಕನ್ನು ತೋರಿಸಿ ಕೃತಿಗೆ ಮೆರಗು ನೀಡಿದ್ದಾರೆ. ನೀಲಿ ಮತ್ತು ಬಿಳಿವರ್ಣಗಳನ್ನು ಮಿಶ್ರಣ ಮಾಡಿ ಕೃತಿ ರಚಿಸಿದ್ದಾರೆ. ಇದರ ಹಿನ್ನೆಲೆಯಲ್ಲಿ ತೆಳು ನೀಲಿ ಬಣ್ಣದ ಲೇಪನವಿದೆ.

ಇವರು ತೈಲವರ್ಣ, ಜಲವರ್ಣ, ಅಲ್ಲದೆ ಪೆನ್ಸಿಲ್‌ನ ರೇಖಾ ಚಿತ್ರಗಳು, ಚಾರಕೋಲ್‌ನಿಂದ ಮಾಡಿದ ಕಪ್ಪ್. ಬಿಳುಪು ಚಿತ್ರಗಳು, ಹೀಗೆ ವಿವಿಧ ಮಾಧ್ಯಮಗಳಲ್ಲಿ ಚಿತ್ರಗಳು ಆಕಾರ ಪಡೆದಿವೆ. ವಸ್ತು ನಿಷವಿಚಿತ್ರಣವೇ ಇವರ ಕಲಾಕೃತಿಗಳ ಯಶಸ್ಸಿನಗುಟ್ಟು, ಇವರಿಗೆ ವ್ಯಕ್ತಿ ಚಿತ್ರಗಳನ್ನು

ರಚನೆಮಾಡುವುದರಲ್ಲಿ ಹೆಚ್ಚು ಆಸಕ್ತಿ. ಇವರ ಕೃತಿಗಳು ಸ್ವೀಡನ್ನಿನ ಕುಮಾರಿ ದುಷಾ ಅವರಲ್ಲಿ ಕೆನಡಾದ ಬೆಳಗಾಂಕರ ಅವರ ಸಂಗ್ರಹದಲ್ಲಿವೆ. ಮುಂಬೈ, ಔರಂಗಾಬಾದ, ಪುಣೆ, ಅನೇಕ ಕಡೆಗಳಲ್ಲಿ ಪ್ರದರ್ಶನಗಳನ್ನು ಮಾಡಿದ್ದಾರೆ. ೧೯೬೮ರಲ್ಲಿ ಶ್ರೀಲಂಕಾಕ್ಕೆ ಪ್ರವಾಸ ಕೈಕೊಂಡಿದರು. ಹಾಲಭಾವಿಯವರು ತಮ್ಮ ವೃತ್ತಿಯೊಂದಿಗೆ ಹಲವಾರು ಪ್ರವೃತ್ತಿಗಳನ್ನು ಮೈಗೂಡಿಸಿಕೊಂಡವರು. ಕೇವಲ ಒಬ್ಬ ಕಲಾಶಿಕ್ಷಕನಾಗದೇ ಜೊತೆಗೆ ಕಲಾವಿದರಾಗಿ ಕಲಾವಿಮರ್ಶಕರಾಗಿ, ಸಂಘಟಕರಾಗಿ ಮತ್ತು ಶಾಲೆಯೊಂದರ ಸ್ಥಾಪಕರಾಗಿ ಇದ್ದರು. ಇವರ ಕಾರ್ಯವನ್ನು ಗುರುತಿಸಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಗೌರವ ಪ್ರಶಸ್ತಿ, ೧೯೬೮ ರಾಜ್ಯೋತ್ಸವ ಪ್ರಶಸ್ತಿ ೧೯೬೪, ಐದನೇ ಧಾರವಾಡ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ ೧೯೬೪ ಮತ್ತು ೧೯೫೫ರಲ್ಲಿ ವೆಂಕಟಪ್ಪ ಪ್ರಶಸ್ತಿಯನ್ನು ಕೊಟ್ಟು ಗೌರವಿಸಲಾಯಿತು.

**೪. ಶ್ರೀ. ಎನ್. ಜಿ. ಬಡಿಗೇರ**

೧೪.೦೬.೧೯೧೨ರಲ್ಲಿ ಮಿಶ್ರಿ ಕೋಟೆಯಲ್ಲಿ ಜನಿಸಿದರು. ಜೆ.ಜೆ.ಸ್ಕೂಲ್ ಆಫ್ ಆರ್ಟ್‌ನಲ್ಲಿ ಪ್ರವೇಶ ಪಡೆದ ನಂತರ ಡಿ.ಟಿ.ಸಿ. ಪರೀಕ್ಷೆಯಲ್ಲಿ ದ್ವಿತೀಯ ದರ್ಜೆಯಲ್ಲಿ ಪಾಸು ಮಾಡಿದರು. ಡ್ರಾಯಿಂಗ್ ಮಾಸ್ಟರ್ ಪರೀಕ್ಷೆಯಲ್ಲಿಮಂಬೈ ಪ್ರಾಂತ್ಯಕ್ಕೆ ಪ್ರಥಮ ರ್‍ಯಾಂಕ್‌ಗಳಿಸಿದರು. ಆರ್ಟ್ ಮಾಸ್ಟರ್ ಹಾಗೂ ಡಿಪ್ಲೊಮಾ ಇನ್ ಪೇಂಟಿಂಗ್‌ನಲ್ಲಿ ಕೂಡಾ ಉತ್ತಮ ಶ್ರೇಣಿಯಲ್ಲಿ ಪಾಸಾದರು. ಇವರ ಪ್ರತಿಭೆಯನ್ನು ಗಮನಿಸಿ ಭಾರತ ಸರಕಾರವು ಹೆಚ್ಚಿನ ಅಧ್ಯಯನಕ್ಕಾಗಿ ಪಶ್ಚಿಮ ಬಂಗಾಲದ ಶಾಂತಿನಿಕೇತನದಲ್ಲಿರುವ ಲ್ಯಾಕರ್ಸ್ ವರ್ಕ್ ಎಂಬ ಸರಣಿ ಮತ್ತು ಟೀಚರ್ ಟ್ರೇನಿಂಗ್ ಆರ್ಟ್ ಆ್ಯಂಡ್ ಕ್ರಾಫ್ಟ್ ತರಬೇತಿಗೆ ಕಳುಹಿಸಿಕೊಟ್ಟಿತು. ಅಲ್ಲಿ ಇವರು ಪ್ರಸಿದ್ಧ ಕಲಾವಿದ ನಂದಲಾಲ್ ಬೋಸ್‌ರವರ ಮಾರ್ಗದರ್ಶನದಲ್ಲಿ ಅಧ್ಯಯನ ಮಾಡಿದರು. ಇವರು ಮೊದಲು ಮುಂಬೈಯ ಕಿಂಗ್ ಜಾರ್ಜ್ ಹೈಸ್ಕೂಲ್‌ನಲ್ಲಿ ಕಲಾಶಿಕ್ಷಕರಾಗಿ ಕರ್ತವ್ಯ ಆರಂಭಿಸಿದರು. ಪುಣೆ ಮತ್ತು ಮುಂಬೈಗಳಲ್ಲಿ ಚಿತ್ರಪ್ರದರ್ಶನಗಳನ್ನು ಏರ್ಪಡಿಸಿದರು. ನೂತನ ಕಲಾಮಂದಿರದಲ್ಲಿ ನಾಲ್ಕು ವರ್ಷಗಳ ಕಾಲ ಅಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಡಿ.ವಿ.ಹಾಲಭಾವಿಯವರ ಸ್ಕೂಲ್ ಆಫ್ ಆರ್ಟ್‌ದಲ್ಲಿ ಗೌರವ ಶಿಕ್ಷಕರಾಗಿಯೂ ಕೆಲಸ ಮಾಡಿದ್ದಾರೆ. ಕರ್ನಾಟಕ ಹಾಗೂ ಮುಂಬೈ ರಾಜ್ಯಗಳಲ್ಲಿ ಎಸ್.ಎಸ್.ಎಲ್.ಸಿ ಗ್ರೇಡ್ ಹಾಗೂ ಉನ್ನತ ಚಿತ್ರಕಲಾ ಪರೀಕ್ಷೆಗಳಿಗೆ ಪ್ರಧಾನ ಪರಿವೀಕ್ಷಕರಾಗಿ ಹಾಗೂ ಚೇರ್‌ಮನ್‌ರಾಗಿ ಅನೇಕ ವರ್ಷಗಳ ಕಾಲ ಸೇವೆಸಲ್ಲಿಸಿದ್ದಾರೆ.

ಭಾರತ ಸರ್ಕಾರದ ಕರೆಯ ಮೇರೆಗೆ ಕಲ್ಕತ್ತಾದ ವಿಶ್ವಭಾರತಿ ಶಾಂತಿ ನಿಕೇತನಕ್ಕೆ ಒಂದು ವರ್ಷ ಕಾಲ ಸೇವೆ ಸಲ್ಲಿಸಲು ಹೋದರು ಅಲ್ಲಿ ಅವರು ಫ್ರೆಸ್ಕೋ ತಂತ್ರಗಾರಿಕೆಯ ಭಿತ್ತಿ ಚಿತ್ರ ರಚಿದ್ದಾರೆ. ಬಂಗಾಲ ಪ್ರಾಂತ್ಯದ ಭೀರಭೂಮ ಜಿಲ್ಲೆಯ ಕೆಲವು ಹಳ್ಳಿಗಳ ಸಾಮಾಜಿಕ

ಬದುಕಿನ ಅಧ್ಯಯನ ಮಾಡಿದರು. ಆದಿವಾಸಿಗಳ ಹಾಗೂ ಆ ಜನರ ಸಂಸ್ಕೃತಿ, ಪರಂಪರೆ ಮತ್ತು ಕುಶಲತೆಗಳ ಬಗ್ಗೆ ಅಧ್ಯಯನ ಮಾಡಿ ಸರಕಾರಕ್ಕೆ ವರದಿ ಸಲ್ಲಿಸಿದರು. ಇವರಿಗೆ ೧೯೮೩ರಲ್ಲಿ ಕರ್ನಾಟಕ ರಾಜ್ಯಲಲಿತಕಲಾ ಅಕಾಡೆಮಿ ಪ್ರಶಸ್ತಿಯನ್ನು ಕೊಟ್ಟು ಗೌರವಿಸಿವೆ.

**೫. ಶ್ರೀ. ಬಸವರಾಜ ಹಳಿಜೋಳ**

ಜನನ ೧೩.೧೨.೧೯೩೪ರಲ್ಲಿ ಬೆಳಗಾವಿ ಜಿಲ್ಲೆಯ ದೇಶನೂರನಲ್ಲಿ ಜನಿಸಿದರು. ೧೯೭೪ರಲ್ಲಿ ಜೆ.ಜೆ.ಸ್ಕೂಲ್ ಆಫ್ ಆರ್ಟ್‌ನಲ್ಲಿ ಪೇಂಟಿಂಗ್‌ನಲ್ಲಿ ಪದವಿಯನ್ನು ಪಡೆದರು. ಶ್ರೀ.ವಿ.ಮ.ಲ.ಕ.ಮಹಾವಿದ್ಯಾಲಯದಲ್ಲಿ ಉಪನ್ಯಾಸಕರಾಗಿ ವೃತ್ತಿ ಆರಂಭಿಸಿದರು. ಕರ್ನಾಟಕ ಕಲಾ ಜಗತ್ತು ಕಂಡ ಒಬ್ಬ ಕಲಾಪ್ರವೀಣ ಶ್ರೀ ಬಸವರಾಜ ಹಳಿಜೋಳ ಎನ್ನಬಹುದು. ಇವರು ಒಂದು ಸಾವಿರದ ಐನೂರಕ್ಕೂ ಹೆಚ್ಚು ಚಿತ್ರ ರಚನೆ ಮಾಡಿದರು.

ಇವರ ಸದಾ ಕ್ರಿಯಾಶೀಲರಾಗಿ ಹೊಸ ಹೊಸ ಕಲಾಪ್ರಯೋಗಗಳನ್ನು ಮಾಡಿ ಹೊಸದೊಂದು ಕಲಾಪರಂಪರೆಯನ್ನು ನಿರ್ಮಾಣ ಮಾಡಿದರು. ಸ್ಥಳದಲ್ಲಿಯೇ ಭಾವಚಿತ್ರಗಳನ್ನು ತೈಲವರ್ಣ, ಅಥವಾ ಜಲವರ್ಣಗಳಲ್ಲಿ ೩೦ ರಿಂದ ೪೦ ನಿಮಿಷದಲ್ಲಿ ಬಿಡಿಸುತ್ತಿದ್ದರು. ಇವರು ಜಲವರ್ಣದಲ್ಲಿ ಅನೇಕ ಐತಿಹಾಸಿಕ ಅವಶೇಷಗಳನ್ನು ಚಿತ್ರಿಸುತ್ತಿದ್ದರು. ಹಂಪಿ, ಬಾದಾಮಿ, ಬಿಜಾಪುರ, ಲಕ್ಕುಂಡಿ ಇಲ್ಲಿ ಸ್ಮಾರಕಗಳನ್ನು ಅದ್ಭುತವಾಗಿ ಚಿತ್ರಿಸಿದ್ದಾರೆ. ಸೃಜನಾತ್ಮಕ, ಸೂಕ್ಷ್ಮ ಕಲಾ ನಿಪುಣರಾಗಿದ್ದರು. ಅವರ ಚಿತ್ರಗಳಲ್ಲಿ ಕಲಾತ್ಮಕವಾದ ಹಾವಭಾವ ಭಂಗಿ ರಸಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಹಾಗೂ ಬಣ್ಣಗಳ ಹೊಂದಾಣಿಕೆಯು ನೋಡುವವರಿಗೆ ಅನಂದವನ್ನುಂಟು ಮಾಡುತ್ತವೆ. ಲಯ ಮತ್ತು ಬಣ್ಣಗಳ ಆಳವಾದ ಜ್ಞಾನದಿಂದ ಹೃದಯ ಮತ್ತು ಬುದ್ಧಿಗಳಿಗೆ ತಟ್ಟುವಂತಹ ಕಲಾಕೃತಿಗಳನ್ನು ಇವರು ರಚಿಸುತ್ತಿದ್ದರು.

ಅವರ ಪರಿಸರವೇ ಒಂದು ಕಲಾಕೇಂದ್ರ ಶಿಷ್ಯರಿಗೆ ಕಲೆಯನ್ನು ಕಲಿಸಲು ಯಾವಾಗಲೂ ಸಿದ್ಧರಿರುತ್ತಿದ್ದರು. ಬಣ್ಣಗಳೊಡನೆ ಆಟವಾಡಿದಂತೆ ಅವರ ಕುಂಚ ತಿರುಗುತ್ತಿತ್ತು. ನೆರಳು ಬೆಳಕುಗಳ ಪ್ರಮಾಣವನ್ನು ಗ್ರಹಿಸಿದ ಅವರು ತಮ್ಮ ಕಲಾಕೃತಿಗಳಲ್ಲಿ ಇದರ ಭಾವವನ್ನು ತೋರುತ್ತಿದ್ದರು. ಶ್ರೇಷ್ಠ ವಿವಾದ ಕಲೆ ಎಂದೂ ಹಳೆಯದಾಗುವುದಿಲ್ಲ ಕಲಾವಿದನಲ್ಲಿ ವೈಚಾರಿಕ ದೃಷ್ಟಿ ಎಷ್ಟು ಬೆಳೆಯುತ್ತದೋ, ಅಷ್ಟು ಗಾಢವಾದ ಚಿತ್ರರಚಿಸುತ್ತಾನೆ. ಅದು ನಿತ್ಯ ನೂತನವಾಗಿರುತ್ತದೆ ಎಂದು ಆಧುನಿಕ ಕಲೆಯ ಕುರಿತು ಶ್ರೀ ಬಸವರಾಜ ಹಳಿಜೋಳರು ತಮ್ಮ ಅಭಿಪ್ರಾಯವನ್ನು ಹೇಳುತ್ತಿದ್ದರು. ಛಾಯಾಗ್ರಹಣದಲ್ಲಿ ಸಹ ಅವರು ಕುಂಚದಷ್ಟೇ ಹಿಡಿತ ಸಾಧಿಸಿದ್ದರು. ತಾವು ಕಂಡ ಸುಂದರ ಸನ್ನಿವೇಶಗಳನ್ನು ನಿಸರ್ಗ ದೃಶ್ಯಗಳನ್ನು ತಮ್ಮ ಕ್ಯಾಮರಾದಲ್ಲಿ ತೆಗೆದು ಪ್ರದರ್ಶನ ಮಾಡುತ್ತಿದ್ದರು. ಅವರು ಸ್ವತಃ ತಂಬೂರಿಯ ಸಂಗಡ ತಾಸುಗಟ್ಟಲೆ ಸಂಗೀತ ಹಾಡುತ್ತಿದ್ದರು. ಸಂಗೀತವೂ

ಕರಗತವಾಗಿತ್ತು. ಮಿಣಜಗಿಯವರು ಸಂಗೀತ ಹಾಡುವಾಗ ಸಮರ್ಥ ರೀತಿಯಲ್ಲಿ ತಂಬೂರಿ ಸಾಥ್ ನೀಡುತ್ತಿದ್ದರು.

ಅಖಿಲ ಭಾರತ ೪೫ನೇ ಕನ್ನಡ ಸಾಹಿತ್ಯ ಸಮ್ಮೇಳನ ಕಾರವಾರದಲ್ಲಿ ೧೯೬೫ರಲ್ಲಿ ನಡೆದಾಗ ಇವರ ತೈಲ ವರ್ಣ ಚಿತ್ರಗಳಿಗೆ ಬಂಗಾರದ ಪದಕ ಪ್ರಶಸ್ತಿಯನ್ನು ಕಡಂಗೋಡ್ಲು ಶಂಕರಭಟ್ಟ ಅವರು ನೀಡಿ ಗೌರವಿಸಿದ್ದಾರೆ. ಅಖಿಲ ಭಾರತ ೫೫ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಇವರ ಬಹುಮಾಧ್ಯಮದ ಕೃತಿಗೆ ಶಿರಸಿಯಲ್ಲಿ ಶ್ರೀ ಗೊರೂರು ರಾಮಸ್ವಾಮಿಗಳು ಅಯ್ಯಂಗಾರ ಪ್ರಶಸ್ತಿ ರಜತ ಪದಕ ನೀಡಿ ಗೌರವಿಸಲಾಯಿತು. ೧೯೯೧ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಮರಣೋತ್ತರ ಗೌರವ ಪ್ರಶಸ್ತಿಯನ್ನು ಆಗಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ.ಎಸ್.ಬಂಗಾರಪ್ಪನವರು ಬಸವರಾಜ ಹಳಿಜೋಳ ಇವರ ಧರ್ಮಪತ್ನಿ ಶ್ರೀಮತಿ ಸುಗಂಧವ್ವ ಹಳಿಜೋಳ ಅವರಿಗೆ ನೀಡಿದರು.

**೬. ಶ್ರೀ. ಎಂ.ಜಿ. ವಾಚೇದಮಠ**

ಶ್ರೀ. ಎಂ. ಜಿ. ವಾಚೇದಮಠ ಅವರು ೧೯೩೪, ಕೋಗನೂರಿನಲ್ಲಿ ಜನಿಸಿದರು. ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ಗದಗನಲ್ಲಿ ಪೂರೈಸಿದರು. ೧೯೫೧ರಲ್ಲಿ ಹೈಸ್ಕೂಲ್‌ನಲ್ಲಿದ್ದಾಗ ಎಲಿಮೆಂಟರಿ ಮತ್ತು ಇಂಟರ್ ಮೀಡಿಯೆಟ್ ಗ್ರೇಡ್ ಪರೀಕ್ಷೆಗಳನ್ನು ಮುಗಿಸಿದರು. ಇವರು ನೈಜ ಕಲೆಗೆ ಹೆಚ್ಚು ಒತ್ತುಕೊಟ್ಟು, ಕಲಿತು ೧೯೫೭ರಲ್ಲಿ ವಿದ್ಯಾರ್ಥಿಯಾಗಿ, ೧೯೫೮ರಲ್ಲಿ ಡಿಪ್ಲೊಮಾದಲ್ಲಿ ಪಾಸಾಗಿ ಆರ್ಟ್ ಮಾಸ್ಟರ್ ಪರೀಕ್ಷೆ ಮುಗಿಸಿ ನೂತನ ಕಲಾಮಂದಿರದಲ್ಲಿಯೆ ಶಿಕ್ಷಕರಾಗಿ ನೇಮಕಗೊಂಡರು. ವಾಚೇದಮಠರು ಅನಿವಾರ್ಯ ಕಾರಣಗಳಿಂದ ಮುಂಬೈಯನ್ನು ತೊರೆದು ತಮ್ಮ ಊರಿಗೆ ಮರಳಿ ಬಂದರು. ೧೯೬೦ರಲ್ಲಿ ಸವದತ್ತಿಯ ಕೆ.ಎಲ್.ಇ. ಸೊಸೈಟಿಯ ಹೈಸ್ಕೂಲ್‌ಗೆ ಶಿಕ್ಷಕರಾಗಿ ವೃತ್ತಿಯನ್ನು ಆರಂಭಿಸಿದರು. ೧೯೬೧ರಲ್ಲಿ ಸವದತ್ತಿಯಿಂದ ಅಥಣಿಯಲ್ಲಿರುವ ಕೆ.ಎಲ್.ಇ. ಸೊಸೈಟಿಯ "ನ್ಯೂ ಹೈಸ್ಕೂಲ್"ಗೆ ವಾಚೇದಮಠರ ವರ್ಗಾವಣೆಯಾಯಿತು. ಇವರು ೧೯೬೪ರಲ್ಲಿ ಮಕ್ಕಳ ಚಿತ್ರಕಲಾ ಪ್ರದರ್ಶನದ ಜೊತೆಗೆ ತಮ್ಮ ಕಲಾಕೃತಿಗಳನ್ನು ಪ್ರದರ್ಶಿಸಿ ಜನರ ಮೆಚ್ಚುಗೆ ಗಳಿಸಿದರು. ೧೯೬೪ರ ಅವಧಿಯಲ್ಲಿ ಮೈಸೂರು ರಾಜ್ಯದ ಪಠ್ಯ ಪುಸ್ತಕಕ್ಕಾಗಿ ವಾಚೇದಮಠರು ಅನೇಕ ಚಿತ್ರಗಳನ್ನು ತೆಗೆದುಕೊಟ್ಟರು.

ಇವರು ರೇಖಾಚಿತ್ರಗಳನ್ನು ವಿಶೇಷವಾಗಿ ರಚಿಸುತ್ತಾರೆ. ಇವರ ರೇಖಾಚಿತ್ರಗಳಲ್ಲಿ ಜೀವಂತಿಕೆಯ ಲಕ್ಷಣಗಳು ಎದ್ದು ಕಾಣುತ್ತವೆ. ಇವರ ಚಿತ್ರಗಳಲ್ಲಿ ಲಂಬಾಣಿ ಜನರು, ಹಳ್ಳಿಯಲ್ಲಿ ಪೇಪರ ಓದಿಸುತ್ತಾ ಸುದ್ದಿಯನ್ನು ಆಲಿಸುತ್ತಾ ಕುಳಿತವರ ಗುಂಪು, ಬಸ್ಸಿಗಾಗಿ ಕಾಯುತ್ತಾ ಕುಳಿತವರ ಗುಂಪು, ಗಿಡದ ಕೆಳಗೆ ವಿಶ್ರಾಂತಿ ಪಡೆಯುತ್ತಿರುವ ದನಗಳ ಗುಂಪು ಮತ್ತು ದನಕಾಯುವ

ಬಾಲಕರು ಮತ್ತು ತಾಯಂದಿರು ವಿವಿಧ ಮಕ್ಕಳನ್ನು ಪಾಲನೆ ಮಾಡುವವರ ಅನೇಕ ದೃಶ್ಯಗಳನ್ನು ರೇಖಾಚಿತ್ರಗಳ ಮೂಲಕ ಸೆರೆಹಿಡಿದಿದ್ದಾರೆ. ಇವರ ಚಿತ್ರಗಳಲ್ಲಿ ವಿಶೇಷವಾಗಿ ಅನೇಕ ಮುಖಗಳ ಭಾವಚಿತ್ರಗಳು ನೈಜತೆಯಿಂದ ಮೂಡಿಬಂದಿವೆ.

೧೯೬೮ರಲ್ಲಿ ಸವದತ್ತಿಯಲ್ಲಿ "ಬಸವ ರೂಪ ದರ್ಶನ" ಪ್ರದರ್ಶನದಲ್ಲಿ ಇವರನ್ನು ಅಂದಿನ ಕಂದಾಯ ಮಂತ್ರಿಗಳಾದ ಶ್ರೀ ಎಚ್. ಬಿ. ಕೌಜಲಗಿಯವರು ಸತ್ಕರಿಸಿದರು. ೧೯೬೯ರ ಕರ್ನಾಟಕ ವಿಶ್ವವಿದ್ಯಾಲಯದ ಘಟಿಕೋತ್ಸವದ ಸಂದರ್ಭದಲ್ಲಿ ನಡೆದ ಚಿತ್ರಕಲಾ ಪ್ರದರ್ಶನದಲ್ಲಿ ಭಾಗವಹಿಸಿದ ಇವರ ಜಲವರ್ಣ ಮತ್ತು ರೇಖಾಚಿತ್ರಗಳು ಪ್ರಶಸ್ತಿ ಪಡೆದವು. ೧೯೭೪ರಲ್ಲಿ 'ಮೆಸೆಜ್' ಮತ್ತು 'ಭಾರ್ಗವರಾಮ' ಚಿತ್ರಗಳಿಗೆ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಲ್ಲಿ ಬಹುಮಾನ ಮತ್ತು ಪ್ರಶಸ್ತಿ ದೊರಕಿತು. ಕ್ಯಾಮ್ಲಿನ್ ಚಿತ್ರಕಲಾ ಪ್ರದರ್ಶನದಲ್ಲಿ ಭಾಗವಹಿಸಿ ಕ್ಯಾಮ್ಲಿನ್ ಪ್ರಶಸ್ತಿ ಪಡೆದಿದ್ದಾರೆ. ಹೀಗೆ ಅನೇಕ ಪ್ರಶಸ್ತಿಗಳು ಇವರಿಗೆ ಸಂದಿವೆ.

**೨. ಶ್ರೀ. ಪಿ. ಎಸ್. ಹಿರೇಮಠ**

ಶ್ರೀ. ಪಿ. ಎಸ್. ಹಿರೇಮಠರವರು ಹುಬ್ಬಳ್ಳಿ ತಾಲೂಕಿನ ಬ್ಯಾಹಟ್ಟಿ ಗ್ರಾಮದಲ್ಲಿ ೧೯೪೦ರಲ್ಲಿ ಜನಿಸಿದರು. ಬಾಲ್ಯ ಶಿಕ್ಷಣವನ್ನು ಬ್ಯಾಹಟ್ಟಿ, ಮಾಧ್ಯಮಿಕ ಶಾಲಾ ಶಿಕ್ಷಣವನ್ನು ಕಿತ್ತೂರಿನಲ್ಲಿ ಪಡೆದರು. ಇವರು ಶ್ರೀ ವಿಜಯ ಮಹಾಂತೇಶ ಲಲಿತಕಲಾ ಮಹಾವಿದ್ಯಾಲಯದಲ್ಲಿ ಆರ್ಟ್ ಮಾಸ್ಟರ್ ಹಾಗೂ ಡಿಪ್ಲೊಮಾ ಪೇಂಟಿಂಗ್ ಶಿಕ್ಷಣವನ್ನು ಪಡೆದರು. ಇವರು ಡಾ. ಎಂ.ವಿ. ಮಿಣಜಿಗಿಯವರ ಅಚ್ಚು ಮೆಚ್ಚಿನ ಶಿಷ್ಯರಾಗಿದ್ದರು. ಶಿಕ್ಷಣ ಪಡೆದ ನಂತರ ಉಪನ್ಯಾಸಕರಾಗಿ ೧೯೬೩ರಿಂದ ಸೇವೆಯನ್ನು ಆರಂಭಿಸಿದರು. ಕಂಟೆಪ್ಪಗೌಡರ ನಿಧನದ ನಂತರ ಇವರು ಪ್ರಾಚಾರ್ಯರಾಗಿ ಕಲಾಶಾಲೆಯನ್ನು ಅಭಿವೃದ್ಧಿಪಡಿಸತೊಡಗಿದರು.

ಶ್ರೀ ವಿಜಯ ಮಹಾಂತೇಶ ಲಲಿತಕಲಾ ಮಹಾವಿದ್ಯಾಲಯದ ಉಪನ್ಯಾಸಕರಾಗಿ, ಪ್ರಾಚಾರ್ಯರಾಗಿ ತಾವು ಕಲಾವಿದರಾಗಿ ಬೆಳೆದು, ಹಲವಾರು ಕಿರಿಯ ಕಲಾವಿದರಿಗೆ ಉತ್ತಮ ಅವಕಾಶಗಳನ್ನು ಕಲ್ಪಿಸಿಕೊಟ್ಟರು. ಮೂರು ದಶಕಗಳ ಕಾಲ ಸೇವೆ ಸಲ್ಲಿಸಿದರು. ಜನಸಾಮಾನ್ಯರಲ್ಲಿ ಚಿತ್ರಕಲೆಯ ಕುರಿತು ಅಭಿರುಚಿ ಬೆಳೆಯುವಲ್ಲಿ ಹಲವು ಕಾರ್ಯಕ್ರಮಗಳನ್ನು ಸುವ್ಯವಸ್ಥಿತವಾಗಿ ನಡೆಸುತ್ತಿದ್ದರು. ರಾಜ್ಯದ ಚಿತ್ರಕಲಾ ಶಿಕ್ಷಕರ ಒಳಿತಿಗಾಗಿ ರಾಜ್ಯ ಚಿತ್ರಕಲಾ ಮಹಾವಿದ್ಯಾಲಯ ಸಿಬ್ಬಂಧಿ ಸಂಘವನ್ನು ಸಂಘಟಿಸಿ ಅದರ ಅಧ್ಯಕ್ಷತೆಯನ್ನು ವಹಿಸಿಕೊಂಡು ರಾಜ್ಯದ ಎಲ್ಲಾ ಕಲಾಶಾಲೆಗಳ ಸಿಬ್ಬಂಧಿಗಳಿಗೆ ಸರಿಯಾದ ವೇತನ ಶ್ರೇಣಿ ಲಭಿಸುವಂತೆ ಹೋರಾಟ ಮಾಡಿದ್ದು, ಚಿತ್ರಕಲಾ ಮಹಾವಿದ್ಯಾಲಯದ ವಿದ್ಯಾರ್ಥಿಗಳಿಗಾಗಿ ಬಸ್‌ಪಾಸ್ ವ್ಯವಸ್ಥೆಯನ್ನು ಇವರು ಮಾಡಿದರು. ಇವರ ಅಧ್ಯಕ್ಷತೆಯ ಸಂದರ್ಭದಲ್ಲಿ ರಾಜ್ಯಮಟ್ಟದ ಜಲವರ್ಣ ಕಲಾಶಿಬಿರವನ್ನು ಎರಡು ಬಾರಿ

ಅತ್ಯಂತ ಯಶಸ್ವಿಯಾಗಿ ಸಂಘಟಿಸಿದರು. ಇವರು ಡಾ. ಎಂ. ಎ. ಮಿಣಜಿಗಿಯವರ ವಿದ್ಯಾರ್ಥಿಯಾಗಿದ್ದು, ಅವರ ಮಾರ್ಗದರ್ಶನದಲ್ಲಿಯೇ ಕಲಾಶಿಕ್ಷಣವನ್ನು ಪಡೆದಿದ್ದರು. ಇವರ ಕಲಾಕೃತಿಗಳಲ್ಲಿ ಇವರ ಪ್ರಭಾವ ಎದ್ದುಕಾಣುತ್ತಿತ್ತು. ಇವರು ಸಂಯೋಜನಾ ಚಿತ್ರ, ಸ್ಮರಣ ಚಿತ್ರಗಳು, ರೇಖಾಚಿತ್ರ ಹೀಗೆ ಅನೇಕ ಚಿತ್ರಗಳನ್ನು ರಚನೆ ಮಾಡಿದ್ದಾರೆ. ಇವರು ನೈಜ ಚಿತ್ರಗಳನ್ನು ಹೆಚ್ಚಾಗಿ ರಚಿಸುತ್ತಿದ್ದು ಕಂಡುಬರುತ್ತದೆ. ಕಲಾಶಾಲೆಯ ಕಾರ್ಯದ ಜೊತೆಗೆ ಕಲಾಕೃತಿ ರಚನೆ, ಕಲಾಶಿಬಿರ, ಕಲಾಪ್ರದರ್ಶನಗಳಲ್ಲಿಯೂ ಭಾಗವಹಿಸಿದ್ದು ಕಂಡುಬರುತ್ತದೆ.

**೮. ಶ್ರೀ ಮಹಾವೀರ ರಾ ಬಾಳೀಕಾಯಿ**

೦೧.೦೬.೧೯೪೧ ಹೆಬ್ಬಾಳದಲ್ಲಿ ಜನಿಸಿದರು. ಹೆಬ್ಬಾಳ ಮತ್ತು ಸಂಕೇಶ್ವರಗಳಲ್ಲಿ ಶಾಲಾಶಿಕ್ಷಣವನ್ನು ಪಡೆದರು. ೧೯೬೨ರಲ್ಲಿ ಡ್ರಾಯಿಂಗ್ ಟೀಚರ್ ಕೋರ್ಸ್ ಡಿ.ಟಿ.ಸಿ, ೧೯೬೬ರಲ್ಲಿ ಡಿಪ್ಲೊಮಾ ಡ್ರಾಯಿಂಗ್ ಮತ್ತು ಪೇಂಟಿಂಗ್ ಪರೀಕ್ಷೆಯಲ್ಲಿ ರಾಜ್ಯಕ್ಕೆ ದ್ವಿತೀಯ ರ್‍ಯಾಂಕ್‌ನಲ್ಲಿ ತೇರ್ಗಡೆಯಾದರು. ೧೯೭೧ರಲ್ಲಿ ಡ್ರಾಯಿಂಗ್ ಮಾಸ್ಟರ್ ತರಬೇತಿಯಲ್ಲಿ ರಾಜ್ಯಕ್ಕೆ ಪ್ರಥಮ ರ್‍ಯಾಂಕ್‌ನಲ್ಲಿ ತೇರ್ಗಡೆಯಾಗಿದ್ದಾರೆ. ೧೯೭೨ರಲ್ಲಿ ಆರ್ಟ್ ಮಾಸ್ಟರ್ ಪರೀಕ್ಷೆಯಲ್ಲಿ ರಾಜ್ಯಕ್ಕೆ ಪ್ರಥಮ ರ್‍ಯಾಂಕ್‌ದೊಂದಿಗೆ ತೇರ್ಗಡೆಯಾಗಿದ್ದಾರೆ.

ಕಲಾಪ್ರದರ್ಶನಗಳನ್ನು ಬಾಣಾವರ, ಅಜ್ಜಂಪುರ, ಹಾಸನ, ತರೀಕೆರೆ, ಹೆಬ್ಬಾಳ, ಚಿಕ್ಕಮಗಳೂರು, ೧೯೯೧ರಲ್ಲಿ ವೆಂಕಟಪ್ಪ ಆರ್ಟ್‌ಗ್ಯಾಲರಿ, ಬೆಂಗಳೂರು, ೧೯೯೨ರಲ್ಲಿ ಧಾರವಾಡದಲ್ಲಿ ೧೯೭೩, ೧೯೭೭ರವರೆಗೆ ನಂತರ ೧೯೯೨ರಿಂದ ೨೦೦೧, ೧ ರಿಂದ ೬ ಫೆಬ್ರುವರಿ ೨೦೦೮ ಕರ್ನಾಟಕ ಚಿತ್ರಕಲಾ ಪರಿಷತ್ತು ಆರ್ಟ್ ಕಾಂಪ್ಲೆಕ್ಸ್ ಗ್ಯಾಲರಿ, ಬೆಂಗಳೂರು, ಮತ್ತು ೨೪ ಆಗಸ್ಟ ೨೦೦೯, ವಿಶ್ವೇಶ್ವರ ಮಠ, ಗದಗದಲ್ಲಿ ಯಶಸ್ವಿಯಾಗಿ ಮಾಡಿದ್ದಾರೆ.

ಇವರ ಕಲಾಕೃತಿಗಳು ಕೆ.ಪಿ.ಟಿ.ಸಿ.ಎಲ್ ಕಮೀಷನರ್ ಆಫೀಸ್, ಬೆಂಗಳೂರು, ರಾಜ್ಯ ಮತ್ತು ಕೇಂದ್ರ ಲಲಿತಕಲಾ ಅಕಾಡೆಮಿ, ಜನಪದ ಮತ್ತು ಪ್ರಾಚ್ಯ ವಸ್ತುಸಂಗ್ರಹಾಲಯ ಮೈಸೂರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಧಾರವಾಡ, ಬೇಂದ್ರೆ ಭವನ,ಸ ಧಾರವಾಡ, ಸ್ವಿಜರ್ ಲ್ಯಾಂಡ್, ಜರ್ಮನ್, ಅಮೇರಿಕಾ ಮುಂತಾದ ಸ್ಥಳಗಳಲ್ಲಿ ಸಂಗ್ರಹಲ್ಪಟ್ಟಿವೆ.

ಇವರು ತೈಲವರ್ಣ, ಜಲವರ್ಣ, ಅಕ್ರಾಲಿಕ ಗ್ಲಾಸ್ ಪೇಂಟ್, ಆಯಿಲ್ ಪೇಸ್ಟಲ್, ಡ್ರೈಪೇಸ್ಟಲ್ಸ್, ಪ್ಯೂಜಿಕಲರ್, ಪ್ರಿಂಟಿಂಗ್ ಇಂಕ್ಸ್, ಚಾರ್ಕೊಲ್, ಹೀಗೆ ಎಲ್ಲ ಮಾಧ್ಯಮದಲ್ಲಿ ಚಿತ್ರ ರಚನೆ ಮಾಡಿದ್ದಾರೆ. ಕೋಲಾಜ, ಗ್ಲಾಸ್ ಪೇಂಟಿಂಗ್, ಪೆನ್ಸಿಲ್ ಆಯಿಲ್ ಕಲರ್ ಪೇಪರ್, ಕ್ಯಾನ್ವಾಸ್, ಹ್ಯಾಂಡ್ ಮೇಡ್ ಪೇಪರ್, ನಾರ್ವೆ ಸ್ಕಾಂಟ್ ಪೇಪರಗಳಲ್ಲಿ ಕಲಾಕೃತಿ ರಚನೆ ಮಾಡಿದ್ದಾರೆ. ಇವರ ಕೋಲಾಜ ಕೃತಿಗಳ ವಿಭಿನ್ನ ಮಾಧ್ಯಮ ಮತ್ತು ವಿಶೇಷವಾದ ಅರ್ಥ

ಕೊಡುವಂತಿರುತ್ತವೆ. ಇವರಿಗೆ ಭಾವಚಿತ್ರ ರಚನೆ ಮಾಡುವಲ್ಲಿ ಹೆಚ್ಚು ಆಸಕ್ತಿ ಅದರಲ್ಲೂ ರಂಗೋಲಿಯಿಂದ ಅನೇಕ ಭಾವಚಿತ್ರಗಳನ್ನು ರಚಿಸಿದ್ದಾರೆ.

ಇವರ ಸೃಜನಾತ್ಮಕ ಕಲಾಕೃತಿಗಳನ್ನು ಎಲ್ಲ ಮಾಧ್ಯಮದಲ್ಲಿ ರಚಿಸಿದ್ದಾರೆ. ಪೆನ್‌ನಲ್ಲಿ ರಚಿಸಿದ ಇವರ ಕೃತಿಗಳು ಎಡ್ವರ್ಡ್‌ಮಂಕ್‌ನ ಚೀತ್ಕಾರ ಚಿತ್ರವನ್ನು ಹೋಲುತ್ತವೆ. ರೇಖೆಗಳು ಗಾಳಿಯಲ್ಲಿ ತೇಲುತ್ತಿರುವಂತೆ ಬಾಸವಾಗುತ್ತವೆ. ಇವರ ಚಿತ್ರಗಳಲ್ಲಿ ಸಾಮಾಜಿಕ ಘೋಷಣೆಗಳ ಧೋರಣೆಯನ್ನು ಇಟ್ಟುಕೊಂಡಿರುವುದು ಹೆಚ್ಚಾಗಿ ಕಂಡುಬರುವುದು ಕಲಾಕೃತಿಗಳನ್ನು ನೈಜತೆಯಿಂದ ಕೂಡಿಕೊಂಡಿರುವಂತೆ ಕಲಾಕೃತಿಗಳಿಗೆ ಮಹತ್ವ ಕೊಡುತ್ತ ಬಂದಿದ್ದಾರಾದರೂ ಅಮೂರ್ತ ಚಿತ್ರಗಳನ್ನು ಹೆಚ್ಚಾಗಿ ರಚಿಸುತ್ತಿದ್ದಾರೆ. ಅಮೂರ್ತ ಚಿತ್ರಗಳು ಹೆಚ್ಚಾಗಿ ಮುಖಭಾವದ ಚಿತ್ರಗಳಾಗಿವೆ. ಉದ್ದನೆಯ ಮೂಗು ಅರೆತೆರೆದ ಬಾಯಿ ನೋಡಲು ಸಹಜವಾಗಿ ತೋರದಿರಬಹುದು. ಅವುಗಳ ಉದ್ದೇಶ ಮನುಷ್ಯನ ವಿವಿಧ ಭಾವಗಳನ್ನು ತೋರುವುದು ಆಗಿದೆ.

ಇವರ ಚಿತ್ರದಲ್ಲಿರುವ ವಿಶೇಷತೆ ಏನೆಂದರೆ ಹೊಸತನ ಹುಡುಕುವುದು ಹೊಸತು ಮಾಡುವುದು ಹೊಸತನದಲ್ಲಿ ಏನಿದೇ, ಹೊಸತನ ಎಂದರೆ ಸೃಜನಾತ್ಮಕ. ಈ ಹೊಸತನವನ್ನು ಹುಡುಕುತ್ತಾ ಹೊಸ ಹೊಸ ತಂತ್ರಗಾರಿಕೆಸಿಗುತ್ತೆಂಬ ಈ ನಿಶ್ಚಿತ ಗುರಿಯನ್ನು ಇಟ್ಟುಕೊಂಡು ಇವರು ಕಲಾಕೃತಿ ರಚನೆಯಲ್ಲಿ ತಮ್ಮನ್ನು ನಿರಂತರವಾಗಿ ತೊಡಗಿಸಿಕೊಂಡಿದ್ದಾರೆ.

ಮೈಸೂರು ದಸರಾ ಪ್ರದರ್ಶನದಲ್ಲಿ ದ್ವಿತೀಯ ಬಹುಮಾನ ಪಡೆದಿದ್ದಾರೆ. ೧೯೬೯ ಮೈಸೂರು ದಸರಾದಲ್ಲಿ ಸತತವಾಗಿ ಮೂರು ವರ್ಷ ರಂಗೋಲಿಗೆ ಪ್ರಥಮ ಬಹುಮಾನ ೧೯೬೯, ೭೦, ೭೧, ಕರ್ನಾಟಕ ವಿಶ್ವವಿದ್ಯಾಲಯದ ಪ್ರದರ್ಶನದಲ್ಲಿ ಪ್ರಥಮ ಬಹುಮಾನ ರೋಟ್ರ್ಯಾಕ್ಸ್, ಧಾರವಾಡ, ೧೯೮೩ರಲ್ಲಿ ದ್ವಿತೀಯ ಬಹುಮಾನ ಬೆಲ್ಲದ ಕೃಷಿ ಪ್ರತಿಷಾವಿನದಿಂದ ಉತ್ತಮ ಕಲಾಶಿಕ್ಷಕ ಪ್ರಶಸ್ತಿ, ೧೯೯೩ರಲ್ಲಿ ಕರ್ನಾಟಕ ಜಿಲ್ಲಾಮಟ್ಟದ ಉತ್ತಮ ಶಿಕ್ಷಕ ಪ್ರಶಸ್ತಿ, ೧೯೯೪ರಲ್ಲಿ ರೋಟರಿ ಕ್ಲಬ್‌ನಲ್ಲಿ ಸನ್ಮಾನ, ೧೯೯೪ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ವಾರ್ಷಿಕ ಕಲಾವಿದ ಪ್ರಶಸ್ತಿ, ೧೯೯೫ರಲ್ಲಿ ಕರ್ನಾಟಕ ಸರಕಾರದಿಂದ ರಾಜ್ಯೋತ್ಸವ ಪ್ರಶಸ್ತಿ, ೨೦೦೭ರಲ್ಲಿ ಕಲಾಗುರು ಡಿವಿಹಾಲಭಾವಿ ಪ್ರಶಸ್ತಿ, ೨೦೧೦ರಲ್ಲಿ ಬೆಂಗಳೂರಿನ ಚಿತ್ರಕಲಾ ಪರಿಷತ್ತ್‌ದಲ್ಲಿ ನಡೆದ ೨೦೧೩ರ ೧೦ನೇ ಚಿತ್ರಸಂತೆಯಲ್ಲಿ ಉತ್ತಮ ಕಲಾಶಿಕ್ಷಕ ಮತ್ತು ಕಲಾವಿದ ಪ್ರಶಸ್ತಿಗಳನ್ನು ಸಹ ಪಡೆದಿದ್ದಾರೆ.

೨೦೦೩ರಲ್ಲಿ ನಾಡೋಜ ಆರ್.ಎಂ.ಹಡಪದ ಅವರ ಪ್ರಶಸ್ತಿ ಸಹ ಪಡೆದಿದ್ದಾರೆ. ಪ್ರಸ್ತುತ ಇವರು ಕರ್ನಾಟಕ ಲಲಿತಕಲಾ ಅಕಾಡೆಮಿಯ ಸದಸ್ಯರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಚಿತ್ರಮನೆ ಎಂಬ ಸ್ವಂತ ಕಲಾಗ್ಯಾಲರಿಯನ್ನು ಪ್ರಾರಂಭಿಸಿದ್ದಾರೆ.

**೯. ಶ್ರೀ ಎಸ್. ಬಿ. ಚೆರಳಿ**

ಶ್ರೀ ಶಿವಪುತ್ರಪ್ಪ ಅವರು ೧೦.೦೩.೧೯೪೪, ಖಾನಾಪೂರದಲ್ಲಿ ಜನಿಸಿದರು. ಪ್ರಾಥಮಿಕ ಶಿಕ್ಷಣವನ್ನು ಸ್ವಗ್ರಾಮದಲ್ಲಿ, ಪ್ರೌಢಶಿಕ್ಷಣವನ್ನು ಯಮಕನ ಮರಡಿಯಲ್ಲಿ ಮುಗಿಸಿದರು. ೯ನೆಯ ತರಗತಿಯಲ್ಲಿರುವಾಗ ಹೈಯರ್ ಪರೀಕ್ಷೆಯನ್ನು ಪ್ರಥಮ ದರ್ಜೆಯಲ್ಲಿ ಪಾಸಾದರು. ೧೯೬೪ರಲ್ಲಿ ಪಿ.ಯು.ಸಿ. ಮುಗಿಸಿದರು. ೧೯೬೫ರಲ್ಲಿ ಡಿ.ಟಿ.ಸಿ. ಕೋರ್ಸನ್ನು ಹಾಲಭಾವಿ ಸ್ಕೂಲ್ ಆಫ್ ಆರ್ಟ್ಸ್‌ನಲ್ಲಿ ಪಡೆದರು. ಡಿ.ಟಿ.ಸಿ., ಡಿ.ಎಂ.ಸಿ., ಎ.ಎಂ.ಸಿ. ಎಲಿಮೆಂಟರಿ ಪೇಂಟಿಂಗ್ ಶಿಕ್ಷಣವನ್ನು ಪಡೆದುಕೊಂಡರು. ಧಾರವಾಡದ ಭಾರತೀಯ ಕಲಾಕೇಂದ್ರದಲ್ಲಿ ಜಿ.ಡಿ. ಪೇಂಟಿಂಗ್ ಮತ್ತು ಕ್ಲೇ ಮಾಡಲಿಂಗ್ ಡಿಪ್ಲೊಮಾ ಪಡೆದರು. ೧೯೬೬ರಲ್ಲಿ ಧಾರಾಡದ ಸೇಂಟ್ ಜೋಸೆಫ್ ಹೈ ಸ್ಕೂಲ್‌ನಲ್ಲಿ ಚಿತ್ರಕಲೆ ಮತ್ತು ಫೋಟೋಗ್ರಾಫಿ ಶಿಕ್ಷಕರೆಂದು ನೇಮಕಗೊಂಡರು.

ಇವರು ಕಲಾಶಿಕ್ಷಕರಾಗಿ ಶಾಲೆಯಲ್ಲಿ ಅನೇಕ ಕಲಾಚಟುವಟಿಕೆಗಳನ್ನು ಹಮ್ಮಿಕೊಂಡು ತಮ್ಮ ಚಿತ್ರಕಲೆ ಮತ್ತು ಕ್ರಾಫ್ಟ್ ವಿಷಯವನ್ನು ಆಸಕ್ತಿಯಿಂದ ಕಲಿಸುತ್ತಿದ್ದರು. ಮಕ್ಕಳಿಗೆ ಪ್ರತಿ ವರ್ಷ ಲೋಯರ್ ಮತ್ತು ಹೈಯರ್ ಗ್ರೇಡ್ ಪರೀಕ್ಷೆ ಕಟ್ಟಿಸಿ, ಅವರಿಗೆ ಸರಿಯಾದ ಮಾರ್ಗದರ್ಶನ ನೀಡಿ ಉತ್ತಮ ಫಲಿತಾಂಶ ಬರುವಂತೆ ಪಾಠ ಮಾಡುತ್ತಿದ್ದರು. ಧಾರವಾಡದ ಹಾಲಭಾವಿ ಸ್ಕೂಲ್ ಆರ್ಟ್ಸ್, ಭಾರತೀಯ ಕಲಾಕೇಂದ್ರ, ಸರಕಾರಿ ಚಿತ್ರಕಲಾ ಶಾಲೆಗಳಲ್ಲಿ ನಡೆಯುವ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಕಲೆಯಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಗಮನಿಸುತ್ತಿದ್ದರಲ್ಲದೇ ತಮ್ಮ ಕಲಾಶಿಕ್ಷಣದಲ್ಲಿ ಅವುಗಳ ಹೊಸತನ ಅಳವಡಿಸಿ ಶಿಕ್ಷಣ ನೀಡುತ್ತಿದ್ದರು. ಆರ್ಟ್ಸ್‌ಗ್ಯಾಲರಿಗಳಲ್ಲಿ ನಡೆಯುತ್ತಿದ್ದ ಅನೇಕ ಚಿತ್ರಕಲಾ ಪ್ರದರ್ಶನಗಳನ್ನು ವೀಕ್ಷಿಸಲು ವಿದ್ಯಾರ್ಥಿಗಳನ್ನು ಕರೆತಂದು ತೋರಿಸಿ, ಅವುಗಳ ವಿಶ್ಲೇಷಣೆ ನೀಡಿ ಮಕ್ಕಳ ಕಲಾಪ್ರತಿಭೆಯ ವಿಕಸನಕ್ಕೆ ಹೊಸ ಮೆರಗು ನೀಡುತ್ತಿದ್ದರು. ಇವರು ಏಕವ್ಯಕ್ತಿ ಕಲಾಪ್ರದರ್ಶನಗಳನ್ನು ಮಾಡಿದ್ದಾರೆ. ಮತ್ತು ಸಮೂಹ ಕಲಾಪ್ರದರ್ಶನಗಳಲ್ಲಿಯೂ ಭಾಗವಹಿಸಿದ್ದಾರೆ. ಗಂಗಾಂಬಿಕಾ ಕಲಾಶಾಲೆ, ಜೇಮ್ಸ್ ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಡೈರೆಕ್ಟರಾಗಿ ಕೆಲಸ ಮಾಡಿದ್ದಾರೆ. ಅನೇಕ ಸಂಘ, ಸಂಸ್ಥೆಗಳಲ್ಲಿ ಸದಸ್ಯರಾಗಿಯು ಕಾರ್ಯ ಮಾಡಿದ್ದಾರೆ. ಹಾಲಭಾವಿ ಸ್ಕೂಲ್ ಆಫ್ ಆರ್ಟ್ಸ್‌ನ ಆಡಳಿತ ಮಂಡಳಿಯ ಸದಸ್ಯರಾಗಿದ್ದಾರೆ.

ಇವರು ವಿಶೇಷವಾಗಿ ಪೌರಾಣಿಕ ಮತ್ತು ಸ್ವಾತಂತ್ರ್ಯ ಹೋರಾಟಗಾರರ ಕಲಾಕೃತಿಗಳನ್ನು ರಚಿಸಿದ್ದಾರೆ. ಈ ಕೃತಿಗಳನ್ನು ನೋಡಿದರೆ ಅವರಿಗಿರುವ ದೇಶ ಪ್ರೇಮ ಮತ್ತು ಆಧ್ಯಾತ್ಮಕದ ಭಾವವನ್ನು ತಿಳಿಸುತ್ತವೆ. ಇವರು ಆಲದ ಎಲೆಯ ಮೇಲೆ ವಿಭಿನ್ನ ಮಾದರಿಯ ಕಲಾಕೃತಿಗಳನ್ನು ರಚಿಸುತ್ತಾರೆ. ಹೋರಾಟಗಾರರು ನಾಟ್ಯ ಮಾಡುತ್ತಿರುವ ಮಹಿಳೆ, ರಾಧಾ, ಕೃಷ್ಣ, ಬಾಲಾ ಗಂಗಾಧರ

ತಿಲಕ, ರವೀಂದ್ರನಾಥ ಟಾಗೋರ, ಮಹಾತ್ಮ ಗಾಂಧೀಜಿ ಈ ಕಲಾಕೃತಿಗಳು ಮುಖ್ಯವಾಗಿವೆ. ಶ್ರೀ. ಎಸ್. ಬಿ. ಜೆರಳಿಯವರು ಕಲಾವಿದರಾಗಿ, ಕಲಾಶಿಕ್ಷಕರಾಗಿ ಕಲಾಕ್ಷೇತ್ರಕ್ಕೆ ಉತ್ತಮ ಕೊಡುಗೆ ನೀಡಿದ್ದಾರೆ.

**೧೦. ಆರ್ಯ ಆಚಾರ್ಯ**

ಈ ಕಲಾವಿದರು ೧೯೪೫ ಡಿಸೆಂಬರ್ ೦೭ರಂದು ಉಡುಪಿಯಲ್ಲಿ ಜನಿಸಿದ್ದಾರೆ. ಇವರು ಸಂಸ್ಕೃತ ಎಂ.ಎ., ಹಿಂದಿರತ್ನ, ಫಿಲ್ಮ್ ಕೋರ್ಸ್, ಫಿಲ್ಮ್ ಇನ್‌ಸ್ಟಿಟ್ಯೂಟ್, ಪೂಣೆಯಲ್ಲಿ ಅಧ್ಯಯನ ಮಾಡಿದರು. ೧೯೭೧ ಹುಬ್ಬಳ್ಳಿ, ೧೯೭೩ ಮುಂಬೈ, ೧೯೭೬ ಬೆಂಗಳೂರು, ೧೯೩- ೯೭ ಜರ್ಮನಿ, ೧೯೯೪-೯೫, ೯೮ ಇಟಲಿ, ೨೦೦೨ ನೆದರ್ಲ್ಯಾಂಡ್, ಲಂಡನ್ ಮೊದಲಾದ ಕಡೆ ಏಕವ್ಯಕ್ತಿ ಕಲಾಪ್ರದರ್ಶನ ಮಾಡಿದ್ದಾರೆ. ೧೯೯೫ರಲ್ಲಿ ಬೆರ್ಗಾಮೋ ಇಟಲಿಯಲ್ಲಿ ನಡೆದ ಕಲಾಪ್ರದರ್ಶನದ ಕುರಿತು ದೂರದರ್ಶನದಲ್ಲಿ ಇವರನ್ನು ಸಂದರ್ಶನ ಮಾಡಲಾಯಿತು.

**೧೧. ಸುರೇಶ ಡಿ. ಹಾಲಭಾವಿ**

೨೦.೧೧.೧೯೪೬ರಲ್ಲಿ ಧಾರವಾಡದಲ್ಲಿ ಜನಿಸಿದರು, ಕಮರ್ಷಿಯಲ್ ಆರ್ಟ್ ಡಿಪ್ಲೊಮಾ ಮತ್ತು ಫೋಟೋಗ್ರಾಫಿ ಮುಂಬಯಿ ಪೇಂಟಿಂಗ್ ಡಿಪ್ಲೊಮಾ ಮತ್ತು ಆರ್ಟ್ ಮಾಸ್ಟರ್ ಪದವಿಗಳನ್ನು ಪಡೆದಿದ್ದಾರೆ. ತಂದೆಯವರಾದ ಡಿ.ವಿ.ಹಾಲಭಾವಿಯವರಿಂದಲೇ ಕಲಾ ಶಿಕ್ಷಣವನ್ನು ಪಡೆದರು. ಹಾಲಭಾವಿ ಸ್ಕೂಲ್ ಆಫ್ ಆರ್ಟ್ ಧಾರವಾಡದಲ್ಲಿ ಉಪನ್ಯಾಸಕರೆಂದು ೧೯೭೦ ರಿಂದ ೧೯೭೭ರವರೆಗೆ ಕಾರ್ಯನಿರ್ವಹಿಸಿದರು. ೧೯೮೦ ರಿಂದ ೨೦೦೪ರವರೆಗೆ ಪ್ರಾಚಾರ್ಯರಾಗಿ ಸೇವೆಸಲ್ಲಿಸಿ ನಿವೃತ್ತಿ ಪಡೆದರು. ದಿಲ್ಲಿಯ ಡೈರೆಕ್ಟರೇಟ್ ಆಫ್ ಅಡವರ್ಟೈಸಿಂಗ್ ಅಂಡ್ ವಿಜುವಲ್ ಪಬ್ಲಿಸಿಟಿಯಲ್ಲಿ ಕಲಾವಿದರಾಗಿ ಮತ್ತು ಮುಂಬಯಿ ಇಂಡಿಯನ ಎಕ್ಸ್‌ಪ್ರೆಸ್‌ನಲ್ಲಿ ಪತ್ರಿಕೆಯಲ್ಲಿ ಕಲಾವಿದರಾಗಿಯು ಚಿತ್ರರಚನೆ ಮಾಡುತ್ತಿದ್ದರು.

ತಮಿಳುನಾಡಿನ ರಾಮನಾಥಪುರದ ಅರಮನೆಯ ಭಿತ್ತಿಚಿತ್ರಗಳ ಸಂರಕ್ಷಣೆಯ ಕಾರ್ಯದಲ್ಲಿ ಭಾಗವಹಿಸಿದ್ದಾರೆ. ರಾಜ್ಯ ಸರ್ಕಾರದ ಶಿಕ್ಷಣ ಇಲಾಖೆಯ ಕಮರ್ಷಿಯಲ್ ಆರ್ಟ್ ಕೋರ್ಸ್‌ನ ಉಪನ್ಯಾಸಕರ ಕೈಪಿಡಿಯ ತಯಾರಿಕೆ ಶಿಬಿರದ ಸಂಪನ್ಮೂಲ ವ್ಯಕ್ತಿಯಾಗಿ ಉನ್ನತ ಚಿತ್ರಕಲಾ ಶಿಕ್ಷಕರ ಪ್ರಶ್ನೆ ಪತ್ರಿಕೆಯ ತಯಾರಿಕೆಗೆ ಹಾಗೂ ಪರೀಕ್ಷಕರಾಗಿ, ಪಿಎಚ್.ಡಿ, ಎಂ.ಫಿಲ್ ಮಹಾಪ್ರಬಂಧಗಳಿಗೆ ಮೌಲ್ಯಮಾಪಕರಾಗಿ ಕಾರ್ಯ ನಿರ್ವಹಿಸಿದ್ದಾರೆ. ಕರ್ನಾಟಕ ಲಲಿತಕಲಾ ಅಕಾಡೆಮಿಯ ಸದಸ್ಯ ವಿಶ್ವವಿದ್ಯಾಲಯಗಳಲ್ಲಿ ಕಲಾವಿದರ ನೇಮಕಾತಿ ಸಮಿತಿಗಳ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

ಇವರು ಹೆಚ್ಚಾಗಿ ನಿಸರ್ಗ ಚಿತ್ರಣ ಮತ್ತು ಭಾವಚಿತ್ರಗಳನ್ನು ರಚಿಸುತ್ತಾರೆ. ಮನುಷ್ಯನಿಗೆ ಮುಖ್ಯವಾಗಿ ಬೇಕಾಗಿರುವುದು ಮನಸ್ಸಿನ ನೆಮ್ಮದಿ ಅದಕೋಸ್ಕರ ಅವರಿಗೆ ಇಷ್ಟವಾದ ಸ್ಥಳಗಳನ್ನು ಹುಡುಕಿಕೊಂಡು ಹೋಗುತ್ತಾರೆ. ಇಲ್ಲಿಯೂ ಕೂಡ ಮಹಿಳೆ ಮತ್ತು ಪುರುಷ ಇಬ್ಬರು ಒಂದು ನದಿಯ ದಂಡೆಯ ಹಡಗಿನಲ್ಲಿ ಕುಳಿತುಕೊಂಡು ಯಾವುದರ ಪರಿವೆ ಇಲ್ಲದೆ ತಮ್ಮ ಲೋಕದಲ್ಲಿ ತೇಲುತ್ತಿದ್ದಾರೆ. ರಮ್ಯವಾದ ಪರಿಸರದ ಭೂ ದೃಶ್ಯ ಅತ್ಯಂತ ಮನೋಹರವಾಗಿದೆ. ಈ ಕೃತಿಯಲ್ಲಿ ನೀಲಿ, ಕೆಂಪು, ಹಳದಿ, ಬಿಳಿ ವರ್ಣಗಳನ್ನು ಬಳಸಿದ್ದಾರೆ. ನೆರಳು ಬೆಳಕಿನ ಸಂಯೋಜನೆಯು ಚೆನ್ನಾಗಿ ಮೂಡಿ ಬಂದಿದೆ.

ಕಲೆ, ಕಲಾವಿದರು ಮತ್ತು ಕಲಾಕೃತಿಗಳ ಕುರಿತು ಲೇಖನಗಳನ್ನು ಬರೆದಿದ್ದಾರೆ. ಕರ್ನಾಟಕ ವಿದ್ಯಾವರ್ಧಕ ಸಂಘಕ್ಕೆ ಡಿ.ವಿ.ಹಾಲಭಾವಿ ಮತ್ತು ಎಂ.ಎ.ಚೆಟ್ಟಿಯವರ ಜೀವನ ಮತ್ತು ಕಲಾಕೃತಿ ಕುರಿತ ಲೇಖನ ಬರೆದಿದ್ದಾರೆ. ಮಹಿಳಾ ವಿಶ್ವವಿದ್ಯಾಲಯ ವಿಜಾಪುರಕ್ಕೆ ಅನ್ನುನಾಯ್ಕು, ರೇಖಾರಾವ್ ಮತ್ತು ವಿಮಲಾ ಶೀಲವಂತ, ಟಿ.ಪಿ.ಅಕ್ಕಿ, ಬಿ.ಕೆ.ಹಿರೇಮಠ, ಜಂಬುಕೇಶ್ವರ ಇವರ ಜೀವನ ಮತ್ತು ಸಾಧನೆಗಳನ್ನು ಕುರಿತು ಬರೆದಿದ್ದಾರೆ. ಲಾಯನೆಸ್ ಕ್ಲಬ್ ಧಾರವಾಡ, ವಿಜಯ ಚಿತ್ರಕಲಾ ಮಹಾವಿದ್ಯಾಲಯ ಇಳಕಲ್, ವಿಜಯಕಲಾಮಂದಿರ ಗದಗ, ಧಾರವಾಡ ಉತ್ಸವ–೨೦೧೧, ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿ–೨೦೦೯, ಬೆಂಗಳೂರು ಕರ್ನಾಟಕ ಚಿತ್ರಕಲಾ ಪರಿಷತ್ತಿನ ಚಿತ್ರಸಂತೆ ೨೦೧೩ರಲ್ಲಿ ಜೀವಮಾನ ಸಾಧಕ ಪ್ರಶಸ್ತಿ ನೀಡಿ ಗೌರವಿಸಲಾಗಿದೆ.

ಇವರು ಕೆ.ಎಲ್.ಇ.ಸೊಸೈಟಿ ಬೆಳಗಾವಿಯ ಕರ್ನಾಟಕ ವಿದ್ಯಾವರ್ಧಕ ಸಂಘ, ಗಾಂಧಿ ಶಾಂತಿ ಪ್ರತಿಷಾವಿನ ಕೇಂದ್ರ ಧಾರವಾಡದ ಸದಸ್ಯರಾಗಿ ಕಾರ್ಯನಿರ್ವಹಿಸಿದ್ದಾರೆ. ಸಮೂಹ ಪ್ರದರ್ಶನಗಳು ಕಲಾಶಿಬಿರಗಳಲ್ಲಿ ವಿಚಾರ ಸಂಕಿರಣ ಪ್ರಾತ್ಯಕ್ಷಿಕೆಗಳಲ್ಲಿ ಭಾಗವಹಿಸಿದ್ದಾರೆ. ಆಕಾಶವಾಣಿ ಧಾರವಾಡದಲ್ಲಿ ಕಲೆ ಹಾಗೂ ಕಲಾವಿದರ ಕುರಿತು ಭಾಷಣ ಮತ್ತು ಸಂಭಾಷಣೆಗಳಲ್ಲಿಭಾಗವಹಿಸಿದ್ದಾರೆ. ಕಲಾವಿದ ಎಂ.ಆರ್.ಬಾಳೀಕಾಯಿ ಕಲೆ ಹಾಗೂ ಬದುಕು ಕುರಿತು ಪುಸ್ತಕ ಬರೆದಿದ್ದಾರೆ. ದಕ್ಷಿಣ ಆಫ್ರಿಕಾದ ಡರ್ಬಾನ್‌ಗೆ ಭಾರತ ಸರಕಾರದಿಂದ ೧೯೯೭ರಲ್ಲಿ ಭಾರತ ಸ್ವಾತಂತ್ರ್ಯೋತ್ಸವದ ಸುವರ್ಣಮಹೋತ್ಸವದ ಅಂಗವಾಗಿ ಭಾರತೀಯ ಸಮಕಾಲೀನ ಕಲೆ ಕುರಿತು ಉಪನ್ಯಾಸ ಮಂಡಿಸಿರುತ್ತಾರೆ. ಪ್ರಸುತ್ತ ಇವರು ಮೈಸೂರಿನ ಕಾವಾ ಕಾಲೇಜಿನ ಡೀನ್ ಆಗಿ ಕಾರ್ಯನಿರ್ವಹಿಸುತ್ತಿದ್ದಾರೆ.

### ೧೨. ಶ್ರೀ ಸಿ. ಎಲ್. ಕೋಲಕಾರ

ಶ್ರೀ ಸಿ. ಎಲ್. ಕೋಲಕಾರ ೦೨.೧೨.೧೯೪೭ರಲ್ಲಿ ಬೆಳಗಾವಿ ಜಿಇಲ್ಲೆಯ ಖಾನಾಪೂರ ತಾಲೂಕಿನ ಬೀಡಿ ಗ್ರಾಮದಲ್ಲಿ ಜನಿಸಿದರು. ಪ್ರಾಥಮಿಕ ಶಿಕ್ಷಣ ಬೀಡಿ ಗ್ರಾಮದಲ್ಲಿ, ಪ್ರೌಢ ಶಿಕ್ಷಣ

ನಂದಗಡದ ಮಹಾತ್ಮ ಗಾಂಧೀ ಹೈಸ್ಕೂಲ್‌ನಲ್ಲಿ ಪೂರೈಸಿದ್ದಾರೆ. ನಾಟಕಗಳಲ್ಲಿ ಪಾತ್ರಮಾಡುವುದು, ಚಿತ್ರ ಬಿಡಿಸುವುದು, ಇವರ ಪ್ರಮುಖ ಹವ್ಯಾಸವಾಗಿತ್ತು. ಇವರು ಬೆಳಗಾವಿಯ ಗವರ್ನಮೆಂಟ್ ಪಾಲಿಟೆಕ್ನಿಕಲ್‌ನಲ್ಲಿ ಸಿವಿಲ್ ಇಂಜಿನಿಯರಿಂಗ್ ಡಿಪ್ಲೊಮಾ ಓದುತ್ತಿದ್ದರು. ಕರ್ನಾಟಕದ ಪ್ರಮುಖ ಕಲಾವಿದರಾದ ಶ್ರೀ ಕುಲಕರ್ಣಿಯವರ ಹತ್ತಿರ ಹವ್ಯಾಸಿ ಚಿತ್ರಕಲೆಯನ್ನು ಕಲಿಯುತ್ತಿದ್ದರು. ಈ ಚಿತ್ರಕೆಲಯ ಗೀಳಿನಿಂದ ಡಿಪ್ಲೊಮಾ ಬಿಟ್ಟು ಧಾರವಾಡದ "ಸ್ಕೂಲ್ ಆಫ್ ಆರ್ಟ್"ನಲ್ಲಿ ಡಿ.ಟಿ.ಸಿ. ಕೋರ್ಸ್‌ಗೆ ಸೇರಿದರು. ಇದರ ಜೊತೆಗೆ ಕಮರ್ಷಿಯಲ್ ಆರ್ಟ್ ಸಹ ಪೂರೈಸಿಕೊಂಡರು.

ಇವರು ಅಡ್ವಾನ್ಸ್ ಪೇಂಟಿಂಗ್ ವರ್ಗದ ಹತ್ತು ಹಲವಾರು ಚಿತ್ರಪ್ರದರ್ಶನಗಳಲ್ಲಿ ಭಾಗವಹಿಸಿದ್ದರು. ಗಾಂಧಿ ಶಾಂತಿ ಪ್ರತಿಷ್ಠನ ಕೇಂದ್ರದಲ್ಲಿ ಗಾಂಧೀಜಿ ಹುಟ್ಟಿದ ಹಬ್ಬಕ್ಕೆ ಇವರು ರಂಗೋಲಿ ರಚಿಸಿದರು. ಜೊತೆಗೆ ಹುಬ್ಬಳ್ಳಿಯ ಮಾಡೆಲ್ ಹೈಸ್ಕೂಲ್‌ನಲ್ಲಿ ಅವಶ್ಯಕತೆಯ ಮೇರೆಗೆ ಹೋಗಿ ಆಗಿನ ಶಿಕ್ಷಣ ಮಂತ್ರಿಯಾದ ಶ್ರೀಮಾನ್ ಎಮ್. ಎನ್. ಕೆ. ಸೋಗಿಯವರ ಭಾವಚಿತ್ರ ಹಾಗೂ ಹೈಸ್ಕೂಲ್‌ನ ಚೇರ್‌ಮೇನ್‌ರ ಭಾವಚಿತ್ರಗಳನ್ನು ರಂಗೋಲಿಯಲ್ಲಿ ಬಿಡಿಸಿದರು. ಇವರು ಕೆ.ಇ. ಬೋರ್ಡ್‌ನ ಹೈಸ್ಕೂಲಿಗೆ ಅರೇಕಾಲಿಕ ಚಿತ್ರಕಲಾ ಶಿಕ್ಷಕರಾಗಿ ನೇಮಕಗೊಂಡರು. ಪ್ರತಿ ದಿನ ಹೊಸ ವಿಷಯ ಹುಡುಕಿ ಅದಕ್ಕೆ ತಕ್ಕ ಚಿತ್ರ ರಚಿಸಿ ಅದನ್ನು ಒಂದಡೆ ಲುಕ್ಕ ಅಂಡ್ ಲರ್ನ ಎಂಬ ಶೀರ್ಷಿಕೆಯಡಿ ಪ್ರದರ್ಶಿಸುತ್ತಿದ್ದರು.

ಇವು ಕರ್ನಾಟಕ ಹೈಸ್ಕೂಲ್‌ನ ಮುಖ್ಯಸ್ಥರು ಸ್ವತಂತ್ರ ಹೋರಾಟಗಾರ ಕೆ. ಈ. ಜೋಶಿಯವರ ಗಮನಕ್ಕೆ ಬಂದು ಹುಬ್ಬಳ್ಳಿಯ ಪಾಲಿಟೆಕ್ನಿಕಲ್‌ನಲ್ಲಿ ನಡೆದ ೧೩ನೇ ಸ್ಕೌಟ್ ಮತ್ತು ಗೈಡ್ಸ್ ರ್‍ಯಾಲಿಯಲ್ಲಿ ಭಾಗವಹಿಸಲು ಕಾರಣವಾಯಿತು. ಅಲ್ಲಿ ಜೋಷಿಯವರ ನೇತೃತ್ವದಲ್ಲಿ ಸರ್ ಬ್ಯಾಡನ್ ಪಾವೆಲ್ಲ ಮತ್ತು ಲೇಡಿ ಬ್ಯಾಡನ್ ಪಾವೆಲ್ಲರ ಜೀವನ ಚರಿತ್ರೆಗೆ ಸಂಬಂಧಪಟ್ಟ ಚಿತ್ರಗಳನ್ನು ತಯಾರಿಸಿದರು ಹಾಗೂ ರಂಗೋಲಿ ಹಾಕಿ ಎಲ್ಲರ ಗಮನ ಸೆಳೆದರು. ನಂತರ ಇವರು ಟಿ.ಬಿ. ಡ್ಯಾಮ್‌ದ ಸರ್ಕಾರಿ ಹೈಸ್ಕೂಲ್‌ನಲ್ಲಿ ಚಿತ್ರಕಲಾ ಶಿಕ್ಷಕರೆಂದು ನೇಮಕಗೊಂಡರು. ಎ.ಎಂ.ಜಿ.ಡಿ. ಪರೀಕ್ಷೆಗಳನ್ನು ಕಟ್ಟಿ ಉಚ್ಚ ಶ್ರೇಣಿಯಲ್ಲಿ ತೇರ್ಗಡೆಯಾದರು. ನಂತರ ಇವರು ನರಗುಂದದ ಹೈಸ್ಕೂಲ್‌ಗೆ ವರ್ಗವಾಗಿ ಬಂದರು. ಇಲ್ಲಿ ಲೋಯರ್, ಹೈಯರ್ ಗ್ರೇಡ್ ಚಿತ್ರಕಲಾ ಪರೀಕ್ಷೆಗಳ ಪರೀಕ್ಷಾ ಮುಖ್ಯ ಅಧೀಕ್ಷಕರಾಗಿ ಸೇವೆ ಸಲ್ಲಿಸಿದರು.

೧೯೮೨ರಲ್ಲಿ ಧಾರವಾಡದ ಸರಕಾರಿ ಚಿತ್ರಕಲಾ ಮಹಾವಿದ್ಯಾಲಯಕ್ಕೆ ಉಪನ್ಯಾಸಕರಾಗಿ ನೇಮಕಗೊಂಡರು. ೧೯೮೪ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ವತಿಯಿಂದ ಗದಗದ ವಿಜಯ ಕಲಾಮಂದಿರದಲ್ಲಿ ಸರಕಾರಿ ಚಿತ್ರಕಲಾ ಮಹಾವಿದ್ಯಾಲಯದ ೪ ಜನ ಉಪನ್ಯಾಸಕರ ಗುಂಪು ಕಲಾಪ್ರದರ್ಶನದಲ್ಲಿ ಭಾಗವಹಿಸಿದರು. ೧೯೯೩ರಲ್ಲಿ "ವರ್ಣಮೇಳ" ಧಾರವಾಡದ

ಕಲಾವಿದರು ಸೇರಿ ಕಲಾಶಿಬಿರದಲ್ಲಿ ಭಾಗವಹಿಸಿದ್ದರು. ೧೯೯೪ರಲ್ಲಿ ಧಾರವಾಡದ ಕಲಾವಿದರ ನಗರ ಕಲಾವಿದರು ಎಂಬ ಕಲಾಶಿಬಿರದಲ್ಲಿ ಭಾಗವಹಿಸಿ ಕಲಾಕೃತಿಗಳನ್ನು ರಚಿಸಿದ್ದಾರೆ. ೨೦೦೬ ಮತ್ತು ೨೦೦೭ರಲ್ಲಿ ಧಾರವಾಡ ಉತ್ಸವದಲ್ಲಿ ಚಿತ್ರರಚಿಸಿದ್ದಾರೆ. ಕಲಾಶಿಕ್ಷಕರಾಗಿ, ಕಲಾವಿದರಾಗಿ ಕಲಾಕ್ಷೇತ್ರಕ್ಕೆ ತಮ್ಮ ಕಲಾಕೃತಿಗಳ ಮೂಲಕ ಉತ್ತಮ ಕೊಡುಗೆ ನೀಡಿದ್ದಾರೆ.

**೧೩. ಶ್ರೀ ಸುರೇಶ ಕುಲಕರ್ಣಿ**

ಶ್ರೀ ಸುರೇಶ ಕುಲಕರ್ಣಿ ಅವರು ೨೫.೦೫.೧೯೪೮, ಬನ್ನಿಕೊಪ್ಪದಲ್ಲಿ ಜನಿಸಿದರು. ಲೋವರ್ ಗ್ರೇಡ್, ಹೈಯರ್ ಗ್ರೇಡ್ ಪರೀಕ್ಷೆಗಳನ್ನು ಉನ್ನತ ಶ್ರೇಣಿಯಲ್ಲಿ ಪಾಸಾದರು. ಇವರು ಗದುಗಿನ ವಿಜಯ ಕಲಾಮಂದಿರದಲ್ಲಿ ೧೯೬೬ರಲ್ಲಿ ಡ್ರಾಯಿಂಗ್ ಟೀಚರ್ ಕೋರ್ಸನ್ನು ರಾಜ್ಯಕ್ಕೆ ಪ್ರಥಮ ರ‍್ಯಾಂಕ್‌ನಲ್ಲಿ ಪಾಸಾದರು. ೧೯೭೪ರಲ್ಲಿ ಆರ್ಟ್ ಮಾಸ್ಟರ್, ೧೯೭೫ರಲ್ಲಿ ಜೆ.ಡಿ. ಆರ್ಟನ್ನು ಧಾರವಾಡದ ಭಾರತೀಯ ಕಲಾಕ್ಷೇಂದ್ರದಲ್ಲಿ ಉಚ್ಚ ಶ್ರೇಣಿಯಲ್ಲಿ ಪಾಸಾದರು. ೧೯೬೯ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದಲ್ಲಿ ಬಿ.ಎಸ್ಸಿ. ಪದವಿಗೆ ಪ್ರವೇಶ ಪಡೆದರು. ೧೯೭೦ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಚಿತ್ರಕಲಾ ಪ್ರದರ್ಶನದಲ್ಲಿ ಪ್ರಥಮ ಬಹುಮಾನ ಪಡೆದಿದ್ದಾರೆ. ಅಲ್ಲಿಯೇ "ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನ"ವನ್ನು ಏರ್ಪಡಿಸಿ ದ.ರಾ. ಬೇಂದ್ರೆಯವರು ಉದ್ಘಾಟಿಸಿ ಇವರ ಚಿತ್ರಗಳನ್ನು ನೋಡಿ ಅದ್ಭುತವಾದ ಚಿತ್ರಗಳು ಎಂದು ಬಣ್ಣಿಸಿದರು.

೧೯೭೬ರಲ್ಲಿ ಕೆ.ಇ. ಬೋರ್ಡ್‌ನ ಸಂಸ್ಥೆಯಲ್ಲಿ ಶಿಕ್ಷಕರಾಗಿ ತಮ್ಮ ಸೇವೆಯನ್ನು ಆರಂಭಿಸಿದರು. ೧೯೯೧ ರಿಂದ ಕೆ. ಇ. ಬೋರ್ಡಿನ ಕನ್ನಡ ಉಚ್ಚ ಪ್ರಾಥಮಿಕ ಶಾಲೆ ಸವದತ್ತಿ ರಸ್ತೆ ಧಾರವಾಡದಲ್ಲಿ ಮುಖ್ಯೋಪಾಧ್ಯಪಕರಾಗಿ ಸೇವೆ ಸಲ್ಲಿಸಿದ್ದಾರೆ. ಪುನಃ ೧೯೯೭ರಲ್ಲಿ ಕರ್ನಾಟಕ ಮಾಧ್ಯಮಿಕ ಶಾಲೆಗೆ ವರ್ಗಾವಣೆಗೊಂಡರು. ತಮ್ಮ ಕಲಾಸೇವೆಯನ್ನು ಮುಂದುವರೆಸಿಕೊಂಡು ಬಂದರು. ಇವರು ಚಿತ್ರಕಲೆಯಲ್ಲಿ "ನ್ಯಾಶನಲ್ ಮ್ಯೂಜಿಯಂ' ಮಾಡಬೇಕೆಂದು ಗುರಿಯಾಗಿಸಿಕೊಂಡಿದ್ದರು. ಮಕ್ಕಳಿಂದ ಚಿತ್ರಕಲಾ ಪ್ರದರ್ಶನಗಳನ್ನು ಮಾಡಿಸುತ್ತಿದ್ದರು.

ಇವರು ಹಲವು ಮಾಧ್ಯಮದಲ್ಲಿ ಕಲಾಕೃತಿ ರಚನೆ ಮಾಡಿದ್ದಾರೆ. ಪೆನ್ಸಿಲ್, ಪೆನ್, ಚುಕ್ಕೆ ಚಿತ್ರಗಳು ವೈವಿಧ್ಯ ರಂಗೋಲಿಗಳು, ಜಲವರ್ಣ, ತೈಲವರ್ಣ ಆಧುನಿಕ ಶಿಲ್ಪ ಚಿತ್ರಗಳು, ವ್ಯಕ್ತಿಚಿತ್ರ, ಮುಖಪುಟ, ಕಂಪ್ಯೂಟರ್ ಚಿತ್ರಗಳು ಹೀಗೆ ಹೊಸ ಹೊಸ ಪ್ರಯೋಗಗಳನ್ನು ಮಾಡಿದ್ದಾರೆ. ಇವರ ಕಲಾಕೃತಿಗಳನ್ನು ಕೆಲವು ವಿಭಿನ್ನ ಮಾಧ್ಯಮದ ಶೈಲಿಗಳನ್ನು ಅನುಸರಿಸಿದ್ದಾರೆ. ಚಿತ್ರಗಳಲ್ಲಿ ಜಾನಪದ ಅಂಶಗಳು, ಸೌಂದರ್ಯ ಸೂಕ್ಷ್ಮಭಾವನೆಗಳು, ರೇಖೆಗಳ ಗುಣಲಕ್ಷಣಗಳು ಇವು ಅವರ ಕಲಾ ಕೌಶಲ್ಯದ ಒಂದು ಶೈಲಿಯಾಗಿವೆ. ಇವರು ತಮ್ಮದೇ ವಿಶಿಷ್ಟ ಶೈಲಿಯಿಂದ ಕಲಾಕೃತಿ ರಚನೆ ಮಾಡುತ್ತಾರೆ.

ಇವರು ಹದಿನಾಲ್ಕು ಬಾರಿ "ಒನ್ ಮ್ಯಾನ್ ಶೋ"ವನ್ನು ಮಾಡಿದ್ದಾರೆ. ಚಿತ್ರಕಲಾ ಶಿಬಿರ, ಪ್ರಾತ್ಯಕ್ಷೀಕೆ, ಉಪನ್ಯಾಸ ಹೀಗೆ ಅನೇಕ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದಾರೆ. ೧೯೭೧ರಲ್ಲಿ ಸೂಕ್ಷ್ಮ ಚಿತ್ರಗಾರ ಎಂದು ಡಾ. ದ. ರಾ. ಬೇಂದ್ರೆಯರಿಂದ ಸನ್ಮಾನಿತರಾಗಿದ್ದಾರೆ. ೧೯೯೨ರಲ್ಲಿ ಆದರ್ಶ ಗುರು ಎಂದು ರಾಜ್ಯ ಪ್ರಶಸ್ತಿ ಪೂಜ್ಯ ಶ್ರೀ ಸಾಯಿಬಾಬಾ ಅವರಿಂದ ಸ್ವೀಕರಿಸಿದ್ದಾರೆ. ೧೯೯೨ರಲ್ಲಿ ಶಿಕ್ಷಣದ ಧೀಮಂತರು ಹುಬ್ಬಳ್ಳಿ-ಧಾರವಾಡ ಮಹಾನಗರ ಸಭೆಯಿಂದ ಸತ್ಕರಿಸಲಾಗಿದೆ. ೧೯೯೫ರಲ್ಲಿ ಜಿಲ್ಲೆಯ ಅತ್ಯುತ್ತಮ ಶಿಕ್ಷಕ ಬೆಲ್ಲದ ಪ್ರಶಸ್ತಿ ಪಡೆದಿದ್ದಾರೆ. ಮತ್ತು ಅನೇಕ ಪುಸ್ತಕಗಳಿಗೆ ಚಿತ್ರಗಳನ್ನು ರಚಿಸಿದ್ದಾರೆ. ೨೦೦೮ರಲ್ಲಿ ಶಿಲ್ಪಕಲಾ ಅಕಾಡೆಮಿ, ಬೆಂಗಳೂರ ಅವರು ಇವರ ಶಿಲ್ಪವನ್ನು ಆಯ್ಕೆ ಮಾಡಿದರು. "ಧಾರವಾಡ ಜಿಲ್ಲಾ ದರ್ಶನ"ದಲ್ಲಿ ದಿಂದ ಕೃತಿ ರಚನೆಯನ್ನು ಮಾಡಿದ್ದಾರೆ.

**೧೪. ಶ್ರೀ ಭರತ ಕುಮಾರ**

ಶ್ರೀ ಭರತ ಕುಮಾರರವರು ೧೮.೦೮.೧೯೪೮, ಧಾರವಾಡದಲ್ಲಿ ಜನಿಸಿದರು. ಇವರು ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣವನ್ನು ಧಾರವಾಡದ ಕೆಇ.ಬೋರ್ಡ್ ಸ್ಕೂಲ್‌ನಲ್ಲಿ ಮುಗಿಸಿದರು. ೧೯೭೮ರಲ್ಲಿ ಕಲಾ ಪ್ರಥಮ, ಹೈಯರ್ ಆರ್ಟ್ ಪರೀಕ್ಷೆಯಲ್ಲಿ ಪ್ರಥಮ ರ್‍ಯಾಂಕ್ ಪಡೆದರು. ಕಲಾ ಪ್ರೌಢ ಆರ್ಟ್ ಪರೀಕ್ಷೆ ೧೯೮೦ರಲ್ಲಿ ಪೂರೈಸಿದ್ದರು. ಬಾಸೆನ್ ಮಿಶನ್ ಟ್ರೇನಿಂಗ್ ಕಾಲೇಜ್‌ನಲ್ಲಿ ಟಿ.ಸಿ.ಎಚ್. ಜೊತೆಗೆ ಹಿಂದಿ ಅಭ್ಯಾಸವನ್ನು ಮಾಡಿದರು. ನಂತರ ಇವರು ಚಿತ್ರಕಲೆಯಲ್ಲಿ ಆಸಕ್ತಿ ಇದ್ದುದರಿಂದ ಹಾಲಭಾವಿ ಸ್ಕೂಲ್ ಆಫ್ ಆರ್ಟ್‌ನಲ್ಲಿ ಡಿ.ಟಿ.ಸಿ ಅಭ್ಯಾಸ ಪ್ರಾರಂಭಿಸಿದರು. ಇವರು ಡಿ.ವಿ. ಹಾಲಭಾವಿಯವರ ಮಾರ್ಗದರ್ಶನದಲ್ಲಿ ಕಲಾಭ್ಯಾಸವನ್ನು ಮಾಡಿದ್ದಾರೆ.

ಇವರು ಛಾಯಾಚಿತ್ರಕಲೆಯನ್ನು ಸಹ ಕರಗತ ಮಾಡಿಕೊಂಡಿದ್ದಾರೆ. ಮೂರು ಸಾವಿರಕ್ಕಿಂತಲೂ ಹೆಚ್ಚು ಛಾಯಾಚಿತ್ರಗಳನ್ನು ಸಂಗ್ರಹಿಸಿದ್ದಾರೆ. ೧೯೮೦ರಲ್ಲಿ ಮಿತ್ರರ ಸಹಾಯದಿಂದ ರೇನ್ ಬೋ ಆರ್ಟ್ಸ್ ಕೌನ್ಸಿಲ್ ಸ್ಥಾಪನೆ ಮಾಡಿ ಅದರ ಅಧ್ಯಕ್ಷ ಸ್ಥಾನವನ್ನು ವಹಿಸಿಕೊಂಡು ಕಲಾತ್ಮಕ ಚಟುವಟಿಕೆಗಳನ್ನು ಕೈಗೊಂಡರು. ಕಲೆಗಳಿಗೆ ಪ್ರೋತ್ಸಾಹ ನೀಡುವುದು, ಕಲಾವಿದರನ್ನು ಬೆಳಕಿಗೆ ತರುವುದು, ಕಲಾ ಉಪನ್ಯಾಸಗಳು, ಕಲಾಶಿಬಿರಗಳು, ಕಲೆಗೆ ಸಂಬಂಧಿಸಿದ ವಿಷಯಗಳ ಕುರಿತು ಚರ್ಚಿಸುವುದು, ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನ, ಗುಂಪು ಕಲಾವಿದರ ಪ್ರದರ್ಶನ ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮೂಲಕ ಕಲಾಕ್ಷೇತ್ರಕ್ಕೆ ಕೊಡುಗೆಯನ್ನು ನೀಡಿದ್ದಾರೆ. ೧೯೮೫ ರೇನ್ ಬೋ ಆರ್ಟ್ಸ್ ಕೌನ್ಸಿಲ್‌ನಿಂದ ಉತ್ತರ ಕರ್ನಾಟಕದಲ್ಲಿಯೇ ಪ್ರಪ್ರಥಮ ಬಾರಿಗೆ ರಾಜ್ಯಮಟ್ಟದ ಚಿತ್ರಕಲಾ ಪ್ರದರ್ಶನವನ್ನು ಏರ್ಪಡಿಸಿದರು. ೧೯೯೫ರಲ್ಲಿ ರಾಷ್ಟ್ರೀಯ ಕಲಾಮೇಳದಲ್ಲಿ

ಅಂತರ್ ರಾಜ್ಯ ಸಮೂಹ ಕಲಾಪ್ರದರ್ಶನ ಏರ್ಪಡಿಸಿದ್ದು, ೧೯೯೯ರಲ್ಲಿ ಬೆಂಗಳೂರಿನ ಆರ್ಟ್‌ಗ್ಯಾಲರಿಯಲ್ಲಿ ಚಿತ್ರ ಮತ್ತು ಶಿಲ್ಪಕಲಾ ಪ್ರದರ್ಶನವನ್ನು ಹಮ್ಮಿಕೊಂಡಿದ್ದರು. ಇವರು ಬೆಂಕಿ ಪಟ್ಟಣ, ಅಂಚೆ ಚೀಟಿ, ಪ್ರಾಚೀನ ನಾಣ್ಯಗಳನ್ನು ಸಹ ಸಂಗ್ರಹಿಸಿ ಪ್ರದರ್ಶನ ಮಾಡುತ್ತಾರೆ. ಸುಮಾರು ३೦೦೦ಕ್ಕಿಂತಲೂ ಹೆಚ್ಚು ಸ್ಟಾಂಪ್‌ಗಳ ಸಂಗ್ರಹವನ್ನು ಮಾಡಿದ್ದಾರೆ. ೧೯೮೦ ಹಾಗು ೧೯೮೧ರಲ್ಲಿ ಧಾರವಾಡದ ಚಿತ್ರಕಲಾ ಮಹಾವಿದ್ಯಾಲಯದಲ್ಲಿ ಕಲಾಪ್ರದರ್ಶನ ಮಾಡಿದ್ದಾರೆ.

೧೯೮೫ರಲ್ಲಿ ಬೆಂಗಳೂರಿನ ವಿಶ್ವೇಶ್ವರಯ್ಯಾ ಮ್ಯೂಜಿಯಂನಲ್ಲಿ ಏರ್ಪಡಿಸಲಾದ ಟೆಲಿಸ್ಕೋಪ್ ತಯಾರಿಕಾ ಕಾರ್ಯಾಗಾರದಲ್ಲಿ ಭಾಗವಹಿಸಿ ೮ x ೬ ಅಡಿ ಅಳತೆಯ ಟೆಲಿಸ್ಕೋಪ್ ತಯಾರಿಸಿದರು. ೧೯೮೬ರಲ್ಲಿ ಹ್ಯಾಲಿ ಧೂಮಕೇತುಗಳ ಸುಮಾರು ೮೫ ಚಿತ್ರಗಳ ಮಾಲಿಕೆಯನ್ನು ತಯಾರಿಸಿ ಪ್ರದರ್ಶನ ಮಾಡಿದರು. ೨೦೦೩ರಲ್ಲಿ ಜನ ಮೆಚ್ಚಿದ ಶಿಕ್ಷಕ ಗುರುವಂದನ ಪ್ರಶಸ್ತಿ, ರಾಮಕೃಷ್ಣ ವಿವೇಕಾನಂದ ಆಶ್ರಮದಿಂದ ಗೌರವ ಪುರಸ್ಕಾರಗಳನ್ನು ಪಡೆದಿದ್ದಾರೆ. ಉತ್ತಮ ಚಿತ್ರಕಲಾವಿದರಾಗಿ ಅನೇಕ ಕಲಾ ಮಾಧ್ಯಮಗಳಲ್ಲಿ ಚಿತ್ರ ರಚಿಸಿ ಜನ ಮೆಚ್ಚುಗೆ ಗಳಿಸಿದ್ದಾರೆ.

**೧೫. ಗಾಯತ್ರಿ ಎಂ. ದೇಸಾಯಿ**

ಕಲಾವಿದೆ ಶ್ರೀಮತಿ ಗಾಯತ್ರಿ ಎಂ. ದೇಸಾಯಿಯವರು ೧೯ನೇ ಫೆಬ್ರವರಿ ೧೯೫೩ರಂದು ಜನಿಸಿದರು. ಇವರು ಚಿತ್ರಕಲೆಯಲ್ಲಿ ಎ.ಎಂ., ಜಿಡಿ ಪದವಿಯನ್ನು ಪಡೆದಿದ್ದಾರೆ. ಅಧ್ಯಯನ ಜೊತೆ ೧೯೮೦, ೮೧, ೯೧ರಲ್ಲಿ ನಿರಂತರವಾಗಿ ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನವನ್ನು ಮಾಡಿದ್ದಾರೆ. ೧೯೮೩, ೮೬, ೯೦, ೯೯ರಲ್ಲಿ, ಧಾರವಾಡ, ಹುಬ್ಬಳ್ಳಿ, ಪಣಜಿ, ಗೋವಾ, ಬೆಳಗಾವಿ, ಬೆಂಗಳೂರುಗಳಲ್ಲಿ ಸಮೂಹ ಕಲಾಪ್ರದರ್ಶನ ಮಾಡಿದ್ದಾರೆ.

ಅಲ್ಲದೇ ೧೯೮೩ರಲ್ಲಿ ರಾಜ್ಯ ಪ್ರಶಸ್ತಿ ಧಾರವಾಡ, ೧೯೯೦ರಲ್ಲಿ ಮೈಸೂರು ದಸರಾ ಪ್ರಶಸ್ತಿ, ೧೯೯೨ರಲ್ಲಿ ಶಾರದಾ ಶಾಲ್ಮಲಾ ಪ್ರಶಸ್ತಿ, ೧೯೯೮ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿಗಳು ಇವರಿಗೆ ಸಂದಿವೆ. ಪ್ರಸ್ತುತ ಧಾರವಾಡ ಹಾಲಭಾವಿ ಸ್ಕೂಲ್ ಆಫ್ ಆರ್ಟ್‌ನ ಪ್ರಾಚಾರ್ಯರಾಗಿ ಕಾರ್ಯನಿರ್ವಹಿಸುತ್ತಿರುವ ಕ್ರಿಯಾಶೀಲ, ಮಹಿಳಾ ಕಲಾವಿದೆ ಗಾಯಿತ್ರಿ ದೇಸಾಯಿ ಎನ್ನಬಹುದು. ಇವರು ೧೯೯೦ರಲ್ಲಿ ಪತಿಮದು ದೇಸಾಯಿಯೊಂದಿಗೆ ಕಲಾಮಂಡಲ ಎನ್ನುವ ಸಂಸ್ಥೆಯನ್ನು ಪ್ರಾರಂಭಿಸಿದರು. ಕಾರ್ಯದರ್ಶಿಯಾಗಿ ಗಾಯಿತ್ರಿಯುವರು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ೧೯೯೩ರಲ್ಲಿ ಈ ಸಂಸ್ಥೆಯ ಕರ್ನಾಟಕದಲ್ಲಿ ಮೊದಲ ಬಾರಿಗೆ ಮಹಿಳಾ ಕಲಾಶಿಬಿರವನ್ನು ಆಯೋಜಿಸಿತು.

ರಾಷ್ಟ್ರೀಯ ಅಂತರರಾಷ್ಟ್ರೀಯ ಕಲಾ ಪ್ರವೃತ್ತಿ ಸಂವೇದನೆಗಳನ್ನು ಹಮ್ಮಿಕೊಳ್ಳುವ ಹಾಗೂ ಜನತೆಗೆ ಪರಿಚಯಿಸುವುದು ಇದರ ಮೂಲ ಉದ್ದೇಶವಾಗಿದೆ. ಮಕ್ಕಳ ಬೇಸಿಗೆ ಶಿಬಿರ, ಚಿತ್ರ,

ಶಿಲ್ಪ ಪ್ರದರ್ಶನ, ಕಲಾ ಉಪನ್ಯಾಸಗಳನ್ನು ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಡೆಸಿಕೊಂಡು ಹೋಗುತ್ತಿದ್ದಾರೆ.

**೧೬. ಬಿ. ಮಾರುತಿ**

ಶ್ರೀ ಬಿ. ಮಾರುತಿಯವರು ೦೧.೦೬.೧೯೫೪ರಲ್ಲಿ ಹೊಸಪೇಟೆಯಲ್ಲಿ ಜನಿಸಿದರು. ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ಹೊಸಪೇಟೆಯಲ್ಲಿ ಮುಗಿಸಿದರು. ಬಿ. ಎ. ವಿದ್ಯಾಭ್ಯಾಸವನ್ನು ವಿಜಯನಗರ ಕಾಲೇಜಿನಲ್ಲಿ ಪೂರೈಸಿ, ಎಂ.ಎ. ರಾಜ್ಯಶಾಸ್ತ್ರ ಪದವಿಯನ್ನು ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಿಂದ ಪಡೆದರು. ಗುಲಬರ್ಗಾದ ಸರಕಾರಿ ಕಾಲೇಜಿನಲ್ಲಿ ೨ ವರ್ಷ ಉಪನ್ಯಾಸ ವೃತ್ತಿ ಪ್ರಾರಂಭಿಸಿದರು. ಗುಲಬರ್ಗಾದ ವಾತಾವರಣ ಆಕಸ್ಮಿಕವಾಗಿ ಚಿತ್ರಕಲೆಯ ಬಗ್ಗೆ ಹೆಚ್ಚು ಆಸಕ್ತಿ ಮೂಡಲು ಅನುವಾಯಿತು ಎನ್ನುತ್ತಾರೆ. ಸಹಜವಾಗಿ ಹಳ್ಳಿಯ ಜೀವನ, ಹಳ್ಳಿಯ ಪರಿಸರ, ವಾತಾವರಣ ಇವರ ಕಲಾಕೃತಿಯ ಮೂಲಕ ಆಕರವಾಗಿ ರೂಪ ಪಡೆಯ ತೊಡಗಿದ್ದವು. ಸರಕಾರಿ ಮಹಾವಿದ್ಯಾಲಯವೊಂದರಲ್ಲಿ ಉಪನ್ಯಾಸಕರಾಗಿ ಕೆಲವು ವರ್ಷ ಸೇವೆ ಸಲ್ಲಿಸಿದ ನಂತರ ವರ್ಷಗಳಲ್ಲಿ ಅನಿವಾರ್ಯ ಕಾರಣದಿಂದ ಹುದ್ದೆಗೆ ರಾಜಿನಾಮೆ ನೀಡಿ ಕ್ರೀಡಾ ಸಾಮಗ್ರಿಗಳ ವ್ಯಾಪಾರೋಧ್ಯಮಕ್ಕೆ ತಮ್ಮನ್ನು ತೊಡಗಿಸಿಕೊಂಡರು. ವೃತ್ತಿಯಲ್ಲಿ ವ್ಯಾಪಾರೋಧ್ಯಮ ಪ್ರವೃತ್ತಿಯಲ್ಲಿ ಚಿತ್ರಕಲಾವಿದರಾದರು. ಈಗ ತಮ್ಮ ಉದ್ಯಮವನ್ನು ಬದಿಗಿಟ್ಟು ಕಲೆಯಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದಾರೆ.

ವಿವಿಧ ನಗರಗಳಲ್ಲಿ ಏಕವ್ಯಕ್ತಿ, ಸಮೂಹ ಕಲಾಪ್ರದರ್ಶನಗಳಲ್ಲಿ ಭಾಗವಹಿಸಿರುವ ಮಾರುತಿಯವರು ವಿವಿಧ ಸರಣಿ ವಿವಿಧ ಮಾಧ್ಯಮಗಳಲ್ಲಿ ಕಲಾಕೃತಿಗಳನ್ನು ರಚಿಸಿದ್ದಾರೆ. ಇವರ ಕಲಾಕೃತಿಗಳು ನಗರಗಳಲ್ಲಿಯ ಸಂಘ-ಸಂಸ್ಥೆ ಖಾಸಗಿಯವರಲ್ಲಿ ಸಂಗ್ರಹವಾಗಿವೆ. ಜಾನಪದ ಸಂವೇದನೆಯ ಆಳವಾಗಿ ಯೋಚಿಸುವ ವಿವಿಧ ವರ್ಣಗಳಲ್ಲಿ ವ್ಯಕ್ತಪಡಿಸುವ ಭಾವನೆ ಮತ್ತು ವಾಸ್ತವಿಕ ಚಿತ್ರಣ ಈ ಬಗೆಯ ಪ್ರಾಣಿ-ಪಕ್ಷಿ ವರ್ಣ ಸಂಕೇತಗಳು ಗ್ರಾಮೀಣ ನೆಲೆಯ ಕೃಷಿಕನ ಇತ್ಯಾದಿ ಕಲಾಕೃತಿಗಳನ್ನು ರಚಿಸಿದ್ದಾರೆ. ವಿವಿಧ ಶೈಲಿ ಸರಣಿ ಕಲಾಕೃತಿಗಳನ್ನು ರಚಿಸುತ್ತಿರುವ ಮಾರುತಿಯವರು ಹಂಪಿಯ ಕಲಾಕೃತಿಗಳಲ್ಲಿ ಹೆಚ್ಚಿನ ಆಸಕ್ತಿ, ಅನುರಾಗ ಹೊಂದಿದ್ದಾರೆ.

ಇವರು ಅನೇಕ ಕಲಾಪ್ರದರ್ಶನಗಳಲ್ಲಿ ಭಾಗವಹಿಸಿದ್ದಾರೆ. ೧೯೯೪ರಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ ಮತ್ತು ವರ್ಣಮೇಳ ಧಾರವಾಡ, ೧೯೯೫ರಲ್ಲಿ ರಾಷ್ಟ್ರೀಯ ಕಲಾಮೇಳ, ಬೆಂಗಳೂರು ಮತ್ತು ವಿಶ್ವಚೇತನ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಮತ್ತು ಡೈಮಂಡ್ ಜೂಬ್ಲಿ ಸ್ಕೂಲ್ ಆಫ್ ಆರ್ಟ್ಸ್, ಧಾರವಾಡ ಮತ್ತು ಅಲೆಯನ್ಸ್ ಬೆಂಗಳೂರು. ೧೯೯೪ರಲ್ಲಿ ವರ್ಣ ಮೇಳ, ಧಾರವಾಡ, ಹೀಗೆ ಅನೇಕ ಏಕವ್ಯಕ್ತಿ ಮತ್ತು ಸಮೂಹ

ಕಲಾಪ್ರದರ್ಶನಗಳಲ್ಲಿಯೂ ಭಾಗವಹಿಸಿದ್ದಾರೆ. ೧೯೯೮ರಲ್ಲಿ "ದೀಮಂತರು" ರಾಜ್ಯೋತ್ಸವ ಪ್ರಶಸ್ತಿ, ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ, ೨೦೦೩ರಲ್ಲಿ ವಿಶಿಷ್ಟ ವೃತ್ತಿ ಸೇವಾ ಪ್ರಶಸ್ತಿ, ರೋಟರಿ ಕ್ಲಬ್, ಧಾರವಾಡದಿಂದ ಬಂದಿವೆ. ೨೦೦೦ ಧಾರವಾಡದಲ್ಲಿ "ಚಿತ್ತಾರ ಕಲಾ ಬಳಗ"ವನ್ನು ಸ್ಥಾಪನೆ ಮಾಡಿದ್ದಾರೆ.

**೧೭. ಎಂ. ಜಿ. ಬಂಗ್ಲೇವಾಲೆ**

ಎಂ. ಜಿ. ಬಂಗ್ಲೇವಾಲೆ ಇವರು ೧೯೫೪, ರಾಣಿಬೆನ್ನೂರಿನಲ್ಲಿ ಜನಿಸಿದರು. ೧೯೭೪ರಲ್ಲಿ ಗದಗ ವಿಜಯ ಕಲಾಮಂದಿರದಲ್ಲಿ ಕಲಾಶಿಕ್ಷಣವನ್ನು ಪಡೆದುಕೊಂಡರು. ೧೯೮೦ರಲ್ಲಿ ವಿಜಯ ಕಲಾಮಂದಿರ ಗದಗ, ೧೯೮೧ರಲ್ಲಿ ಡಾ. ಮಿಣಜಿಗಿ ಆರ್ಟ್ ಗ್ಯಾಲರಿ, ಹುಬ್ಬಳ್ಳಿ, ೧೯೮೧ರಲ್ಲಿ ಯುವಕಲಾವಿದರ ಜಲವರ್ಣ ಕಲಾಕೃತಿಗಳ ಪ್ರದರ್ಶನ, ೧೯೯೨ರಲ್ಲಿ ನನ್ನ ರೇಖಾಚಿತ್ರಗಳು ಹೀಗೆ ಅನೇಕ ಏಕವ್ಯಕ್ತಿ ಕಲಾಪ್ರದರ್ಶನಗಳನ್ನು ಮಾಡಿದ್ದಾರೆ.

೧೯೭೫ರಲ್ಲಿ ನಾವು ನಾಲ್ವರು ಗದಗ, ೧೯೭೬ರಲ್ಲಿ ಚಿತ್ರಕಲಾ ಶಿಕ್ಷಕರ ಸಂಘದಿಂದ ನಡೆದ ಪ್ರದರ್ಶನ, ೧೯೮೧ರಲ್ಲಿ ಯುತ್ ಸೆಂಟರ್, ಬೆಂಗಳೂರು, ೧೯೮೨ರಿಂದ ೨೬ರವರೆಗೆ ನಡೆದ ಕಲಾ ಮೇಳದ ಪ್ರದರ್ಶನಗಳು, ೨೦೦೭ರಲ್ಲಿ ಧಾರವಾಡ ಉತ್ಸವದ ಹಿರಿಯ ಕಲಾವಿದರ ಪ್ರದರ್ಶನ, ೨೦೦೮ರಲ್ಲಿ ಕಲಾಮಂಡಳ ಧಾರವಾಡ ಹೀಗೆ ಸಮೂಹ ಕಲಾಪ್ರದರ್ಶನದಲ್ಲಿ ಇವರ ಕಲಾಕೃತಿಗಳು ಪ್ರದರ್ಶನ ಕಂಡಿವೆ. ರಾಷ್ಟ್ರೀಯ, ಅಂತರಾಷ್ಟ್ರೀಯ ಕಲಾಪ್ರದರ್ಶನದಲ್ಲಿ ಇವರ ಕಲಾಕೃತಿಗಳು ಪ್ರದರ್ಶನಗೊಂಡಿವೆ.

೨೦೦೫ರಲ್ಲಿ ಹಂಪಿ ಉತ್ಸವ, ೨೦೦೬ರಲ್ಲಿ ಧಾರವಾಡ ಉತ್ಸವ, ೨೦೧೧ರ ವಿಶ್ವಕನ್ನಡ ಸಮ್ಮೇಳನದಲ್ಲಿ ಕಲಾಕೃತಿ ರಚನೆ ಮಾಡಿದ್ದಾರೆ. ಕೇಂದ್ರ ಲಲಿತಕಲಾ ಅಕಾಡೆಮಿ, ದೆಹಲಿ, ವಿಜಯ ಕಲಾ ಸಂಸ್ಥೆ, ಗದಗ, ಮಿಣಜಿಗಿ ಆರ್ಟ್ ಗ್ಯಾಲರಿ, ಹುಬ್ಬಳ್ಳಿ, ಅನಂತ ರೆಸಿಡೆನ್ಸ್ ಹೋಟೆಲ್, ಹುಬ್ಬಳ್ಳಿ, ಬಾಪುಜಿ ಕಲಾ ಸಂಸ್ಥೆ, ತುಮಕೂರು, ಕ.ವಿ.ವಿ. ಹಂಪಿ, ಕ.ವಿ.ವಿ. ಧಾರವಾಡ ಮುಂತಾದ ಸಂಘ-ಸಂಸ್ಥೆಗಳಲ್ಲಿ ಇವರ ಕಲಾಕೃತಿಗಳು ಸಂಗ್ರಹಗೊಂಡಿವೆ.

ಇವರು ಮೊದಲು ಭಾವಚಿತ್ರ, ನಿಸರ್ಗ ಚಿತ್ರ, ಸಂಯೋಜನೆ, ರೇಖಾಚಿತ್ರಗಳನ್ನು ಹೆಚ್ಚಾಗಿ ರಚಿಸುತ್ತಿದ್ದರು. ಇವರು ಅಮೂರ್ತ ಚಿತ್ರಗಳಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡಿದ್ದಾರೆ. ಭೂಮಿ ಎನ್ನುವ ಶೀರ್ಷಿಕೆಯಡಿಯಲ್ಲಿ ೨೦೦ಕ್ಕೂ ಹೆಚ್ಚು ಕಲಾಕೃತಿ ರಚನೆ ಮಾಡಿದ್ದಾರೆ. ನೀಲಿ, ಹಳದಿ, ಹಸಿರು, ಕೆಂಪು ಬಣ್ಣಗಳನ್ನು ಹೆಚ್ಚಾಗಿ ಬಳಸುತ್ತಾರೆ. ಪ್ರಸ್ತುತ ಶ್ರೀ ವಿಜಯ ಮಹಾಂತೇಶ ಲಲಿತಕಲಾ ಮಹಾವಿದ್ಯಾಲಯದಲ್ಲಿ ಉಪನ್ಯಾಸಕರಾಗಿ ಸೇವೆಸಲ್ಲಿಸುತ್ತಿದ್ದಾರೆ.

**೧೮. ಡಿ. ಎಂ. ಬಡಿಗೇರ**

ದೇವೇಂದ್ರ ಎಂ. ಬಡಿಗೇರ ಅವರು ೧೯೫೫ರಲ್ಲಿ ಬಳಗನೂರ ಎಂಬ ಗ್ರಾಮದಲ್ಲಿ ಜನಿಸಿದರು. ಇವರು ಎ.ಎಮ್.ಜಿ.ಡಿ. ಬಿ.ಎಫ್.ಎ. ಎಂ.ವಿ.ಎ ಪದವಿಗಳನ್ನು ಪಡೆದಿದ್ದಾರೆ. ೧೯೯೬ರಲ್ಲಿ ಹುಬ್ಬಳ್ಳಿಯಲ್ಲಿ, ೧೯೮೯, ೧೯೭೮ರಲ್ಲಿ ದೆಹಲಿಯಲ್ಲಿ, ೧೯೫೮ರಲ್ಲಿ ಧಾರವಾಡ ಹಾಗೂ ೧೯೭೬ರಲ್ಲಿ ಕ್ಯಾಸಲ್‌ರಾಕ್ ಮೊದಲಾದ ಕಡೆಗಳಲ್ಲಿ ಇವರ ಏಕವ್ಯಕ್ತಿ ಕಲಾಪ್ರದರ್ಶನಗಳು ನಡೆದಿವೆ. ಸಿ.ಕೆ.ಪಿ.ಬೆಂಗಳೂರು, ದರಬಾರ್ ಹಾಲ್, ಕೊಚ್ಚಿ, ಜೈಪುರ, ಚೆನ್ನೈ, ಮಸ್ಕತ್, ಹುಬ್ಬಳಿ, ಧಾರವಾಡ, ಬಿಜಾಪುರ, ಮುಂಬೈಯಲ್ಲಿ ಎರಡು ಬಾರಿ, ಬೆಂಗಳೂರಿನಲ್ಲಿ ಆರು ಬಾರಿ, ದೆಹಲಿಯಲ್ಲಿ ಐದು ಬಾರಿ ಸಮೂಹ ಕಲಾಪ್ರದರ್ಶನಗಳಲ್ಲಿ ಇವರು ಭಾಗವಹಿಸಿದ್ದಾರೆ.

ಕಲಾವಿದರು ಮೈಸೂರು, ಬೆಂಗಳೂರು, ತಮಿಳುನಾಡು, ದೆಹಲಿ, ಕುಂಬಳಗೋಡ, ಉದಯಪುರ ಮುಂತಾದ ಕಡೆಗಳಲ್ಲಿ ಬುಡಕಟ್ಟುಗಳ ಪರಂಪರೆ ಮತ್ತು ಜೀವನ ಇತಿಹಾಸ ಮತ್ತು ದೃಷ್ಟಿ ಶ್ರವಣ, ಸಹಾಯ ಉಪಕರಣಗಳ ತಯಾರಿಕೆ, ಜನಸಂಖ್ಯೆಯ ಪೋಸ್ಟರ್‌ಗಳ ತಯಾರಿಕೆಯಂತಹ ಅನೇಕ ಕಾರ್ಯಗಾರಗಳಲ್ಲಿ ಭಾಗವಹಿಸಿದ್ದಾರೆ. ದೆಹಲಿ, ಕೊಲ್ಕತ್ತಾ, ಬೆಂಗಳೂರು, ಚೆನ್ನೈ, ಧಾರವಾಡ ಮುಂತಾದ ಕಡೆಗಳಲ್ಲಿ ರಾಷ್ಟ್ರೀಯ ಹಾಗೂ ರಾಜ್ಯದ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಗಳ ಚಿತ್ರೋತ್ಸವ, ಚಿತ್ರಸಂತೆಗಳಂತಹ ಮುಂತಾಧ ಕಲಾಮೇಳಗಳಲ್ಲಿ ಭಾಗವಹಿಸಿದ್ದಾರೆ. ಧಾರವಾಡ ಉತ್ಸವ, ಹಂಪಿ ಉತ್ಸವ, ಎಫ್.ಡಿ.ಎಸ್.ಓ ಜನೋತ್ಸವ ಧಾರವಾಡ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಡೆಸಿದಂತಹ ಅನೇಕ ಕಾವ್ಯ ಕುಂಚೆ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದಾರೆ.

೨೦೦೮ರಲ್ಲಿ ಕಲಾಸಂಗತಿ ಸ್ಕ್ರಿಬ್ಬಲ್ ಹೈದರಾಬಾದ್, ಮೆರಿಟ್ ಪ್ರಶಸ್ತಿ, ೧೯೯೬ರ ಅತ್ಯುತ್ತಮ ಚಿತ್ರಕಲಾ ಶಿಕ್ಷಕ ಪ್ರಶಸ್ತಿ, ೧೯೯೮೯೫ ಮೈಸೂರು ದಸರಾ ಪ್ರದರ್ಶನಗಳು, ೧೯೯೩ ರಾಜ್ಯಮಟ್ಟದ ಚಿತ್ರಕಲಾ ಪ್ರದರ್ಶನ, ವಿಜಾಪುರ ಮೊದಲಾದ ಕಡೆಗಳಲ್ಲಿ ಪ್ರಶಸ್ತಿಗಳನ್ನು ಪಡೆದಿದ್ದಾರೆ. ಇವರು ಒಬ್ಬ ಕ್ರಿಯಾಶೀಲ ಕಲಾವಿದರಾಗಿದ್ದು, ಇವರ ವಿಷಯಾಧಾರಿತ ಕಲಾಕೃತಿಗಳು ಸಾಮಾಜಿಕ ಓರೆಕೋರೆಗಳನ್ನು ನೇರವಾಗಿ ಸಹೃದಯದ ಮನಮುಟ್ಟುವಂತೆ ವೈವಿಧ್ಯತೆಯ ನಡುವೆಯೂ ಅವುಗಳನ್ನು ಒಂದು ಸೂತ್ರದಲ್ಲಿ ನೋಡಬಹುದಾದಂತಹ ವೈಯಕ್ತಿಕ ಛಾಪು ಉಳಿಸಿಕೊಂಡಿವೆ. ನೆರಳು ಬೆಳಕುಗಳ ಸ್ವಚ್ಛಂದತೆ, ದುಂಡುತನವನ್ನು ಆಕರಿಸುವ ಕೃತಿಗಳು ಅಪ್ಪಟ್ಟ ಭ್ರಮೆಯನ್ನುಂಟು ಮಾಡುತ್ತವೆ. ವಿದ್ಯಾರ್ಥಿಗಳಿಗೆ ಉತ್ತಮ ಬೋಧನಾ ಪ್ರವೃತ್ತಿಯನ್ನು ರೂಡಿಸಿಕೊಂಡಿದ್ದು, ಪ್ರತಿಭಾನ್ವಿತ, ಉತ್ತಮ ಕಲಾ ಶಿಕ್ಷಕರಾಗಿದ್ದಾರೆ. ಪ್ರಸ್ತುತ ಇವರು ಸರಕಾರಿ ಚಿತ್ರಕಲಾ ಮಹಾವಿದ್ಯಾಲಯ, ಧಾರವಾಡದಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

**೧೯. ಡಾ. ಎಸ್. ಸಿ. ಪಾಟೀಲ**

ಡಾ. ಎಸ್. ಸಿ. ಪಾಟೀಲರವರು ೧೯೫೫ರಲ್ಲಿ ಗುಲ್ಬರ್ಗಾ ಜಿಲ್ಲೆಯ ಮಾಣಶಿವಣಗಿಯಲ್ಲಿ ಜನಿಸಿದರು. ಎಂ.ವಿ.ಎ., ಎಮ್.ಎ., ಎಮ್.ಈಡಿ, ಎ.ಎಮ್., ಜಿ.ಡಿ.ಆರ್ಟ್ ಇನ್ ಮಾಡೆಲಿಂಗ್ ಶಿಲ್ಪಕಲೆ, ಜಿ.ಡಿ.ಆರ್ಟ್ ಇನ್ ಪೇಯಿಂಟಿಂಗ್, ಡಿಪ್ಲೊಮಾ ಇನ್ ಎಪಿಗ್ರಾಫಿ ಪದವಿಗಳನ್ನು ಪಡೆದುದಲ್ಲದೆ ಕರ್ನಾಟಕದ ಜನಪದ ಚಿತ್ರಕಲೆ ಕುರಿತು ಪಿಎಚ್.ಡಿ ಪದವಿಯನ್ನು ೧೯೯೧ರಲ್ಲಿ ಮತ್ತು ತಮ್ಮ ಎರಡನೆಯ ಪಿಹೆಚ್.ಡಿ ಮಹಾಪ್ರಬಂಧ **A Critical analysis of Art Education at School level in Karnataka state with special reference to Drawing and Painting (ಕರ್ನಾಟಕದ ಮಾಧ್ಯಮಿಕ ಶಾಲಾಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ ಒಂದು ವಿಮರ್ಶಾತ್ಮಕ ಅಧ್ಯಯನ)** ಎಂಬ ವಿಷಯ ಕುರಿತು ಕರ್ನಾಟಕ ವಿಶ್ವವಿದ್ಯಾಲಯದಿಂದ ಚಿನ್ನದ ಪದಕದೊಂದಿಗೆ ಪಡೆದಿದ್ದಾರೆ. ಡಾ. ಎಸ್. ಸಿ. ಪಾಟೀಲರ ಕಲಾಕ್ಷೇತ್ರಕ್ಕೆ ನೀಡಿದ ಕೊಡುಗೆಗಳನ್ನು ಈ ಕೆಳಗಿನಂತೆ ವಿಂಗಡಿಸಿಕೊಂಡು ವಿವರಿಸಲಾಗಿದೆ.

**೧. ಪ್ರಾಧ್ಯಾಪಕರಾಗಿ ಬೋಧನಾಕಾರ್ಯ**

೧೯೮೩ರಿಂದ ತಮ್ಮ ಕಲಾಸೇವೆಯನ್ನು ಪ್ರಾರಂಭಿಸಿದ ಇವರು ಪ್ರಥಮವಾಗಿ ಉಪ್ಪಿನ ಬೆಟಗೇರಿಯಲ್ಲಿ ಉಪನ್ಯಾಸಕರಾಗಿ ೧೯೯೬ರವರೆಗೆ ಅಂದರೆ ಸತತ ೧೪ ವರ್ಷಗಳವರೆಗೆ ತಮ್ಮ ಅಮೂಲ್ಯವಾದ ಸೇವೆಯನ್ನು ಸಲ್ಲಿಸಿದ್ದಾರೆ. ೧೯೯೬-೯೭ರಿಂದ ಕನ್ನಡ ವಿಶ್ವವಿದ್ಯಾಲಯ, ಹಂಪಿಯ ದೃಶ್ಯಕಲಾ ವಿಭಾಗದಲ್ಲಿ ಪ್ರವಾಚಕರಾಗಿ(ರೀಡರ್) ಮತ್ತು ಮುಖ್ಯಸ್ಥರಾಗಿ, ೧೯೯೯ರಿಂದ ಇದೇ ವಿಶ್ವವಿದ್ಯಾಲಯದ ಸ್ನಾತಕೋತ್ತರ ಕೇಂದ್ರವಾದ ಬಾದಾಮಿ, ಬನಶಂಕರಿಯಲ್ಲಿ ವಿಭಾಗದ ಮುಖ್ಯಸ್ಥರಾಗಿ ೨೦೦೮ರವರೆಗೆ ಕಾರ್ಯನಿರ್ವಹಿಸಿ, ೨೦೦೮ರಲ್ಲಿ ಕೇಂದ್ರ ಕಛೇರಿ ಕನ್ನಡ ವಿಶ್ವವಿದ್ಯಾಲಯ, ದೃಶ್ಯಕಲಾ ವಿಭಾಗಕ್ಕೆ ಬಂದರು. ೨೦೦೬ರಿಂದ ಪ್ರಾಧ್ಯಾಪಕರಾಗಿ ವಿಭಾಗದಲ್ಲಿ ಪದವಿ, ಸ್ನಾತಕೋತ್ತರ ಪದವಿ, ಎಂ.ಫಿಲ್ ಮತ್ತು ಪಿಹೆಚ್.ಡಿ ವಿದ್ಯಾರ್ಥಿಗಳಿಗೆ ಬೋಧನೆ, ಮಾರ್ಗದರ್ಶನ ಇತ್ಯಾದಿ ಕಾರ್ಯವನ್ನು ನಿರ್ವಹಿಸಿದ್ದಾರೆ.

**೨. ಸಂಶೋಧಕರಾಗಿ**

ಡಾ. ಎಸ್. ಸಿ. ಪಾಟೀಲರವರು ತಮ್ಮ ಸಂಶೋಧನೆಯನ್ನು ೧೯೮೩ರಿಂದ ಪ್ರಾರಂಭಸಿದ್ದಾರೆ. ಈ ಸಂಶೋಧನೆಯಲ್ಲಿಯೇ ಎರಡು ಮಹತ್ವ ಪಿಹೆಚ್.ಡಿ ಮಹಾಪ್ರಬಂಧಗಳನ್ನು ಸಲ್ಲಿಸಿದರು, ಇವರು ಎ.ಟ.ಸಿ, ಬಿ.ವಿ.ಎ, ಬಿ.ಎಫ್.ಎ., ಬಿ.ವಿ.ಈಡಿ, ಎಂ.ಎಫ್.ಎ., ಎಂ.ವಿ.ಎ., ಎಂ.ಫಿಲ್, ಪಿಹೆಚ್.ಡಿ ವಿದ್ಯಾರ್ಥಿಗಳಿಗೆ ಸಂಶೋಧನಾ ಮಾರ್ಗದರ್ಶಕರಾಗಿ ಹಲವಾರು ಮಹತ್ವದ ಕಲೆಗಳ ಮಹಾಪ್ರಬಂಧಗಳನ್ನು ಹೊರತಂದಿದ್ದಾರೆ.

**೩. ಗ್ರಂಥಕರ್ತರಾಗಿ**

ಸುಮಾರು ೩೦ಕ್ಕೂ ಹೆಚ್ಚು ಸಾಹಿತ್ಯ ಮತ್ತು ಚಿತ್ರಕಲಾ ಗ್ರಂಥಗಳಲ್ಲಿ ಲೇಖಕ ಹಾಗೂ ಸಂಪದಾಕರಾಗಿ ಕಾರ್ಯನಿರ್ವಹಿಸಿದ್ದು, ಉದಾ: ಬಾರೋಕ್ ಕಲೆ, ಕರ್ನಾಟಕದ ಜನಪದ ಚಿತ್ರಕಲೆ, ವರ್ಣಸಂಚಯ, ನಿಜದನೆಲೆ, ವಿ.ಟಿ. ಕಾಳೆ, ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು, ಚಿತ್ರಾಕ್ಷಿ ಮೊದಲಾದ ಕೃತಿಗಳನ್ನು ಪ್ರಕಟಣೆಯನ್ನೂ ಸಹ ಮಾಡಿದ್ದಾರೆ.

**೪. ಕಲಾವಿದರಾಗಿ**

ಒಂದು ಕಲಾಕೃತಿಯನ್ನು ರಚಿಸಬೇಕಾದರೆ ಕಲಾವಿದರ ಮನಸ್ಸು ಹೊಸತನದ ಕುರಿತು ನಡೆದ ವಿಚಾರಗಳನ್ನು ರೇಖೆ, ಬಣ್ಣಗಳ ಮೂಲಕ ಪ್ರತಿ ಹಂತದಲ್ಲೂ ಹೊಸತನ ತಾಜಾತನ ಆಕಾರಗಳನ್ನು ದುಡಿಸಿಕೊಳ್ಳುವ ಶೈಲಿ, ತಂತ್ರ, ನೆರಳು ಬೆಳಕಿನ ಸಂಯೋಜನೆಯಿಂದ ಅನನ್ಯವಾಗಿ ಹೊರಬಂದಿವೆ. ಒಬ್ಬ ಕಲಾವಿದ ತನ್ನ ಶೈಲಿಯಲ್ಲಿ ಕೃತಿ ರಚನೆ ಮಾಡುವಾಗ ಅನೇಕ ಪ್ರಯೋಗಗಳ ಮೂಲಕ ಆ ಶೈಲಿಗೆ ಒಂದು ಅಂತಿಮ ಹಂತ ಕೊಡುತ್ತಾನೆ. ಪಾಟೀಲರು ತಮ್ಮ ಪ್ರತಿ ಕಲಾಕೃತಿಯಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡುತ್ತಾರೆ.

ಕ್ಯಾನ್ವಾಸ್‌ದೊಳಗೆ ಬಣ್ಣಗಳು ಅಲ್ಲಲ್ಲಿ ಕ್ಯಾನ್ವಾಸಿನ ಮೂಲ ಬಿಳಿಬಣ್ಣ ಉಳಿಸಿಕೊಂಡು ಅದಕ್ಕೆ ಸ್ವಲ್ಪ ನೆರಳನ್ನು ನೀಡಿದಾಗ ಅವ್ಯಕ್ತ ಆಕಾರಗಳು ಮೈದಾಳುತ್ತವೆ. ವಿಸ್ಮಯ ಬಣ್ಣಗಳ ಮಿಶ್ರಣ ಉಂಟಾಗುತ್ತದೆ. ಅಲ್ಲಲ್ಲಿ ಕ್ಯಾನ್ವಾಸಿನ ಮೂಲ ಬಿಳಿ ಬಣ್ಣ ಉಳಿಸಿಕೊಂಡು ಅದಕ್ಕೆ ಸ್ವಲ್ಪ ನೆರಳನ್ನು ನೀಡಿದಾಗ ಅವ್ಯಕ್ತ ಆಕಾರಗಳು ಮೂಡುತ್ತವೆ. ನಿಸರ್ಗದಲ್ಲಿ ನೋಡಿದ ಪ್ರಾಣಿ, ಪಕ್ಷಿಗಳು, ಮನುಷ್ಯಾಕೃತಿಗಳು ನಿರ್ಮಾಣವಾಗುತ್ತವೆ. ಈ ತಂತ್ರಗಾರಿಕೆಯಲ್ಲಿ ಅವರು ಕೆಲವು ಕಲಾಕೃತಿಗಳ ಸರಣಿಗಳನ್ನು ಮಾಡಿದ್ದಾರೆ. ಇತ್ತೀಚೆಗೆ ಜಾನಪದ ಮತ್ತು ಬುಡಕಟ್ಟು ಅಂಶಗಳನ್ನು ಹೊಂದಿರುವ ಸರಣಿ ಚಿತ್ರಗಳ ಕಲಾಕೃತಿಗಳನ್ನು ರಚಿಸಿ ಪ್ರದರ್ಶನ ಮಾಡಿದ್ದಾರೆ. ಡಾ. ಎಸ್. ಸಿ. ಪಾಟೀಲರವರು ರಾಜ್ಯ, ರಾಷ್ಟ್ರೀಯ, ಅಂತರಾಷ್ಟ್ರೀಯ ಮಟ್ಟದಲ್ಲಿ ಹೆಸರು ಮಾಡಿದ ಕಲಾವಿದರಾಗಿದ್ದು, ಅಲ್ಲದೇ ತಮ್ಮ ಕಲಾಕೃತಿಗಳು ದೇಶ-ವಿದೇಶಗಳಲ್ಲಿ ಸಂಗ್ರಹಗೊಂಡಿವೆ. ಇವರು ಹಲವಾರು ಏಕವ್ಯಕ್ತಿ ಮತ್ತು ಸಮೂಹ ಕಲಾಪ್ರದರ್ಶನಗಳನ್ನು ಏರ್ಪಡಿಸಿದ್ದಾರೆ. ವಿಶೇಷವಾಗಿ ಪ್ರತಿವರ್ಷ ತಮ್ಮ ಜನ್ಮದಿನದಂದು ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನದ ಸಂಪ್ರದಾಯವನ್ನು ಬೆಳೆಸಿಕೊಂಡು ಬಂದಿದ್ದಾರೆ. ಇವರಿಗೆ ಅನೇಕ ಕಲಾಪ್ರಶಸ್ತಿಗಳು, ಪುರಸ್ಕಾರಗಳು ಸಂದಿವೆ.

**೫. ಆಡಳಿತಾಧಿಕಾರಿಯಾಗಿ**

ಇವರು ೧೯೮೭ರಿಂದ ವಾಸ್ತು, ಶಿಲ್ಪ ಮತ್ತು ಪ್ರತಿಮಾಶಾಸ್ತ್ರ ವಿಭಾಗ, ದೃಶ್ಯಕಲಾ

ವಿಭಾಗ, ಬಾದಾಮಿಯ ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗ ಹಾಗೂ ಸಂಗೀತ ಮತ್ತು ನೃತ್ಯಕಲಾ ವಿಭಾಗದ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸಿದ್ದಾರೆ. ಕರ್ನಾಟಕ ಲಲಿತಕಲಾ ಅಕಾಡೆಮಿಯ ಸದಸ್ಯರಾಗಿ ೩ ವರ್ಷಗಳ ಕಾಲ ಸೇವೆ ಸಲ್ಲಿಸಿದ್ದಾರೆ. ೨೦೦೮ರಿಂದ ೨೦೧೩ರವರೆಗೆ ಕನ್ನಡ ವಿಶ್ವವಿದ್ಯಾಲಯ, ಲಲಿತಕಲಾ ನಿಕಾಯದ ಡೀನ್ ಆಗಿ, ಸಿಂಡಿಕೇಟ್ ಸದಸ್ಯರಾಗಿ, ವಿಶ್ವವಿದ್ಯಾಲಯದ ಅನೇಕ ಸಮಿತಿಗಳ ಅಧ್ಯಕ್ಷ, ಸದಸ್ಯರಾಗಿ ಕಾರ್ಯನಿರ್ವಹಿಸಿದ್ದಾರೆ. ಇವುಗಳಲ್ಲದೇ ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಮಟ್ಟದ ಯು.ಜಿ.ಸಿ. ನ್ಯಾಕ್ ಮತ್ತು ನೆಟ್ ಮೊದಲಾದ ಸಮಿತಿಯ ಸದಸ್ಯರಾಗಿ ಕಾರ್ಯನಿರ್ವಹಿಸಿದ್ದು, ಪ್ರಸ್ತುತ ಇವರು ೨೧.೦೩.೨೦೧೩ರಂದು ಕರ್ನಾಟಕ ಸರ್ಕಾರ ನೂತನವಾಗಿ ಪ್ರಾರಂಭಿಸಲಿರುವ ಕರ್ನಾಟಕ ಲಲಿತಕಲಾ ವಿಶ್ವವಿದ್ಯಾಲಯದ ವಿಶೇಷಾಧಿಕಾರಿಗಳಾಗಿ ನೇಮಕೊಂಡು ಕಾರ್ಯನಿರ್ವಹಿಸುತ್ತಿದ್ದಾರೆ.

**೨೦. ಲತಾರಾಣಿ ವಿ. ಮಲ್ಹಾರ**

ಲತಾರಾಣಿ ವಿ. ಮಲ್ಹಾರ ಅವರು ೧೯೫೬ ಜುಲೈ ೨೬ ರಂದು ದಾಂಡೇಲಿಯಲ್ಲಿ ಜನಿಸಿದರು. ಪ್ರಾಥಮಿಕ ಶಿಕ್ಷಣ, ಮಾಧ್ಯಮಿಕ ಶಿಕ್ಷಣ ಧಾರವಾಡದಲ್ಲಿ ಪಡೆದುಕೊಂಡರು. ಸಂಗೀತ ಹಾಗೂ ನೃತ್ಯ ಕಲೆಗಳಲ್ಲದೆ ಚಿತ್ರಕಲೆಯ ಬಗ್ಗೆ ಸಧಭಿರುಚಿಯನ್ನು ಹೊಂದಿದ್ದರು. ಚಿತ್ರಕಲಾ ಶಿಕ್ಷಣವನ್ನು ೧೯೭೯ರಲ್ಲಿ ಆರ್ಟ್ ಮಾಸ್ಟರ್ ಹಾಗೂ ೧೯೭೮ರಲ್ಲಿ ಡ್ರಾಯಿಂಗ್ ಮತ್ತು ಪೇಂಟಿಂಗ್ ಡಿಪ್ಲೊಮಾವನ್ನು, ೧೯೭೮ರಲ್ಲಿ ಹಿಂದಿ ಪ್ರವೀಣ, ೧೯೭೫ರಲ್ಲಿ ಗಾಂಧರ್ವ ಮಹಾವಿದ್ಯಾಲಯ, ಮುಂಬೈ, ಗದುಗಿನ ಕಲಾಮಂದಿರದಿಂದ ನೃತ್ಯ ವಿಶಾರದ ವ್ಯಾಸಂಗವನ್ನು ಪೂರೈಸಿದರು. ೧೯೮೪ರಲ್ಲಿ ಹುಬ್ಬಳ್ಳಿಯ ಬಾಸೆಲ್ ಮಿಶನ್ ಹೆಣ್ಣು ಮಕ್ಕಳ ಆಂಗ್ಲ ಮಾಧ್ಯಮ ಶಾಲೆಯಲ್ಲಿ ಚಿತ್ರಕಲಾ ಶಿಕ್ಷಕಿಯಾಗಿ ಕಾರ್ಯನಿರ್ವಹಿಸಿದ್ದಾರೆ. ೧೯೮೬ರಲ್ಲಿ ಶ್ರೀ ವಿಜಯ ಮಹಾಂತೇಶ ಲಲಿತಕಲಾ ಮಹಾವಿದ್ಯಾಲಯದಲ್ಲಿ ಉಪನ್ಯಾಸಕರಾಗಿ ಸೇವೆ ಆರಂಭಿಸಿದರು. ೧೯೯೫ರಿಂದ ೧೯೯೮ರವರೆಗೆ ಕರ್ನಾಟಕ ಲಲಿತಕಲಾ ಅಕಾಡೆಮಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ೧೯೯೯ ರಿಂದ ಸಂಗೀತ, ನೃತ್ಯ ಅಕಾಡೆಮಿಯ ಸದಸ್ಯರಾಗಿ ಮೂರು ವರ್ಷ ಸೇವೆಸಲ್ಲಿಸಿದ್ದಾರೆ.

೧೯೯೦ರಲ್ಲಿ ಹಾಗೂ ೨೦೦೦ರ ಮೇದಲ್ಲಿ ಉತ್ತರ ಕರ್ನಾಟಕ ಸಭಾ ಪ್ರಾಂತ್ಯದ ಹಾಗೂ ಜರ್ಮನ್ ದೇಶದ ಸಭೆಯ ಪಾರ್ಟನರ್‌ಶಿಪ್ ಕಮಿಟಿ ಆಯ್ಕೆಯ ಮೇರೆಗೆ ನೃತ್ಯದ ಮೂಲಕ ಸಾಂಸ್ಕೃತಿಕ ವಿನಿಮಯ ಕಾರ್ಯಕ್ರಮಕ್ಕಾಗಿ ಜರ್ಮನ್ ದೇಶಕ್ಕೆ ಭೇಟಿ ಇತ್ತು ಕಾರ್ಯಕ್ರಮವನ್ನು ನೀಡಿದ್ದಾರೆ. ಮಹಾವಿದ್ಯಾಲಯದ ಏಳಿಗೆಗಾಗಿ ಸತತ ಪ್ರಯತ್ನ ಮಾಡಿದ್ದಾರೆ. ಮಹಾವಿದ್ಯಾಲಯದ ಕಟ್ಟಡದ ನೇರವಾಗಿ ದೇಣಿಗೆ ರೂಪದಲ್ಲಿಯೂ ಸಹಿತ ದಾನವನ್ನು ಕೊಟ್ಟಿದ್ದಾರೆ. ೧೯೯೮ರಲ್ಲಿ ಶ್ರೀ. ಪಿ. ಎಸ್. ಹಿರೇಮಠರವರ ನಿವೃತ್ತಿಯ ನಂತರ ಆ ಸ್ಥಾನವನ್ನು ವಹಿಸಿಕೊಂಡು

ಮಹಾವಿದ್ಯಾಲಯದಲ್ಲಿ ಸದಾ ಕ್ರಿಯಾತ್ಮಕ ಚಟುವಟಿಕೆಗಳನ್ನು ನಡೆಸಿಕೊಂಡು ಬಂದಿದ್ದಾರೆ. ೨೦೦೯ರಲ್ಲಿ ಕ.ವಿ.ವಿ. ಹಂಪಿಯಿಂದ ಎಂ.ವಿ.ಎ. ಸ್ನಾತಕೋತ್ತರ ಪದವಿಯನ್ನು ಸಹ ಪಡೆದಿದ್ದಾರೆ.

ಇವರು ಅನೇಕ ಕಲಾಕೃತಿ ರಚನೆ ಮಾಡಿದ್ದಾರೆ. ಕಲಾಶಿಬಿರ, ಕಲಾಪ್ರದರ್ಶನಗಳಲ್ಲಿಯೂ ಭಾಗವಹಿಸಿದ್ದಾರೆ. ಇವರ ಕಲಾಕೃತಿಗಳ ಕುರಿತು ಹೇಳುವುದಾದರೆ ಇವರ ಚಿತ್ರರಚನೆಯಲ್ಲಿ ಯಾವಾಗಲೂ ವೈವಿಧ್ಯತೆ ಸಂಯೋಜನಾ ಚತುರಥೆಯಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ. ರೇಖಾಚಿತ್ರ, ಸ್ಮರಣಚಿತ್ರ, ತೈಲಚಿತ್ರ, ಜಲವರ್ಣ ಹಾಗೂ ಪೆನ್ಸಿಲ್ ನಿಸರ್ಗ ಚಿತ್ರ ಹೀಗೆ ಹಲವು ಮಾಧ್ಯಮದಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡಿದ್ದಾರೆ. ಇವರ ಅಮೂರ್ತ ಚಿತ್ರಗಳನ್ನು ರಚನೆ ಮಾಡುವಲ್ಲಿ ಹೆಚ್ಚು ಆಸಕ್ತಿ ವಹಿಸಿದ್ದು ಕಂಡುಬರುತ್ತದೆ. ದಿಗಂತದಲ್ಲಿ ಹಾರುವ ಹೊಚ್ಚ ಹೊಸ ರೀತಿಯ ಬಣ್ಣದ ಪಟ್ಟಿಕೆಗಳು ನೋಡಲು ಹಕ್ಕಿಯಂತೆ ಕಂಡುಬರುತ್ತವೆ. ಕಲಾವಿದರಾಗಿ, ಪ್ರಾಚಾರ್ಯರಾಗಿ, ಸಂಗೀತ ಮತ್ತು ನೃತ್ಯ ಬಗ್ಗೆ ಅಭಿರುಚಿಯುಳ್ಳವರಾಗಿದ್ದ ಇವರು ಕಲಾಶಾಲೆ ಮತ್ತು ವಿದ್ಯಾರ್ಥಿಗಳಿಗೆ ಉತ್ತಮ ಮಾರ್ಗದರ್ಶಕರಾಗಿದ್ದರು.

**೨೧. ಎನ್. ಎಂ. ದಾಟನಾಳ**

ಶ್ರೀ ಎನ್. ಎಂ. ದಾಟನಾಳ ಅವರು ನವಲಗುಂದ ತಾಲೂಕಿನ ದಾಟನಾಳ ಗ್ರಾಮದಲ್ಲಿ ೦೩.೦೧.೧೯೫೭ರಲ್ಲಿ ಜನಿಸಿದರು. ಪ್ರಾಥಮಿಕ ಶಿಕ್ಷಣವನ್ನು ಕುಷ್ಟಗಿ ತಾಲೂಕಿನ ಹನಮನಹಾಳ ಗ್ರಾಮದಲ್ಲಿ, ಪ್ರೌಢಶಿಕ್ಷಣವನ್ನು ಬೆಲೂರು ಗ್ರಾಮದಲ್ಲಿ ಪಡೆದುಕೊಂಡರು. ವಿಜಯ ಕಲಾಮಂದಿರದಲ್ಲಿ ಡಿ.ಟಿ.ಸಿ. ಚಿತ್ರಕಲಾ ಶಿಕ್ಷಕ ತರಬೇತಿ ಪಡೆದರು. ಮುಂದೆ ಮಾಡಲಿಂಗ್ ಡಿಪ್ಲೊಮಾ ಹಾಗೂ ಎ.ಎಂ. ಜಿ.ಡಿ. ಕಲಾ ಪದವಿ ಪರೀಕ್ಷೆ ಪಾಸಾದರು. ಗದಗಿನ ಮುನ್ಸಿಪಲ್ ಕೌನ್ಸಿಲ್‌ನಲ್ಲಿ ರೇಖಾಕಾರರೆಂದು ಸೇವೆಗೆ ಸೇರಿದರು. ಮಲಪ್ರಭಾ ಅಣೆಕಟ್ಟು ನೀರಾವರಿ ಇಲಾಖೆಯ ರೇಖಾಕಾರರಾಗಿ ಸೇವೆ ಸಲ್ಲಿಸಿದರು. ೧೯೭೪ರಲ್ಲಿ ಉತ್ತರ ಕನ್ನಡ ಜಿಲ್ಲೆಯ ತೇರಗಾಂವ್‌ದ ಸರಕಾರಿ ಪ್ರೌಢ ಶಾಲೆಯಲ್ಲಿ ಚಿತ್ರಕಲಾ ಶಿಕ್ಷಕರಾಗಿ ಸೇವೆಗೆ ಸೇರಿದರು. ೧೯೮೧ರಲ್ಲಿ ಧಾರವಾಡದ ಸರಕಾರಿ ಚಿತ್ರಕಲಾ ಮಹಾವಿದ್ಯಾಲಯಕ್ಕೆ ವರ್ಗವಾಗಿ ಬಂದರು.

ಧಾರವಾಡ ಸರಕಾರಿ ಚಿತ್ರಕಲಾ ಮಹಾವಿದ್ಯಾಲಯಕ್ಕೆ ಬಂದ ಮೇಲೆ ಇಲ್ಲಿ ಎಂ.ಆರ್. ಬಾಳೀಕಾಯಿ, ಐ. ಎಚ್. ಮುಲ್ಲಾ ಇವರೊಂದಿಗೆ ಶಿಕ್ಷಣ ಇಲಾಖೆಯ ಮೇಲಾಧಿಕಾರಿಗಳ ಮನವೊಲಿಸಿ ಡಿ.ಎಂ.ಸಿ. ತರಗತಿಗೆ ಸರಕಾರದ ಅನುಮತಿ ಆದೇಶ ಪಡೆದು ೧೯೮೧ರಿಂದ ಇಲ್ಲಿ ಚಿತ್ರಕಲಾ ಶಿಕ್ಷಕರ ತರಬೇತಿ ಪ್ರಾರಂಭಿಸಿದರು.

ಇವರು ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದಿಂದ ಬಿ.ಎಫ್.ಎ. ಮತ್ತು ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಎಂ.ವಿ.ಎ. ಚಿತ್ರಕಲೆ, ಸ್ನಾತಕೋತ್ತರ ಪದವಿಗಳನ್ನು

ಪಡೆದುಕೊಂಡಿದ್ದಾರೆ. ಇವರ ಅನೇಕ ಕಲಾಪ್ರದರ್ಶನ, ಶಿಬಿರ, ತರಬೇತಿ, ಕಾರ್ಯಾಗಾರಗಳಲ್ಲಿ ಸಕ್ರೀಯವಾಗಿ ಭಾಗವಹಿಸಿದ್ದಾರೆ. ಅನೇಕ ಸಂಘ-ಸಂಸ್ಥೆಗಳಲ್ಲಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಅನೇಕ ಸ್ಥಬ್ದ ಚಿತ್ರಗಳನ್ನು ರಚಿಸುವ ಕಲೆಗಾರಿಕೆ, ಮೂರ್ತಿಶಿಲ್ಪ, ಮುದ್ರಣ ಕಲೆ, ಜಲವರ್ಣ ಮತ್ತು ತೈಲವರ್ಣದಲ್ಲಿ ಅನೇಕ ವೈವಿಧ್ಯಮಯ ಕಲಾಕೃತಿ ರಚಿಸಿದ್ದಾರೆ. ಸರಕಾರಿ ಚಿತ್ರಕಲಾ ಮಹಾವಿದ್ಯಾಲಯದ ಎಲ್ಲ ಕಟ್ಟಡಗಳ ದುರಸ್ತಿ ಕಾರ್ಯ, ನವೀಕರಣ, ಕಂಪ್ಯೂಟರ್ ಘಟಕ, ಎಲ್.ಸಿ.ಡಿ. ಪ್ರೊಜೆಕ್ಟರ್, ವರ್ಗಕೋಣೆಗಳು ಮತ್ತು ನೂತನ ಕಲಾಗ್ಯಾಲರಿ ಕಟ್ಟಡ ಮುಂತಾದ ಭೌತಿಕ ಬೆಳವಣಿಗೆಗಳಲ್ಲಿ ಇವರ ಹೆಚ್ಚಿನ ಪರಿಶ್ರಮ ವಹಿಸಿದ್ದಾರೆ.

**೨೨. ಡಾ.ರೇಣುಕಾ ಮಾರ್ಕಂಡೇಯ**

೧೯೬೦ರಲ್ಲಿ ಗೋಕರ್ಣ ಜನಿಸಿದ ಡಾ. ರೇಣುಕಾ ಮಾರ್ಕಂಡೇಯ ಅವರು ಕಲೆಯ ಮೇಲೆ ಆಸಕ್ತಿ ಹೊಂದಿ ತಮ್ಮ ಉನ್ನತ ಶಿಕ್ಷಣಕ್ಕಾಗಿ ಧಾರವಾಡಕ್ಕೆ ಬಂದು ನೆಲೆಸಿದರು. ೧೯೯೧ರಲ್ಲಿ ಎಂ.ಎ, ೧೯೯೩ ಬಿ.ಎಫ್.ಎ, ೨೦೦೬ ಎಂ.ವಿ.ಎ, ೨೦೧೩ರಲ್ಲಿ ಕರ್ನಾಟಕ ವೈಷ್ಣವ ಪರಂಪರೆಯ ಚಿತ್ರಕಲೆಯ ಕುರಿತು ಮಹಾಪ್ರಬಂಧವನ್ನು ಸಲ್ಲಿಸಿ ಕನ್ನಡ ವಿಶ್ವವಿದ್ಯಾಲಯ, ಹಂಪಿಯಿಂದ ಪಿಎಚ್‌ಡಿ ಪದವಿ ಪಡೆದಿದ್ದಾರೆ.

೧೯೮೩ರಲ್ಲಿ ಲಲಿತಕಲಾ ಅಕಾಡೆಮಿ ಬೆಂಗಳೂರು, ೧೯೯೯ರಲ್ಲಿ ಬಜಾಜ್ ಆರ್ಟ್ ಗ್ಯಾಲರಿ, ಮುಂಬಯಿ, ೨೦೦೦ ಸರಕಾರಿ ಆರ್ಟ್ ಗ್ಯಾಲರಿ, ಧಾರವಾಡದಲ್ಲಿ ಇವರ ಏಕವ್ಯಕ್ತಿ ಕಲಾ ಪ್ರದರ್ಶನ ಮಾಡಿದ್ದಾರೆ. ನೆಟ್‌ವರ್ಕ್ ಮುಂಬೈದವರು ಏರ್ಪಡಿಸಿದ ಅಂತರರಾಷ್ಟ್ರೀಯ ಕಲಾಪ್ರದರ್ಶನದಲ್ಲಿ, ಜರತಾ ಮುಂಬೈದವರು ಏರ್ಪಡಿಸಿದ ಅಂತರರಾಷ್ಟ್ರೀಯ ಕಲಾ ಪ್ರದರ್ಶನದಲ್ಲಿ ಹಾಗೂ ಜಕರ್ತಾ, ಸ್ವಿಜರ್ ಲ್ಯಾಂಡ್‌ಗಳಲ್ಲಿ ಇವರ ಕಲಾಕೃತಿಗಳು ಪ್ರದರ್ಶನಗೊಂಡಿವೆ.

ಸಮೂಹ ಕಲಾಪ್ರದರ್ಶನಗಳು ಮದ್ರಾಸ್ ಬೆಂಗಳೂರು, ದೆಹಲಿ, ಮುಂಬೈಗಳಲ್ಲಿ ಮಾಡಿದ್ದು ಇವರ ಕಲಾಕೃತಿಗಳು ರಾಜ್ಯಲಲಿತಕಲಾ ಅಕಾಡೆಮಿಗೆ ಆರು ಬಾರಿ ಆಯ್ಕೆ ಆಗಿವೆ. ಐಫೆಕ್ಸ್ ದೆಹಲಿ ಮತ್ತು ರಾಜ್ಯ ಅಕಾಡೆಮಿಯವರು ಏರ್ಪಡಿಸಿದ ಸಮಕಾಲೀನ ಕಲಾವಿದರ ಕಲಾ ಪ್ರದರ್ಶನ ಹೈದರಾಬಾದ ಕ್ಯಾಮ್ಲಿನ್ ಚಿತ್ರಕಲಾ ಪ್ರದರ್ಶನ ದಕ್ಷಿಣವಲಯಕ್ಕೆ ೨ ಬಾರಿ, ಮದ್ರಾಸ್ ಲಲಿತಕಲಾ ಅಕಾಡೆಮಿಗೆ ೨ ಬಾರಿ ಹಾಗೂ ಚಿತ್ರ ಯಾತ್ರೆಗೆ ಅಲ್ಲದೆ ರಾಷ್ಟ್ರೀಯ ಮಟ್ಟದ ಚಿತ್ರಕಲಾ ಪ್ರದರ್ಶನಕ್ಕೂ ಇವರ ಕೃತಿಗಳು ಆಯ್ಕೆಯಾಗಿವೆ. ಕೇಂದ್ರ ಲಲಿತಕಲಾ ಅಕಾಡೆಮಿಗೆ ೨ ಬಾರಿ ಆಯ್ಕೆ ಆಗಿವೆ. ರಾಜ್ಯದ ಮತ್ತು ಹೊರ ರಾಜ್ಯದಲ್ಲಿ ನಡೆದ ಕಲಾಶಿಬಿರಗಳಲ್ಲಿ ಭಾಗವಹಿಸಿರುವರು. ಇವರಿಗೆ ೨೦೦೦ರಲ್ಲಿ ಕೆ.ಕೆ.ಹೆಬ್ಬಾರ ಆರ್ಟ್ ಪೌಂಡೇಷನ್ ಪ್ರಶಸ್ತಿ, ೨೦೧೦ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿ, ೨೦೦೧ರಲ್ಲಿ ಟಿಳಕ್ ಸ್ಮಾರಕ ಪ್ರಶಸ್ತಿ ಮಣೆಯಿಂದ ದೊರೆತಿವೆ.

ಪ್ರಸ್ತುತ ಹಾಲಭಾವಿ ಸ್ಕೂಲ್ ಆಫ್ ಆರ್ಟ್‌ದಲ್ಲಿ ಉಪನ್ಯಾಸಕಿಯಾಗಿ ಸೇವೆಸಲ್ಲಿಸುತ್ತಿದ್ದಾರೆ. ಸಮಕಾಲೀನ ಕಲಾ ಸಂದರ್ಭದಲ್ಲಿ ತಮ್ಮದೇ ಆದ ವಿಶೇಷತೆಯೊಂದಿಗೆ ಸಮಕಾಲೀನ ಕಲಾವಿದರಾಗಿ ಗುರುತಿಸಿಕೊಂಡಿದ್ದಾರೆ.

ಪ್ರಸ್ತುತ ಈ ಅಧ್ಯಾಯದಲ್ಲಿ ಚರ್ಚಿಸಲಾದ ಧಾರವಾಡ ಜಿಲ್ಲೆಯ ಪ್ರಮುಖ ಕಲಾವಿದರು ಅಂದರೆ, ೫೫ ವರ್ಷಗಳ ಮೇಲ್ಪಟ್ಟ ಕಲಾವಿದರುಗಳನ್ನು ಆಯ್ದುಕೊಂಡು ಅಧ್ಯಯನದ ಪರಿಮಿತಿಗನುಗುಣವಾಗಿ, ಸ್ಥೂಲವಾಗಿ ವಿವೇಚಿಸುವ ಪ್ರಯತ್ನ ಮಾಡಲಾಗಿದೆ. ಇಲ್ಲಿ ಯಾವುದೇ ಕಲಾವಿದರ ಸಮಗ್ರ ಅಧ್ಯಯನ ಮಾಡಲಾಗಿಲ್ಲ. ಅವರ ಕುರಿತು ಕಿರುನೋಟ ಒದಗಿಸುಕೊಡುವ ಅಧ್ಯಾಯ ಇದಾಗಿದೆ. ಮುಂದಿನ ಅಧ್ಯಯನಕಾರರು ಇಲ್ಲಿನ ಕಲಾವಿದರ ಕುರಿತಾಗಿಯೇ ವಿಶೇಷವಾಗಿ ಅಧ್ಯಯನ ಮಾಡಲು ಸಾಕಷ್ಟು ಅವಕಾಶಗಳಿರುವುದನ್ನು ಈ ಸಂದರ್ಭದಲ್ಲಿ ಹೇಳಲು ಇಚ್ಛಿಸುತ್ತೇನೆ.

❑❑❑

# ಧಾರವಾಡ ಜಿಲ್ಲೆಯ ಹಿರಿಯ ಕಲಾವಿದರು



ರಾಗಮಾಲಾ ಚಿತ್ರ



ಡಾ. ಎಂ.ವ್ಹಿ. ಮಿಣಜಗಿ



ಶ್ರೀ ಡಿ.ವ್ಹಿ. ಹಾಲಭಾವಿ



ಸಂಯೋಜನಾ ಚಿತ್ರ

## ಧಾರವಾಡ ಜಿಲ್ಲೆಯ ಹಿರಿಯ ಕಲಾವಿದರು



ಶ್ರೀ ಬಸವರಾಜ ಹಳಿಜೋಳ



ಭಾವ ಚಿತ್ರ



ಸಂಯೋಜನಾ ಚಿತ್ರ



ಶ್ರೀ ಎಂ.ಜಿ. ವಾಚೇದಮಠ

# ಧಾರವಾಡ ಜಿಲ್ಲೆಯ ಹಿರಿಯ ಕಲಾವಿದರು



ಸಂಗೀತಗಾರರು



ಶ್ರೀ ಪಿ.ಎಸ್. ಹಿರೇಮಠ



ಶ್ರೀ ಮಹಾವೀರ ಬಾಳಿಕಾಯಿ



ಸೃಜನಾತ್ಮಕ ಚಿತ್ರ

# ಧಾರವಾಡ ಜಿಲ್ಲೆಯ ಹಿರಿಯ ಕಲಾವಿದರು



ಶ್ರೀ ಎಸ್.ಬಿ. ಜೆರಳಿ



ಭಾವಚಿತ್ರ



ಅಮೂರ್ತ ಚಿತ್ರ



ಶ್ರೀ ಆರ್ಯಾ ಆಚಾರ್ಯ

# ಧಾರವಾಡ ಜಿಲ್ಲೆಯ ಹಿರಿಯ ಕಲಾವಿದರು



ಶ್ರೀ ಸುರೇಶ ಹಾಲಭಾವಿ



ನಿಸರ್ಗ ಚಿತ್ರ



ನಿಸರ್ಗ ಚಿತ್ರಣ



ಶ್ರೀ ಸಿ.ಎಲ್. ಕೋಲಕಾರ

# ಧಾರವಾಡ ಜಿಲ್ಲೆಯ ಹಿರಿಯ ಕಲಾವಿದರು



ಶ್ರೀ ಸುರೇಶ ಕುಲಕರ್ಣಿ



ಯುದ್ಧದ ಸನ್ನಿವೇಶ



ಕೊಲಾಜ್ ಚಿತ್ರ



ಶ್ರೀ ಭರತ್‌ಕುಮಾರ

## ಧಾರವಾಡ ಜಿಲ್ಲೆಯ ಹಿರಿಯ ಕಲಾವಿದರು



ಸಂಯೋಜನಾ ಚಿತ್ರ



ಶ್ರೀಮತಿ ಗಾಯತ್ರಿ ದೇಸಾಯಿ



ಶ್ರೀ ಬಿ. ಮಾರುತಿ



ಸಂಯೋಜನಾ ಚಿತ್ರ

## ಧಾರವಾಡ ಜಿಲ್ಲೆಯ ಹಿರಿಯ ಕಲಾವಿದರು



ಅಮೂರ್ತ ಚಿತ್ರ



ಶ್ರೀ ಎಮ್.ಜಿ. ಬಂಗ್ಲೆವಾಲೇ



ಶ್ರೀ ಡಿ.ಎಮ್. ಬಡಿಗೇರ



ಸಂಯೋಜನಾ ಚಿತ್ರ

## ಧಾರವಾಡ ಜಿಲ್ಲೆಯ ಹಿರಿಯ ಕಲಾವಿದರು



ಶ್ರೀ ಎಮ್.ಎಮ್. ದಾಟನಾಳ



ಸೃಜನಾತ್ಮಕ ಚಿತ್ರ



ಸೃಜನಾತ್ಮಕ ಚಿತ್ರ



ಶ್ರೀಮತಿ ರೇಣುಕಾ ಮಾರ್ಕಂಡೆಯ

## ಅಧ್ಯಾಯ – ೭

# ಧಾರವಾಡ ಜಿಲ್ಲೆಯ ಚಿತ್ರಕಲಾ ಸಾಹಿತ್ಯ ಸಮೀಕ್ಷೆ

"ಒಂದು ಜನಾಂಗದ ಸಂಸ್ಕೃತಿಯ ಸಾಧನೆ ಸ್ಪಷ್ಟವಾಗಿ ಗೋಚರವಾಗುವುದು ಅದರ ಸಾಹಿತ್ಯದಲ್ಲಿ ಮಾನವನು ಕಂಡುಕೊಂಡ ಅಭಿವ್ಯಕ್ತಿಯ ಸಾಧನೆಗಳಲ್ಲೆಲ್ಲಾ ಉಕ್ತಿಯೇ ಅತ್ಯಂತ ಪ್ರಭಾವಶಾಲಿಯಾದುದು. ಮಾತಿಗೂ ಮೀರಿದ ಭಾವಗಳಿವೆ. ವಾಕ್ ಮತ್ತು ಅರ್ಥಗಳನ್ನು ಶಿವಶಕ್ತಿಯರಂತೆ ಸಮನ್ವಯಗೊಳಿಸಿ ಲಿಪಿಯ ಮೂಲಕ ಅದನ್ನು ಹಿಡಿದಿಡುವ ಕಲೆಯನ್ನು ಮನುಷ್ಯ ರೂಢಿಸಿಕೊಂಡದ್ದು, ಅವನ ನಾಗರೀಕತೆ ಮತ್ತು ಸಂಸ್ಕೃತಿ ವಿಕಾಸದಲ್ಲಿ ಬಹುದೊಡ್ಡ ಹೆಜ್ಜೆ. ತನ್ನ ಭಾವನೆಗಳನ್ನು ಅನುಭವಗಳನ್ನು ಆಶೋತ್ತರಗಳನ್ನೂ ಮುಂದಿನ ತಲೆಮಾರಿಗೂ ಬಿಟ್ಟು ಹೋಗಬೇಕೆನ್ನುವ ಅದಮ್ಯವಾದ ಆಕಾಂಕ್ಷೆಗೆ ಒಂದು ಸ್ಪಷ್ಟವಾದ ಸ್ವರೂಪ ಭಾಷೆಯಿಂದ ಲಭಿಸಿತು. ತನ್ನ ಅನುಭವಗಳನ್ನು ಹೇಳುವುದನ್ನು ಬರೆದಿಡುವುದನ್ನು ಆತ ಕಲಿತ ವಿಶಾಲವಾದ ಅರ್ಥದಲ್ಲಿ ಈ ಬರವಣಿಗೆಯಲ್ಲವೂ ಸಾಹಿತ್ಯ. ಅನುಭವ ವಿಸ್ತಾರವಾಗಿ ಬೆಳೆದಂತೆಲ್ಲಾ ಜ್ಞಾನವು ಬಹುಮುಖವಾಗಿ ಬೆಳೆಯಿತು. ಆಗ ಅದರಲ್ಲಿ ವಿಭಜನೆ ಅವಶ್ಯಕವಾಯಿತು. ಅವುಗಳಲ್ಲಿ ಪ್ರಧಾನವಾದ ಎರಡು ವಿಭಾಗಗಳು, ಶಾಸ್ತ್ರ ಮತ್ತು ಸಾಹಿತ್ಯ ಬುದ್ಧಿ ಪ್ರಧಾನವಾದುದು ಶಾಸ್ತ್ರ, ಭಾವ ಪ್ರಧಾನವಾದ ಬರವಣಿಗೆ ಸಾಹಿತ್ಯ ಎಂದು ಹೇಳಬಹುದು."[೧] "ಸಾಹಿತ್ಯದ ಉದ್ದೇಶ ಕೇವಲ ಆನಂದವಲ್ಲ, ಅದರೊಂದಿಗೆ ಸಾಮಾಜಿಕ ಹಾಗೂ ಐತಿಹಾಸಿಕ ಪ್ರಜ್ಞೆ ಮುಖ್ಯವಾಗಬೇಕು."[೨]

ಕರ್ನಾಟಕದ ಸಾಹಿತ್ಯ ಕ್ಷೇತ್ರಕ್ಕೆ ಧಾರವಾಡ ಜಿಲ್ಲೆಯ ಕೊಡುಗೆ ಅಪಾರ. ದೃಶ್ಯಕಲಾ ಸಾಹಿತ್ಯದ ಬಗ್ಗೆ ಕೆಲವು ಸಣ್ಣ ಪುಟ್ಟ ಲೇಖನಗಳು ಪ್ರಕಟಗೊಂಡಿದ್ದು. ಇತ್ತೀಚಿನ ದಿನಗಳಲ್ಲಿ ವಿಶ್ವವಿದ್ಯಾಲಯ ಮಟ್ಟದಲ್ಲಿ ಹಲವಾರು ಮಹಾಪ್ರಬಂಧಗಳು ಬಂದಿದ್ದು, ಅವುಗಳಲ್ಲಿ ಕೆಲವು

೦೧. ಡಾ. ಎಚ್. ತಿಪ್ಪೇರುದ್ರಸ್ವಾಮಿ : ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪುಟ – ೩೧೧

೦೨. ರಮೇಶ ನಾಯಕ ಸಂ : ಕರ್ನಾಟಕ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯನ ಮರುಚಂತನೆ, ಪುಟ – ೧೧೧

ಪುಸ್ತಕ ರೂಪದಲ್ಲಿಯೂ ಪ್ರಕಟಗೊಂಡಿವೆ. ಪ್ರಸ್ತುತ ಈ ಜಿಲ್ಲೆಯ ಕಲಾಸಾಹಿತಿಗಳು ಮತ್ತು ಜಿಲ್ಲೆಯೇತರ ಸಾಹಿತಿ, ಕಲಾವಿದರು ಬರೆದ ಗ್ರಂಥಗಳನ್ನು ಇಲ್ಲಿ ಸಮೀಕ್ಷಿಸಲಾಗಿದೆ.

**ಶಿವರಾಮ ಕಾರಂತರ ಕೃತಿಗಳು**

**ಕಲಾಪ್ರಪಂಚ**[೩]

೧೯೭೮ರಲ್ಲಿ ಹೊರಬಂದ ಈ ಕೃತಿಯು ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಿಂದ ಪ್ರಕಟಗೊಂಡಿದೆ. ವಿವಿಧ ದೇಶದ ಕಲೆಯ ಕುರಿತು ೨೬ ಲೇಖನಗಳು ಇದರಲ್ಲಿವೆ. ಕಲಾಸೃಷ್ಟಿ, ಕಲಾವಿದ, ಕಲಾಮಾಧ್ಯಮಗಳ ವ್ಯಾಪ್ತಿ, ಕಲಾತಂತ್ರ ಬೆಳೆದುಬಂದ ಬಗ್ಗೆ, ಚಿತ್ರಪ್ರಬಂಧ, ಶಿಲ್ಪ, ವಾಸ್ತು ಶಿಲಾಯುಗ ಮಾನವರ ಕಲಾಸಾಧನೆ, ಪುರಾತನ ಈಜಿಪ್ತ್, ಸುಮೇರಿಯ, ಪುರಾತನ ಗ್ರೀಸು, ರೋಮನ್, ಬೈಜೆಂಟೈನ್ ಸಾಮ್ರಾಜ್ಯದಲ್ಲಿ ಇರುವ ಕಲಾಪ್ರಕಾರಗಳನ್ನು ಶಿಲ್ಪಗಳನ್ನು ಸಹ ವಿವರಿಸಿದ್ದಾರೆ. ಇಸ್ಲಾಮಿ ರಾಷ್ಟ್ರಗಳು, ಮಧ್ಯಯುಗೀನ ಯುರೋಪು ಪುನರುಜ್ಜೀವನ ಯುಗ ಯುರೋಪು ಭಾವಾವಿಷ್ಟಯುಗ ಅಥವಾ ಬರಕ್ ಕಲೆ ಮನೋವಿಲಾಸಿ ಯುಗ, ಆಧುನಿಕಯುಗ, ವಾಸ್ತವಿಕತೆ ಮತ್ತು ಕ್ಷಣಬಿಂಬವಾದ, ಕ್ಷಣಬಿಂಬವಾದ ತರುವಾಯದ ಸ್ಥಿತಿಗತಿಗಳು ಬೆಳವಣಿಗೆ ಇತ್ಯಾದಿಗಳನ್ನು ಚರ್ಚಿಸಲಾಗಿದೆ. ಇಪ್ಪತ್ತನೇ ಶತಮಾನದಲ್ಲಿ ಪಾಶ್ಚಾತ್ಯ ದೇಶಗಳು, ಪ್ರಾಚೀನ ಚೀನ, ಜಪಾನಿನ ನಾಗರಿಕತೆ, ಭಾರತೀಯ ಕಲೆಗಳು ಮತ್ತು ಅಮೇರಿಕದ ಪುರಾತನ ನಾಗರಿಕತೆಗಳ ಬಗೆ ವಿವರವಾದ ಮಾಹಿತಿ ಒದಗಿಸುವ ಬಹುಗ್ರಂಥ ಇದಾಗಿದೆ.

**ಶಿಲ್ಪ, ಚಿತ್ರ, ವಾಸ್ತು ಕಲೆಗಳು**[೪]

೧೯೭೪ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಿಂದ ಪ್ರಕಟವಾದ ಈ ಕೃತಿಯು ಶಿಲ್ಪ, ಚಿತ್ರ, ವಾಸ್ತು ಕಲೆಗಳ ಕುರಿತು ವಿವರವಾದ ಮಾಹಿತಿಯನ್ನೊದಗಿಸುತ್ತದೆ. ಚಿತ್ರಕಲೆಯನ್ನು ಕುರಿತು ಹೇಳುವಾಗ ಕರ್ನಾಟಕದ ಕಲಾಪರಂಪರೆ ಬೆಳೆದು ಬಂದ ರೀತಿಯನ್ನು ಸ್ಥೂಲವಾಗಿ ಹೇಳಿದ್ದಾರೆ. ಬಾದಾಮಿಯ ಗುಹೆಯ ಚಿತ್ರಕಲೆಯನ್ನು ಇಲ್ಲಿನ ಚಿತ್ರಗಳ ವಸ್ತು ವಿಷಯ ತಂತ್ರಗಾರಿಕೆ, ಶೈಲಿ ಮತ್ತು ಬಣ್ಣಗಾರಿಕೆ ಸಂಯೋಜನೆಗಳನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ.

**ಡಿ. ವಿ. ಹಾಲಭಾವಿಯವರ ಕೃತಿಗಳು**

**ನನ್ನ ಸಮಕಾಲೀನರು**[೫]

೧೯೬೮ರಲ್ಲಿ ಹಾಲಭಾವಿಯವರು ೧೧ ಪುಟಗಳ ಆಂಗ್ಲ ಮಾಧ್ಯಮದಲ್ಲಿ ಈ ಕೃತಿಯನ್ನು

---

೦೩. ಶಿವರಾಮಕಾರಂತ : ಕಲಾಪ್ರಪಂಚ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮

೦೪. ಶಿವರಾಮಕಾರಂತ : ಶಿಲ್ಪ, ಚಿತ್ರ, ವಾಸ್ತು ಕಲೆಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೦೫. ಡಿ.ವಿ.ಹಾಲಭಾವಿ : ನನ್ನ ಸಮಕಾಲೀನರು, ಸುರೇಶ ಹಾಲಭಾವಿ ಪ್ರಕಾಶನ, ಧಾರವಾಡ. ೧೯೬೮

ರಚಿಸಿದ್ದಾರೆ. ಮುಂಬೈನ ಜೆ.ಜೆ.ಸ್ಕೂಲ್ ಆಫ್ ಆರ್ಟ್‌ದಲ್ಲಿ ಇವರ ಜೊತೆ ಕಲಿತ ಉತ್ತರ ಕರ್ನಾಟಕದ ಇವರ ಸಹಪಾಠಿಗಳಾದ ಶ್ರೀ.ಎಂ.ವಿ.ಮಿಣಜಗಿ, ಶ್ರೀ.ಡಿ.ಜಿ.ಬಡಿಗೇರ, ಶ್ರೀ.ಜಿ.ಎಸ್. ದಂಡಾವತಿಮಠ, ಶ್ರೀ.ಅಮೀನಸಾಬ ಕಮಡೊಳ್ಳಿ, ಶ್ರೀ.ಎಂ.ಎ.ಚೆಟ್ಟಿ, ಶ್ರೀ.ಎ.ಎ.ಅಲಮೇಲ್ಕರ್ ಹೀಗೆ ಈ ಆರು ಜನರ ಜನನ, ಕಲಾಶಿಕ್ಷಣ, ಅವರು ರಚಿಸಿದ ಕಲಾಕೃತಿಗಳು ಮತ್ತು ಅವರ ಉನ್ನತ ವ್ಯಾಸಂಗ ಪ್ರಶಸ್ತಿಗಳು ಹಾಗೂ ಇತರ ಕಾರ್ಯಕ್ಷೇತ್ರಗಳ ಬಗೆ ಪೂರ್ಣವಾದ ಮಾಹಿತಿಯನ್ನು ತಮ್ಮ ಗ್ರಂಥದಲ್ಲಿ ನೀಡಿದ್ದಾರೆ.

**ನನ್ನ ಸಿಲೋನ ಸಂದರ್ಶನ**[೬]

೧೯೬೮ರಲ್ಲಿ ಹೊರತರಲಾದ ಈ ಕೃತಿಯಲ್ಲಿ ಹಾಲಭಾವಿಯವರು ಸಿಲೋನ್ ಮುಖಾಂತರ ಜಾಪ್ನಾ, ಟ್ರಿಂಕೋಮಾಲಿ, ಸಿಗೀರಿಯಾ, ಕೋಲಂಬೋ, ಲಾವೋನಿಯಾ ಪ್ರವಾಸ ಕೈಗೊಂಡರು. ಸಿಲೋನಿನ ಕಲೆಯ ಕುರಿತು ಹೇಳುತ್ತಾ ಸಿಗೀರಿಯಾದಲ್ಲಿಯ ಭಿತ್ತಿ ಚಿತ್ರಗಳು ಕ್ರಿ.ಪೂ.೩ನೇ ಶತಮಾನದ ಚಿತ್ರಗಳು ೯ನೇ ಶತಮಾನದ ಚಿತ್ರಗಳನ್ನು ಕಟ್ಟಿಗೆಯ ಹಲಿಗೆಯ ಮೇಲೆ ಬಟ್ಟೆಯ ಮೇಲೆ ಅರಮನೆ ಗೋಡೆಯ ಮೇಲೆ ಆಶ್ರಮಗಳಲ್ಲಿ ಹೆಚ್ಚಾಗಿ ಕಂಡು ಬಂದ ಚಿತ್ರಗಳ ಕುರಿತು ವಿವರಿಸಿದ್ದಾರೆ. ಇಲ್ಲಿನ ವಾಸ್ತುಶಿಲ್ಪ ಮತ್ತು ಚಿತ್ರಕಲೆಗಳನ್ನು ನಮ್ಮ ದೇಶದ ಅಜಂತ ಎಲ್ಲೋರಗಳಿಗೆ ಹೋಲಿಸಿಕೊಂಡು ಸಂಕ್ಷಿಪ್ತವಾಗಿ ಈ ಗ್ರಂಥದಲ್ಲಿ ವಿವರಿಸಿದ್ದಾರೆ.

**ಜಮ್ಮು ಕಾಶ್ಮೀರ ಸಂದರ್ಶನ**

೧೯೭೮ರಲ್ಲಿ ಕಾಶ್ಮೀರಕ್ಕೆ ಹೋಗಿ ಅಲ್ಲಿಯ ಹಿಮಚ್ಛಾದಿತ ಪರ್ವತ ಶ್ರೇಣಿಗಳ ಹಾಗೂ ಇತರ ಸುಂದರ ದೃಶ್ಯಗಳನ್ನು ಚಿತ್ರಿಸಿದ್ದಾರೆ. ಅಲ್ಲಿಯ ಚಿತ್ರಕಲೆ ಹಾಗೂ ನಿಸರ್ಗಮಯವಾದ ವಾತಾವರಣವನ್ನು ಮತ್ತು ಅವರ ಸಂಸ್ಕೃತಿಯ ಕುರಿತಾದ ಅನುಭವಗಳನ್ನು ಜಮ್ಮು ಮತ್ತು ಕಾಶ್ಮೀರ ಎಂಬ ಕಿರು ಗ್ರಂಥವನ್ನು ರಚಿಸಿದರು. ಆದರೆ ಅನಿವಾರ್ಯ ಕಾರಣಗಳಿಂದ ಈ ಗ್ರಂಥ ಪ್ರಕಟಗೊಳ್ಳಲಿಲ್ಲ.

**ಕಲಾ ಪತ್ರಿಕೆಗಳು**

೧೯೮೫ರಲ್ಲಿ ಹಾಲಭಾವಿಯವರು ಆರ್ಟ್‌ಗಿಲ್ಡ್ ಎಂಬ ಮಾಸಿಕ ಪತ್ರಿಕೆಯನ್ನು ಕನ್ನಡ ಮತ್ತು ಆಂಗ್ಲಭಾಷೆಯಲ್ಲಿ ಪ್ರಾರಂಭಿಸಿದರು. ಈ ಲೇಖನದಲ್ಲಿ ದೇಶ ವಿದೇಶಗಳ ಮಹಾನ್ ಕಲಾವಿದರ ಪರಿಚಯವನ್ನು ಸಂಕ್ಷಿಪ್ತವಾಗಿ ಪರಿಚಯಿಸುತ್ತ ಬಂದರು. ಮುಂದೆ ಇದೇ ಪತ್ರಿಕೆಯಲ್ಲಿ ತಮ್ಮ ಶಿಲೋನ್ ಪ್ರವಾಸದ ಬಗ್ಗೆ ಮತ್ತು ಯುವಕಲಾವಿದರ ಬಗ್ಗೆ ಪ್ರಾಚೀನ ಕಲೆಯ ಕುರಿತಾದ ಲೇಖನಗಳು ವಿಮರ್ಶಾತ್ಮಕ ಬರಹಗಳನ್ನು ಪರಿಚಯಿಸುತ್ತ ಬಂದಿದ್ದಾರೆ.

---

೦೬. ಡಿ.ವಿ.ಹಾಲಭಾವಿ : ನನ್ನ ಸಿಲೋನ ಸಂದರ್ಶನ, ಸುರೇಶ ಹಾಲಭಾವಿ ಪ್ರಕಾಶನ, ಧಾರವಾಡ, ೧೯೮೫

**ಕಲಾಮಾರ್ಗ**

ಕಲಾಮಾರ್ಗ ಎಂಬ ಪತ್ರಿಕೆಯಲ್ಲಿ ಹಾಲಭಾವಿಯವರ ಕೆಲವು ಲೇಖನಗಳು ಪ್ರಕಟವಾಗಿವೆ. ಕೆಲವು ಕಾಲದ ನಂತರ ಆ ಪತ್ರಿಕೆ ಸ್ಥಗಿತಗೊಳ್ಳುತ್ತದೆ. ಈ ಪತ್ರಿಕೆಯಲ್ಲಿ ಕಲಾ ವಿದ್ಯಾರ್ಥಿಗಳಿಗೆ, ಕಲಾವಿದರಿಗೆ, ಕಲೆಯ ಬಗ್ಗೆ ಹೆಚ್ಚಿನ ಮಾಹಿತಿಗಳು ಇರುತ್ತಿದುದ್ದು ವಿಶೇಷವಾಗಿದೆ.

**ಬಿ.ಪಿ.ಬಾಯಿರಿಯವರ ಕೃತಿಗಳು**

**ಚಿತ್ರಕಲೆ**[೭]

೧೯೮೦ರಲ್ಲಿ ಮೊದಲ ಮುದ್ರಣ 'ಚಿತ್ರಕಲೆ' ಎಂಬ ಕಿರು ಪುಸ್ತಕ ಮಾಲೆ ಪ್ರಕಟಿಸಲಾಯಿತು. ಈ ಪುಸ್ತಕದಲ್ಲಿ ಬಿ.ಪಿ.ಬಾಯಿರಿಯವರು ಪುಸ್ತಕದ ವರ್ಣನೆ ಅತೀ ಸಂಕ್ಷಿಪ್ತವಾಗಿ ನೀಡಲಾಗಿದೆ. ಈ ಹೊತ್ತಿಗೆಯಲ್ಲಿ ಆದಿಮಾನವ ಚಿತ್ರಕಲೆ ಯುರೋಪಿನ ಚಿತ್ರಕಲೆ, ಚೀನಾ, ಜಪಾನ್ ಚಿತ್ರಕಲೆ, ಈಜಿಪ್ಟ್, ಗ್ರೀಕ್ ಚಿತ್ರಕಲೆ ಬಗ್ಗೆ ಸರಳವಾಗಿ ಮತ್ತು ಸಂಕ್ಷಿಪ್ತ ರೂಪದಲ್ಲಿ ಪ್ರತಿಯೊಂದು ವಿವರಣೆಯನ್ನು ಟಿಪ್ಪಣಿ ಮೂಲಕ ವಿವರಿಸಿದ್ದಾರೆ. ಭಾರತದ ಚಿತ್ರಕಲೆ ಅಧ್ಯಾಯದಲ್ಲಿ ಹರಪ್ಪ, ಮೆಹೆಂಜೋದಾರೋ ಚಿತ್ರಕಲೆ ಸಂಸ್ಕೃತಿ ನಾಗರೀಕತೆ ಕುರಿತು, ಬೌದ್ಧ ಚಿತ್ರಕಲೆಯಲ್ಲಿ ಅಜಂತಾದ ಸುಂದರ ವಾಸ್ತು, ಚಿತ್ರ, ಭಿತ್ತಿಚಿತ್ರಗಳ ಬಗ್ಗೆ ಅತಿ ಸರಳ ಅರ್ಥದೊಂದಿಗೆ ವಿವರಣೆ ನೀಡಿದ್ದಾರೆ. ಅದಲ್ಲದೆ, ಜೈನಚಿತ್ರಕಲೆ, ಮೊಘಲ್‌ಚಿತ್ರಕಲೆ, ರಜಪೂತಚಿತ್ರಕಲೆ, ಕಾಂಗ್ರಾ ಶೈಲಿ ಮುಂತಾದ ಅರಸುವಂಶದ ವಾಸ್ತು ಶಿಲ್ಪ, ಚಿತ್ರಕಲೆ, ಸಂಸ್ಕೃತಿಯ ವರ್ಣನೆ ಕೂಡಾ ಮೆಚ್ಚುವಂತದ್ದಾಗಿದೆ. ಕೊನೆಯದಾಗಿ ವ್ಯತ್ಯಾಸಗಳು ಎಂಬ ಟಿಪ್ಪಣಿಯಲ್ಲಿ ಭಾರತೀಯ ಹಾಗೂ ಪಾಶ್ಚಾತ್ಯ ಕಲೆಗಳ ಬಗ್ಗೆ ಇರುವ ವ್ಯತ್ಯಾಸಗಳು, ಭಾರತೀಯ ಚಿತ್ರಕಲೆಯಲ್ಲಿ ಪರಸ್ಪರ ಇರುವ ವ್ಯತ್ಯಾಸಗಳನ್ನು ಚುಟುಕಾಗಿ ಬರೆದಿದ್ದಾರೆ.

**ಚಿಕ್ಕ ಮಕ್ಕಳ ಚಿತ್ರಕಲೆ**[೮]

ಕಲಾ ಶಿಕ್ಷಣದ ಬಗ್ಗೆ ಚಿಕ್ಕ ಮಕ್ಕಳ ಚಿತ್ರಕಲೆಯ ಬಗ್ಗೆ ಮನೋವೈಜ್ಞಾನಿಕವಾಗಿ ಅಧ್ಯಯನವನ್ನು ಮಾಡಿದ್ದಾರೆ. ಮಕ್ಕಳ ಚಿತ್ರಕಲೆಯೆಂದರೆ ಮಕ್ಕಳು ತಮಗೆ ಸಹಜ ಸ್ವಭಾವದ ಗುರುತುಗಳಿಂದ ತಮ್ಮ ಭಾವನೆಗಳನ್ನು ತೋಡಿಕೊಳ್ಳುವ ರಚನೆ, ಇದನ್ನು ಅವರು ಮಾತ್ರ ರಚಿಸಬಲ್ಲರು. ಅದರ ಮೇಲೆ ಇತರರ ಪ್ರಭಾವ ಬೀರಿದರೆ ಅದು ಮಕ್ಕಳ ಚಿತ್ರಕಲೆಯಲ್ಲ ಎಂದು ಪ್ರತಿವಾದಿಸುತ್ತಾರೆ. ಚಿಕ್ಕಮಕ್ಕಳ ಚಿತ್ರಕಲೆಯ ವೈಶಿಷ್ಟ್ಯಗಳೇನು ಅದನ್ನು ಏಕೆ ಮೆಚ್ಚಬೇಕು ಮಕ್ಕಳಿಗೆ ಕೌಶಲ್ಯ ಕಲಾತಂತ್ರ ಹೇಗೆ ಗೊತ್ತು ಮಕ್ಕಳ ಚಿತ್ರಗಳಲ್ಲಿ ಏನೇನನ್ನು ಕಾಣಬಹುದು. ಮಗವು ಏಕೆ ಚಿತ್ರಿಸುತ್ತದೆ ಮುಂತಾದ ಹಲವಾರು ಪ್ರಶ್ನೆಗಳಿಗೆ ಸ್ವತಃ ಮನೋವೈಜ್ಞಾನಿಕವಾಗಿ ಅಧ್ಯಯನ

---

೦೭. ಬಿ.ಪಿ.ಡಾಯರಿ : ಚಿತ್ರಕಲೆ, ಸಮಾಜ ಪುಸ್ತಕಾಲಯ, ಧಾರವಾಡ. ೧೯೮೦

೦೮. ಬಿ.ಪಿ.ಡಾಯರಿ : ಚಿಕ್ಕಮಕ್ಕಳ ಚಿತ್ರಕಲೆ, ಪ್ರತಿಭಾ ಗ್ರಂಥಮಾಲೆ, ಧಾರವಾಡ.

ಮಾಡಿದ್ದಾರೆ. ಚಿತ್ರಕಲಾ ಪಾಠಗಳು ಅಂದು ಇಂದು ಚಿತ್ರಪಾಠದ ಉದ್ದೇಶಗಳ ಬದಲಾವಣೆ ಮತ್ತು ಹೊಂದಾಣಿಕೆ ಕುರಿತು ಪ್ರಸ್ತಾವವನ್ನು ನೀಡಿದ್ದಾರೆ. ಸೃಜನಾತ್ಮಕ ಗುಣಗಳನ್ನು ವೃದ್ಧಿಸುವುದು ವಿದ್ಯೆಯ ಪ್ರಧಾನಗುಣ ಇದನ್ನು ನಾವು ಮಕ್ಕಳ ಚಿತ್ರಕಲೆಯ ಮೂಲಕ ಸಾಧಿಸಬಹುದು.

**ಜಾಗತಿಕ ಚಿತ್ರಕಲೆ[೯]**

ಈ ಪುಸ್ತಕದಲ್ಲಿ ಆದಿಮಾನವರ ಕಲೆ, ಪಾಶ್ಚಾತ್ಯಕಲೆ, ಇಸ್ಲಾಮಿಕಲೆ, ಜೈನಚಿತ್ರಕಲೆ, ಪೌರಾತ್ಯ ಕಲೆ ಮಾಯಾಬುಡಕಟ್ಟಿನ ನಾಗರಿಕತೆ ಶ್ರೀಲಂಕಾ ದೇಶದ ಕಲೆ ಇಟಲಿಯ ಪುನರುಜ್ಜೀವನ ಕಾಲದ ಚಿತ್ರಗಾರ ರಾಫೆಲ್ ಹೂ, ಹಕ್ಕಿಗಳ ಚೀನಾ ಚಿತ್ರಗಾರ ಚಿ.ಪಿ.ಶ್ರೀ ಕ್ರಾಂತಿಕಾರಿ ಕಲಾವಿದ ಎಡ್ವರ್ಡ್ ಮಾನೆ, ವೈಯಕ್ತಿಕ ಶೈಲಿಯ ಕಲಾವಿದ ಅಲಮೇಲಕರ್, ಜೀವನ ಚರಿತ್ರೆಗಳು, ಮುಂತಾದವುಗಳ ವಿಶ್ಲೇಷಣೆಯಿದೆ. ಅಲ್ಲದೆ ತೈಲವರ್ಣವನ್ನು ಹೇಗೆ ಉಪಯೋಗ ಆರಂಭವಾಯಿತು ಎಷ್ಟನೇ ಶತಮಾನದಲ್ಲಿ ಅದರ ಬಳಕೆ ಹೇಗೆ ಮಾಡಬೇಕು ಎನ್ನುವುದರ ಬಗ್ಗೆ ವಿವರಣೆ ಇದೆ. ರೇಖೆಗಳ ಅರ್ಥವರ್ಣಗಳ ಆಯ್ಕೆ ವಿರುದ್ಧ ವರ್ಣಗಳು ಸಾದೃಶ್ಯ ವರ್ಣಗಳು, ಶಾಂತವರ್ಣ ಮತ್ತು ಉಷ್ಣವರ್ಣಗಳು ಯಾವುವು ಎಂದು ಬರೆದಿದ್ದಾರೆ. ಕೊನೆಯದಾಗಿ ನಮ್ಮ ರಾಷ್ಟ್ರೀಯ ಚಿತ್ರಕಲೆ ಒಂದೊಂದು ನಾಡಿನ ಜನರ ಜೀವನ ಕ್ರಮ, ಸಂಸ್ಕೃತಿಗಳು, ಬೇರೆ ಬೇರೆಯಾದಂತೆ ಚಿತ್ರಪದ್ಧತಿಗಳಲ್ಲೂ ವೈವಿಧ್ಯತೆಯಿದೆ. ಅವುಗಳಲ್ಲಿ ಆಯಾ ರಾಷ್ಟ್ರಗಳ ಆದರ್ಶಗಳು ಅಂತರ್ಗತವಾಗಿರುತ್ತದೆ. ಸಂಸ್ಕೃತಿಯ ದೇಶದ ಆತ್ಮ ಕಲೆಯ ಸಂಸ್ಕೃತಿಯ ಅಂಗ ಆದುದರಿಂದ ಕಲೆಯಲ್ಲಿ ರಾಷ್ಟ್ರೀಯತೆಗೆ ಸ್ಥಾನವಿದೆ. ಭಾರತದಲ್ಲಿ ಪಾರಂಪರ್ಯವಾಗಿ ಬಂದ ಕಲಾ ಸಂಪ್ರದಾಯಗಳು, ಕಲಾಕೃತಿಗಳು ಅಮೂಲ್ಯವಾದವುಗಳು ನಮ್ಮ ರಾಷ್ಟ್ರೀಯಕಲೆಯ ಆದರ್ಶವು ಅಂತರಂಗ ಸೌಂದರ್ಯ ಆಧ್ಯಾತ್ಮಕ ಸೌಂದರ್ಯಗಳನ್ನು ತೋರಿಸುವುದಾಗಿದೆ.

**ಚಿತ್ರಕಲೆಯ ಚಿಕ್ಕ ಕಥೆಗಳು[೧೦]**

೧೯೮೦ರಲ್ಲಿ ಈ ಕೃತಿ ಮುದ್ರಣ ಕಂಡಿತು. ಇಲ್ಲಿ ಕಲಾಪ್ರೋತ್ಸಾಹ, ಕಲಾವಿದರ ಬದುಕು ಕಲೆಯ ಸ್ಥಾನಮಾನ ಮುಂತಾದವುಗಳ ಕುರಿತು ಜ್ಞಾನ ನೀಡುವುದೂ ಆಗಿರುತ್ತದೆ. ಇವುಗಳಲ್ಲಿ ಕೆಲವನ್ನು ಸಂದರ್ಭನುಸಾರ ಜನ ಸಾಮಾನ್ಯ ಬಾಯಿಯಿಂದ ಕೇಳುಹುದು ಕೆಲವನ್ನು ವಿದ್ವಾಂಸರ ಉಪನ್ಯಾಸ ಹರಿಕಥೆಗಳಲ್ಲಿ ಕೇಳಿರಬಹುದು. ಇನ್ನು ಕೆಲವನ್ನು ನಿಯತಕಾಲಿಕ ಪತ್ರಿಕೆಗಳಲ್ಲೂ ಪುರಾತನ ಕಾವ್ಯ ಪುರಾಣ ಗ್ರಂಥಗಳಲ್ಲೂ ಓದಿದ್ದು ಆಗಿದೆ. ಹೀಗೆ ಅವರು ವಿಷಯವನ್ನು ಸಂಗ್ರಹಿಸಿ ಚಿತ್ರಕಲೆಯ ಚಿಕ್ಕ ಕಥೆಗಳು ಎಂಬ ಪುಸ್ತಕಕ್ಕೆ ಒದಗಿಸಿದ್ದಾರೆ.

೦೯. ಬಿ.ಪಿ.ಬಾಯರಿ : ಜಾಗತಿಕ ಚಿತ್ರಕಲೆ, ಪ್ರತಿಭಾ ಗ್ರಂಥಮಾಲೆ, ಧಾರವಾಡ. ೧೯೮೫

೧೦. ಬಿ.ಪಿ.ಬಾಯರಿ : ಚಿತ್ರಕಲೆಯ ಚಿಕ್ಕಕಥೆಗಳು, ಪ್ರತಿಭಾ ಗ್ರಂಥಮಾಲೆ, ಧಾರವಾಡ. ೧೯೮೦

**ನವ್ಯಕಲೆ ಹಾಗೂ ಕಲೆಗಾರರು[೧೧]**

ನವ್ಯಕಲೆ, ಚಿತ್ರಕಲೆಯಲ್ಲಿ ಕ್ರಾಂತಿ ವಿವಿಧ ಶತಮಾನದಲ್ಲಿ ಬದಲಾವಣೆ ಹೊಂದಿದೆ. ಇಸಂಮ್‌ಗಳ ಶೈಲಿ, ಕಲೆಗಾರರು, ಎಲ್‌ಗ್ರೆಕೊ, ರೊಬೆನ್ಸ್, ರೊಗಾರ್ತ್, ದಲಕ್ರವ್ ಡಾಮಿರ್, ರೂಸೋ, ಟುಲೂಸ್ ಲೂತ್ರೆಕ್, ಗಗನೇಂದ್ರನಾಥ ಠಾಗೋರ್, ಹೆನ್ರಿಮಾತಿಸೆ, ದೇವಿಪ್ರಸಾದರಾಯ್ ಚೌಧರಿ, ಕೆ.ಸಿ.ಎನ್.ಪಣಿಕ್ಕರ್ ಮುಂತಾದ ಕಲಾವಿದರುಗಳು ಕಲೆ ಮತ್ತು ವ್ಯಕ್ತಿತ್ವ ಪರಿಚಯವನ್ನು ನೀಡಿದ್ದಾರೆ. ಕಲೆಯು ಮತ್ತು ಕಲೆಗಾರರ ಇತಿಹಾಸಗಳು ಬೇರೆ ಎಲ್ಲಾ ಕಲೆಗಾರರ ಚರಿತ್ರೆಗಳನ್ನು ತಿಳಿಯುವುದರಿಂದ ಆ ಕಾಲದ ಜನ ಜೀವನ ಮತ ಧರ್ಮಿಯರ, ರಾಜರ ಹಾಗೂ ಶ್ರೀಸಾಮಾನ್ಯರ ಅಭಿರುಚಿಗಳು, ಕಲಾವಿದರ ಸಮಸ್ಯೆಗಳು, ಕಲೆ ಮತ್ತು ಸಮಾಜ ಒಂದರ ಮೇಲೆ ಮತ್ತೊಂದರ ಪ್ರಭಾವ ಮುಂತಾದವುಗಳು ತಿಳಿದು ಬರುತ್ತದೆ. ಅವರ ವ್ಯಕ್ತಿತ್ವ, ಸಹಕಾರ ಪ್ರೋತ್ಸಾಹದಾಯಕ.

ಈ ಬರಹಗಳಿಗೆ ಆಧಾರವು Out line or art ಮತ್ತು Great Painters & Paintings ಗ್ರಂಥಗಳಾಗಿವೆ. ಅಲ್ಲದೆ ಇತರ ವಿದ್ವಾಂಸರ ಬರಹಗಳಿಂದಲೂ ಭಾಷಣಗಳಿಂದಲೂ, ಮೂಲತಃ ಮಾತು ಕತೆಗಳಿಂದಲೂ ಪಡೆದ ಅನುಭವಗಳಾಗಿವೆ. ಪ್ರಸ್ತುತ ಈ ಪುಸ್ತಕಕ್ಕೆ ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.

**ಕಲೆಗಾರರ ಕಥೆಗಳು[೧೨]**

ಈ ಕೃತಿಯಲ್ಲಿ ಕಲೆಯು ಸಂಸ್ಕೃತಿಯ ಅಂಗ, ಹಣವು ರಾಷ್ಟ್ರ ಜೀವನದ ಹೊರಮೈ, ಆದರೆ ಸಂಸ್ಕೃತಿಯು ಅದರ ಆತ್ಮ ಎಂಬುದು ತಜ್ಞರ ಮಾತು. ಜನತೆಗೆ ಕಲೆಯ ಜ್ಞಾನ ಅದರಲ್ಲಿ ಆಸಕ್ತಿ ಅಭಿಮಾನಗಳು ಅಗತ್ಯ ಅದರೊಡನೆ ಕಲೆಗಾರರ ಬದುಕಿನ ಅರಿವು ಕೂಡ ಬೇಕು. ಕಲೆಗಾರರು ರಾಷ್ಟ್ರಗಳ ಸಂಸ್ಕೃತಿಗಳನ್ನು ರೂಪಿಸುವ ರೂವಾರಿಗಳು, ಕಲೆಗಾರರ ಬದುಕು ವೈವಿಧ್ಯಮಯ. ಕೃತಿ ರಚಿಸಿದಾತ ಭಿಕ್ಷಾದಿಪತಿಯಾಗಿದ್ದ, ಒಂದು ಹಿಡಿಕೂಳಿಗಾಗಿ ಕೃತಿಯನ್ನು ಕೊಟ್ಟುಬಿಟ್ಟ, ಅದನ್ನು ಪಡೆದುಕೊಂಡು ವಿಕ್ರಯಿಸಿದಾತ ಲಕ್ಷಾಧಿಪತಿಯಾದ. ಒಂದು ಕಾಲದಲ್ಲಿ ಒಂದು ಕೃತಿಯು ಕಲೆಯೇ ಅಲ್ಲ. ಅದು ಒಂದು ಅಸಂಬದ್ಧ ಎಂದು ತಿರಸ್ಕೃತ ಮತ್ತೊಂದು ಕಾಲದಲ್ಲಿ ಅದು ಶ್ರೇಷವಿಕೃತಿಯೆಂದು ಪುರಸ್ಕೃತ ಅದಕ್ಕೆ ವಜ್ರಕ್ಕಿಂತಲೂ ಅಧಿಕ ಬೆಲೆ ಮಗನು ಅಧಿಕಾರಿಯಾಗಬೇಕು. ಧನಿಕನಾಗಬೇಕು. ಅದಕ್ಕೆ ತಕ್ಕ ಶಿಕ್ಷಣ ಪಡೆಯಲೆಂದು ಹೆತ್ತವರ ಒತ್ತಾಯ ಆ ಬಗ್ಗೆ ಪುತ್ರನಿಗೆ ಹಿಂಸೆಕೊಟ್ಟರು. ಆದರೆ ಕಲೋಪಾಸನೆಯು ಮಗನ ಆದರ್ಶವಾಗಿತ್ತು. ಆದರ್ಶ ಸಾಧನೆಗಾಗಿ ಸುಖೋಪಭೋಗಗಳನ್ನು ತೊರೆದ ಕೃತಿರಚನೆಯೇ ದೇವರ ಸೇವೆಯೆಂದು ಕಲಾತಪಸ್ವಿಯಾಗಿ ಬಾಳಿದ ಎಂಭತ್ತು ವರುಷ ಕಾಲ ಮಹತ್ಸಾಧನೆ ಮಾಡಿ ಅಮರ ಕೃತಿಗಳನ್ನು

---

೧೧. ಬಿ.ಪಿ.ಬಾಯರಿ : ನವ್ಯಕಲೆ ಹಾಗೂ ಕಲೆಗಾರರು, ಪ್ರತಿಭಾ ಗ್ರಂಥಮಾಲೆ, ಧಾರವಾಡ. ೧೯೮೨

೧೨. ಬಿ.ಪಿ.ಬಾಯರಿ : ಕಲೆಗಾರರ ಕಥೆಗಳು, ಸಮಾಜ ಪುಸ್ತಕಾಲಯ, ಧಾರವಾಡ. ೧೯೯೫

ರಚಿಸಿದ್ದ ಅದಾಗ್ಯೂ ಅಂತ್ಯಕಾಲದಲ್ಲಿ ತಾನು ಕಲೆಯಲ್ಲಿ ಸಿದ್ಧಿಪಡೆದದ್ದು ಸಾಲದು ಎಂದು ದಿವ್ಯ ಅತೃಪ್ತಿಯಿಂದ ಶೋಕಿಸಿದ. ಬದುಕಿದಾಗ ಅವಮಾನಿತ ಸತ್ತ ಬಳಿಕ ಬಹುಮಾನಿತ ಹೀಗೆ ಜಗತ್ತಿನಾದ್ಯಂತ ಕಲೆಗಾರರ ಬಾಳು ನಲಿವು ನೋವುಗಳಿಂದ ತುಂಬಿ ರಸಭರಿತವಾಗಿರುತ್ತದೆ.

ಕಲಾವಿಮರ್ಶೆಯ ಹಿತಾಹಿತ ಪರಿಣಾಮಗಳು, ಕಲೆಯ ಮೌಲ್ಯ ಅಮೌಲ್ಯ ಕಲೆಗಾರರ ಬದುಕು ಕಲಾ ರಚನೆಯೆಂಬುದು ಒಂದು ತಪಸ್ಸು, ದೇಶ ವಿದೇಶಗಳಲ್ಲಿ ಕಲಾಭಿಮಾನ ಕಲಾಪ್ರೋತ್ಸಾಹ, ಬದಲಾಗುತ್ತಿರುವ ಕಲಾದೃಷ್ಟಿ ಮೊದಲಾದವುಗಳನ್ನು ನಿರೂಪಿಸುವ ರಸ ಪ್ರಸಂಗಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಉದಾ ಜಿಯತ್ತೊ, ಲಿಯೊನಾರ್ಡೋ ವಿಂಚಿ, ಮೈಕಲ್ ಎಂಜಿಲೊ ರೆಂಬ್ರಟ್, ಹೊಕುಸೇ, ಟರ್ನರ್, ಕೊರೋಟ್, ವಿಸ್ಲರ್, ಸೆಜಾನ್, ರಾಜಾ ರವಿವರ್ಮ, ಗಾಗಿನ, ವಿನ್ಸಂಟ್, ವಾನ್‌ಗಾಗ್, ರವೀಂದ್ರನಾಥ ಠಾಗೋರ, ಗುಸ್ತವ್, ವೈಗ್ವಂಡ್, ಆನಂದ ಕುಮಾರ ಸ್ವಾಮಿ, ಕೆ.ವೆಂಕಪ್ಪ ಜಾಮಿನಿರಾಯ್. ಬಿ.ಪಿ.ಬಾಯಿರಿಯವರ ಜೀವನ ಮತ್ತು ಚಿತ್ರಕಲಾ ಕ್ಷೇತ್ರ ಮತ್ತು ಚಿತ್ರಕಲಾ ಸಾಹಿತ್ಯಕ್ಕೆ ಅವರು ನೀಡಿದ ಕೊಡುಗೆ ಅನುಪಮವಾದದ್ದು. ಚಿತ್ರಕಲೆಯ ಬಗ್ಗೆ ಇತಿಹಾಸ ಮತ್ತು ಹಿಂದಿನ ಅಪೂರ್ವವಾದ ಕಲಾಸಾಹಿತ್ಯವನ್ನು ಬಾಯಿರಿಯವರು ಕೊಡುಗೆಯಾಗಿ ನೀಡಿದ್ದಾರೆ.

**ಡಾ. ಎಸ್. ಸಿ. ಪಾಟೀಲರ ಕೃತಿಗಳು**

**ಚಿತ್ರಾಕ್ಷಿ**[೧೩]

ಈ ಕೃತಿಯಲ್ಲಿ ಡಿ.ವಿ.ಹಾಲಭಾವಿಯವರ ಕಲಾ ಬದುಕು, ಕಲಾಕೃತಿಗಳು, ಕಲಾಶೈಲಿ ಮತ್ತು ಕಲಾ ಶಾಲೆ ಬೆಳೆದು ಬಂದ ಹಿನ್ನೆಲೆ ಇತ್ಯಾದಿಗಳನ್ನು ಕುರಿತಾಗಿದೆ. ಈ ಸ್ಮರಣ ಸಂಚಿಕೆಯಲ್ಲಿ ಅನೇಕ ಲೇಖನಗಳಿವೆ.ಅವುಗಳಲ್ಲಿ ಕಲಾಚಾರ್ಯ ಶ್ರೀದಾನಪ್ಪ ವೀರಭದ್ರಪ್ಪ ಹಾಲಭಾವಿ ಕರ್ನಾಟಕದ ಕಲಾರತ್ನ ಹಾಲಭಾವಿಯವರು ಕಟ್ಟಿದ ಕಲಾಮಂದಿರ, ಮಧುರ ನೆನೆಪುಗಳು, ಹಿರಿಯ ಕಲಾವಿದ ದಾನಪ್ಪ ಹಾಲಭಾವಿ, ಕಲಾ ಪ್ರವಾದಿ ಹಾಲಭಾವಿ, ಶ್ರೀದಾನಪ್ಪ ಕಲಾವಿದನೊಂದಿಗೆ ಕ್ಷಣ ಕಾಲ, ಕನಸುಗಾರ ಕಲಾ ಗುರು ದಾನಪ್ಪ ಹಾಲಭಾವಿ, ಅಪ್ರತಿಮ ಕಲಾಕಾರ ಶ್ರೀ ಹಾಲಭಾವಿಯವರು, ಸಂತೃಪ್ತ ಕಲಾವಿದ ಶ್ರೀ.ಡಿ.ವಿ.ಹಾಲಭಾವಿ, ಶ್ರೀ.ಹಾಲಭಾವಿಯವರ ಬುದುಕು, ಕಲಾಸಾಧನೆ ಕೆಲವು ವಿಚಾರಗಳು, ಹಿರಿಯ ಕಲಾವಿದ ಶ್ರೀ.ಡಿ.ವಿ.ಹಾಲಭಾವಿ, ಭಾರತೀಯ ಲಲಿತ ಕಲೆಗಳ ಪರಂಪರೆ, ಕರ್ನಾಟಕದಲ್ಲಿ ಕಲಾ ಪರಂಪರೆ ಬೆಳೆದು ಬಂದ ದಾರಿ, ಜನಪದ ಚಿತ್ರಕಲೆಯ ಪ್ರಾಚೀನತೆ, ಗುಳೇದಗುಡ್ಡದ ಭಿತ್ತಿಚಿತ್ರಗಳು, ಉತ್ತರ ದಕ್ಷಿಣ ಕರ್ನಾಟಕದಲ್ಲಿ ಕಲೆ ಚಿತ್ರಕಲೆಯಲ್ಲಿ ವಾಸ್ತವಿಕತೆ ಮತ್ತು ಅನುಕರಣ ಪ್ರೇಕ್ಷಕ ಕಲಾವಿದ ಮತ್ತು ವಿಮರ್ಶಕ ಹುಟ್ಟು ಕಲಾವಿದ ಹಾಗೂ

೧೩. ಡಾ.ಎಸ್.ಸಿ.ಪಾಟೀಲ : ಚಿತ್ರಾಕ್ಷಿ, ಸ್ಕೂಲ್ ಆಫ್ ಆರ್ಟ್ ವಜ್ರಮಹೋತ್ಸವ ಸಮಿತಿ, ಧಾರವಾಡ, ೧೯೯೫

ಪರಿಸರದಲ್ಲಿ ಹುಟ್ಟುವ ಕಲಾವಿದ ಪ್ರಾಚೀನ ಭಾರತದ ಭಿತ್ತಿಚಿತ್ರಗಳು ಕಲೆ ಮತ್ತು ಔದ್ಯೋಗೀಕರಣ ಒಂದಾದಲ್ಲೊಂದು ಪ್ರಾಗೈತಿಹಾಸಿಕ ರೇಖಾಚಿತ್ರ ಒಂದು ಟಿಪ್ಪಣಿ ಯಥಾದರ್ಶನ ಮುಂತಾದ ಅವರ ಕಲೆ ಮತ್ತು ಬದುಕನ್ನು ತೋರಿಸುವಂತದ್ದಾಗಿದೆ. ಧಾರವಾಡದ ಸ್ಕೂಲ್ ಆಫ್ ಆರ್ಟ್ ಇದರ ವಜ್ರಮಹೋತ್ಸವದ ಸವಿನೆನಪಿಗಾಗಿ ಚಿತ್ರಾಕ್ಷಿ ಎಂಬ ಸ್ಮರಣ ಸಂಚಿಕೆಯನ್ನು ಹೊರತದಿಂದೆ ೧೯೯೫ರಲ್ಲಿ ಪ್ರಕಟವಾಗಿದೆ.

**ರಂಗೋಲಿ ಚಿತ್ರಕಲೆ**[೧೪]

ಈ ಕೃತಿಯು ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಬಿಡುಗಡೆಯಾಗಿದ್ದು, ಇಲ್ಲಿ ದೇಶದ ಸಂಸ್ಕೃತಿಯನ್ನು ಪ್ರತಿನಿಧಿಸುವ ಅಧಿಕಾರ ಆಯಾ ದೇಶದ ಕಲೆಗಳಿಗಿರುತ್ತದೆ. ಸಾಮಾನ್ಯವಾಗಿ ದೆಶಿ ಮೂಲದ ಕಲೆಗಳು ಅವುಗಳದೇ ಆದ ವಿಶಿಷ್ಟ ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿರುತ್ತವೆ. ಜನಪದ ಕಲೆ ಸೌಂದರ್ಯದ ಆಶಯವಾಗಿ ಧಾರ್ಮಿಕ ಹಿನ್ನೆಲೆಯಲ್ಲಿ ಮತ್ತು ವೃತ್ತಿ ಮೂಲದ ಸಂದರ್ಭಗಳಲ್ಲಿ ಜನಿಸಿರುವ ಕಲೆಗಳಲೊಂದಾದ ರಂಗೋಲಿ ಚಿತ್ರಕಲೆಯು ಶಿಷ್ಟಪದ ಮತ್ತು ಜನಪದ ಮೂಲದ ಸಮ್ಮಿಶ್ರ ಕಲೆಯಾಗಿದೆ. ರಂಗೋಲಿ ಭಾರತದ ಅತ್ಯಂತ ಪ್ರಾಚೀನ ಚಿತ್ರಕಲೆ ಬದುಕಿನ ಖುಷಿಯನ್ನು ಸೌಭಾಗ್ಯ ಮಂಗಳಕರ ಪ್ರಸನ್ನತೆಯನ್ನು ಶುಭ ಸನ್ನಿವೇಶವನ್ನು ಹೇಳುವ ಲಾಲಿತ್ಯಪೂರ್ಣ ಕಲಾ ಕೌಶಲ್ಯವನ್ನು ರಂಗೋಲಿಯಲ್ಲಿ ಕಾಣಬಹುದು.

ಈ ರಂಗೋಲಿಯ ಪ್ರಾಚೀನತೆ ರಂಗೋಲಿ ಕಲೆಯ ಕುರಿತ ಕಥೆ, ಐತಿಹ್ಯ, ನಂಬಿಕೆಗಳು, ಒಗಟು, ಗಾದೆ, ಒಡಪುಗಳು, ರಂಗೋಲಿಯ ಸಾಮಗ್ರಿಗಳು, ಹಾಕುವ ವಿಧಾನಗಳು, ಆಧುನಿಕ ರೀತಿಯ ರಂಗೋಲಿಗಳು ಮತ್ತು ವೃತ್ತಿ ಮಾಡುವಾಗ ದೀಕ್ಷಾ ಸಂದರ್ಭದಲ್ಲಿ ದೇವರ ಮುಂದೆ ಹಬ್ಬದಲ್ಲಿ ಮದುವೆಯಲ್ಲಿ ಉತ್ಸಾಹದಲ್ಲಿ ಶೇಡಿಯ ರಂಗೋಲಿ ಜಾತ್ರೆಯ ರಂಗೋಲಿ, ನವಗ್ರಹ ಶಾಂತಿಯ ರಂಗೋಲಿ, ಗೃಹಶಾಂತಿಯ ವ್ಯಾಧಿ ನಿವಾರಣೆಯ ಭೂತ ಬಿಡಿಸುವ ಮೋಡಿಯಾಟದ ಸಮಾಧಿಯ ರಂಗೋಲಿ, ಹೀಗೆ ನಾನಾ ಸಂದರ್ಭಗಳಲ್ಲಿ ರಂಗೋಲಿ ಹಾಕುವುದನ್ನು ಅದರ ಸಾಂಪ್ರದಾಯಿಕ ಹಿನ್ನೆಲೆಗಳನ್ನು ಲೇಖಕರು ಸವಿಸ್ತಾರವಾಗಿ ಕೃತಿಯ ಮೂಲಕ ಮಾಹಿತಿಯನ್ನು ಒದಗಿಸಿದ್ದಾರೆ. ಇದು ಸಂಶೋಧನ್ಮಾಕ ರೀತಿಯಾಗಿ ಕೂಡ ಅನಿಸುತ್ತದೆ.

**ಹಚ್ಚೆ ಚಿತ್ರಕಲೆ**[೧೫]

ಜನಪದ ಮೂಲವಾದ ಹಚ್ಚೆ ಕಲೆಯು ತನ್ನದೇ ಆದ ಇತಿಹಾಸವನ್ನು ಹೊಂದಿದೆ. ಹಚ್ಚೆ ಚಿತ್ರಕಲೆಯ ಪ್ರಾಚೀನತೆ, ಭಾರತ ಹಾಗೂ ಕರ್ನಾಟಕದ ಹಚ್ಚೆಯ ಐತಿಹ್ಯ ಕುರಿತು ವಿವರಿಸಿದ್ದಾರೆ. ಹಚ್ಚೆಯ ಅಧ್ಯಯನದ ಬಗ್ಗೆ ಹಾಗೆಯೇ ಹಚ್ಚೆಯನ್ನು ಕುರಿತ ನಂಬಿಕೆಗಳು, ಹಚ್ಚೆಗೆ ಬಳಸುವ

೧೪. ಡಾ.ಎಸ್.ಸಿ.ಪಾಟೀಲ : ರಂಗೋಲಿ ಚಿತ್ರಕಲೆ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೨೦೦೪

೧೫. ಡಾ.ಎಸ್.ಸಿ.ಪಾಟೀಲ : ಹಚ್ಚೆ ಚಿತ್ರಕಲೆ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೨೦೦೪

ಸಾಮಗ್ರಿಗಳು, ಅದರ ಮಸಿಯನ್ನು ತಯಾರಿಸುವ ವಿಧಾನ, ಹಚ್ಚೆ ಹಾಕುವ ವಿಧಾನ, ಅದರ ಪ್ರಾಚೀನ ಹಿನ್ನೆಲೆ, ಹಚ್ಚೆ ಹಾಕಿಸಿಕೊಂಡ ಮೇಲೆ ಅನುಸರಿಸುವ ನಿಯಮಗಳು, ಹಚ್ಚೆ ಹಾಕುವ ಜನಾಂಗಗಳು, ಹಚ್ಚೆಯಹಾಡು ಇತ್ಯಾದಿ ವಿವರಗಳನ್ನು ಕೊಟ್ಟಿದ್ದಾರೆ.

**ಕರ್ನಾಟಕದ ಜನಪದ ಚಿತ್ರಕಲೆ[೧೬]**

ಈ ಪುಸ್ತಕವು ಡಾ.ಬಿ.ಆರ್.ಹಿರೇಮಠ ಅವರ ಮಾರ್ಗದರ್ಶನದಲ್ಲಿ ಡಾ.ಎಸ್.ಸಿ.ಪಾಟೀಲ ಅವರು ರಚಿಸಿದ ಪಿಎಚ್.ಡಿ ಗ್ರಂಥವಾಗಿದೆ. ಕರ್ನಾಟಕದ ಚಿತ್ರಕಲಾ ಕ್ಷೇತ್ರದಲ್ಲಿ ಮೊದಲು ಬಂದ ಪಿಎಚ್.ಡಿ ಮಹಾಪ್ರಬಂಧ ಇದಾಗಿದೆ. ಈ ಗ್ರಂಥದಲ್ಲಿ ಕರ್ನಾಟಕದ ಜನಪದ ಚಿತ್ರಕಲೆಯನ್ನು ವರ್ಗೀಕರಣ ಮಾಡಿಕೊಂಡು ವಿವೇಚಿಸಲಾಗಿದೆ. ಧರ್ಮ ಮೂಲ, ವೃತ್ತಿಮೂಲ, ಸೌಂದರ್ಯಮೂಲ, ಜನಪದ ಚಿತ್ರಕಲೆಗಳು ಎಂಬುದಾಗಿ ವರ್ಗೀಕರಿಸಿಕೊಂಡು ವಿವರಿಸಿರುವ ಇವರು ಇದರಲ್ಲಿ ರಂಗೋಲಿ, ಹಚ್ಚೆ, ಕೌದಿ, ಕಸೂತಿ, ನೇಯ್ಗೆಕಲೆ, ಹಬ್ಬ ಹರಿದಿನಗಳಲ್ಲಿ ಚಿತ್ರರಚಿಸುವ ಹಸೆ, ಬುಟ್ಟಿ ಮೇಲಿನ ಚಿತ್ರರಚನೆ, ದೀಪಾವಳಿಯಲ್ಲಿ ಚಿತ್ರರಚಿಸುವುದು. ಕಾರಹುಣ್ಣಿಮೆಯಲ್ಲಿ ಚಿತ್ರ ಬರೆಯುವುದು. ಬಾಗಿಲು ಸುತ್ತ ಅಲಂಕಾರ ಮಾಡುವುದು, ಚಿತ್ರವಿನ್ಯಾಸ ಮಾಡುವುದು. ಗೊಂಬೆಗಳ ತಯಾರಿಕೆ ಮತ್ತು ಬಣ್ಣ ಮಾಡುವುದು ಕಿನ್ನಾಳ ಕಲೆ, ಕಲಘಟಗಿ ತೊಟ್ಟಿಲು ತಯಾರಿಸುವುದು, ಗೋಕಾಕದ ಕಲೆ ದುರಗ ಮುರಗಿ ಪೆಟ್ಟಿಗೆಗೆ ಚಿತ್ರ ಬರೆಯುವುದು. ವ್ಯವಸಾಯ ಉಪಕರಣಗಳಿಗೆ ಅಲಂಕಾರ ಮಾಡುವುದು.

ಹೀಗೆ ಅನೇಕ ವಿಷಯಗಳ ಬಗ್ಗೆ ವಿವರವಾಗಿ ಚರ್ಚಿಸಲಾಗಿದೆ. ಜನಪದ ಮೂಲದ ಚಿತ್ರಕಲೆಯನ್ನು ಅವುಗಳ ಹುಟ್ಟು ಬೆಳವಣಿಗೆ ಜನಪದ ನಂಬುಗೆ ಆಚರಣೆ ಮುಂತಾದ ಅಂಶಗಳ ಹಿನ್ನೆಲೆಯ ಚಿತ್ರಕಲಾ ರಚನಾ ಪರಿಕರಗಳ ರಚನಾ ವಿಧಾನ ಚಿತ್ರಗಳ ವಸ್ತು ವಿಷಯ ಮುಂತಾದವುಗಳ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ. ಒಟ್ಟಾರೆಯಾಗಿ ಕರ್ನಾಟಕದ ಜನಪದ ಮೂಲದ ಚಿತ್ರಕಲೆಯನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಜೊತೆಗೆ ಪ್ರತಿಯೊಂದು ಅಧ್ಯಾಯ ಅವಶ್ಯಕತೆಗೆ ಅನುಗುಣವಾಗಿ ರೇಖಾಚಿತ್ರಗಳು, ವರ್ಣಚಿತ್ರಗಳು, ಛಾಯಚಿತ್ರಗಳನ್ನು ಈ ಕೃತಿಯಲ್ಲಿ ನೋಡಬಹುದು.

**ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು[೧೭]**

ಇದು ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳನ್ನು ಕುರಿತ ವಿಚಾರ ಸಂಕೀರಣದ ೧೪ ಲೇಖನಗಳನ್ನೊಳಗೊಂಡಿದೆ. ಚಿತ್ರಕಲೆ ಮತ್ತು ವಾಣಿಜ್ಯೋದ್ಯಮವನ್ನು ಕುರಿತು ಪ್ರೋ.ಶಂಕರ ಪಾಟೀಲ ಚಿತ್ರಕಲೆ ಮತ್ತು ಸಂಗೀತ ಲೇಖನದಲ್ಲಿ ಪ್ರೊ.ಸದಾನಂದ ಕನವಳ್ಳಿಯವರು ಭಾರತೀಯ

---

೧೬. ಡಾ.ಎಸ್.ಸಿ.ಪಾಟೀಲ : ಕರ್ನಾಟಕದ ಜನಪದ ಜನಪದ ಚಿತ್ರಕಲೆ, ವೀರಶೈವ ಅಧ್ಯಯನ ಸಂಸ್ಥೆ, ಗದಗ, ಡಂಬಳ, ೧೯೯೨

೧೭. ಡಾ.ಎಸ್.ಸಿ.ಪಾಟೀಲ : ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು, ಸ್ಕೂಲ್ ಆಫ್ ಆರ್ಟ್ ವಜ್ರಮಹೋತ್ಸವ ಸಮಿತಿ, ಧಾರವಾಡ, ೧೯೯೫

ಚಿತ್ರಕಲೆಯ ಭವ್ಯ ಪರಂಪರೆಯಲ್ಲಿ ರಾಗಮಾಲ ಚಿತ್ರಗಳು ಸಂಗೀತ ಮತ್ತು ಚಿತ್ರಕಲೆ ಇವೆರಡು ಲಲಿತ ಕಲೆಗಳ ಸಂಗಮ ರಾಗಮಾಲೆ ಎಂದರೆ ರಾಗಮಾಲೆ ಚಿತ್ರಕಲೆಯ ರಾಗಮಾಲೆಯನ್ನು ವಸ್ತುವಾಗಿಸಿಕೊಳ್ಳುವ ಪೂರ್ವದಲ್ಲಿ ಮೇಲೆ ಸಂಗೀತ ಮತ್ತು ಕಾವ್ಯ ರಾಗಮಾಲೆ ಕಲ್ಪನೆಯನ್ನು ರೂಢಿಯಲ್ಲಿ ತಂದಿದ್ದಾರೆ. ಚಿತ್ರಕಲೆ ಮತ್ತು ಶಿಲ್ಪ ಲೇಖನವನ್ನು ಡಾ.ಸಿಂಧಗಿ ರಾಜ ಶೇಖರ್ ಅವರು ಬರೆದಿದ್ದಾರೆ. ಅದರಲ್ಲಿ ಚಿತ್ರಕಲೆ ಮತ್ತು ಶಿಲ್ಪ ಇವುಗಳಲ್ಲಿ ಯಾವುದು ಮೊದಲುಗೊಂಡಿತೋ ಎನ್ನುವುದನ್ನು ಗ್ರಹಿಸುವುದು ಅಸಾಧ್ಯವಾದದ್ದು ಎಂದಿದ್ದಾರೆ. ಚಿತ್ರಕಲೆ ಮತ್ತು ಇತಿಹಾಸ ಡಾ. ಎಚ್.ಆರ್.ರಘುನಾಥಭಟ್ಟ ಚಿತ್ರಕಲೆ ಮತ್ತು ಮನೋವಿಜ್ಞಾನ ಎಂಬ ಲೇಖನದಲ್ಲಿ ಡಾ.ಎಸ್.ಬಿ.ಹವಳಪ್ಪನವರು, ಡಾ.ಎಸ್.ಸಿ.ಪಾಟೀಲರ ಚಿತ್ರಕಲೆ ಮತ್ತು ಶಿಕ್ಷಣವೆಂಬ ಲೇಖನದ ಒಟ್ಟು ಹದಿನಾಲ್ಕು ಲೇಖನಗಳು ಚಿತ್ರಕಲೆ ಮತ್ತು ಅದರ ಪೂರಕ ಕ್ಷೇತ್ರಗಳನ್ನು ಕುರಿತಂತೆ ಬರೆದ ಲೇಖನಗಳಾಗಿವೆ.

**ಬಾರೋಕ್ ಕಲೆ**[೧೮]

ಪಾಶ್ಚಾತ್ಯ ಕಲಾ ರಂಗದಲ್ಲಿ ಕ್ರಿ.ಶ.೧೬.ನೇ ಶತಮಾನದಲ್ಲಿ ಹುಟ್ಟಿಕೊಂಡು ಮುಂದಿನ ಮೂರು ಶತಮಾನಗಳ ಕಾಲ ವೈಭವದಿಂದ ಮೆರೆದ ಬಾರೋಕ್ ಕಲೆಯನ್ನು ಕುರಿತು ಸಂಶೋಧನಾತ್ಮಕವಾದ ಕೃತಿ ಇದಾಗಿದೆ. ಬಾರೋಕ್ ಕಲೆಯ ಹುಟ್ಟು ಬೆಳವಣಿಗೆ ಬಾರೋಕ್ ವಾಸ್ತುಕಲೆ, ಶಿಲ್ಪಕಲೆ, ಬಾರೋಕ್ ಚಿತ್ರಕಲೆ, ಬಾರೋಕ್ ಶೈಲಿಯ ಕಲಾವಿದರು ಮತ್ತು ಅವರ ಕಲಾಕೃತಿಗಳ ವಿಶ್ಲೇಷಣೆ ಹೀಗೆ ಬಾರೋಕ್ ಕಲಾಪ್ರಕಾರವನ್ನು ಕುರಿತ ಅತ್ಯಂತ ಮಹತ್ವದ ಅಂಶಗಳು ಇಲ್ಲಿ ಚರ್ಚಿತಗೊಂಡಿವೆ. ಕಪ್ಪು, ಬಿಳುಪು ಮತ್ತು ವರ್ಣ ಕಲಾಕೃತಿಗಳ ಛಾಯಾಚಿತ್ರಗಳಿವೆ.

**ವರ್ಣಸಂಚಯ**[೧೯]

ಚಿತ್ರಕಲೆಯನ್ನು ಕುರಿತ ಸಂಶೋಧನ ಲೇಖನಗಳು ಇದರಲ್ಲಿವೆ. ಬಾಗಲಕೋಟೆ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ, ಚಿತ್ರಕಲೆಯ ಷಡಂಗಗಳು ರೇಖಾಚಿತ್ರಕಲೆ, ಶಬ್ದ, ರೇಖೆ, ವರ್ಣ ಅಂತರ್ ಶಿಸ್ತೀಯ ಅಧ್ಯಯನ ಚಿತ್ರಕಲೆ ಮತ್ತು ಶಿಕ್ಷಣ, ಕರ್ನಾಟಕದಲ್ಲಿ ಚಿತ್ರಕಲಾ ಶಿಕ್ಷಣ, ಭಾರತೀಯ ಚಿತ್ರಕಲೆಯ ಆಧುನಿಕ ಒಲವುಗಳು, ಜನಪದ ಚಿತ್ರಕಲೆಯ ವರ್ಗೀಕರಣ, ಜನಪದ ಕೌದಿ ಚಿತ್ರಕಲಾ ವಿನ್ಯಾಸಗಳು, ಜನಪದ ಕಸೂತಿ ಚಿತ್ರಕಲಾ ವಿನ್ಯಾಸಗಳು, ಹಸ್ತಪ್ರತಿ ಚಿತ್ರಕಲೆ, ಧಾರವಾಡ ಜಿಲ್ಲೆಯ ಚಿತ್ರಕಲೆ ಹೀಗೆ ಒಟ್ಟು ಹನ್ನೆರಡು ಸಂಶೋಧನೆ ಲೇಖನಗಳಿವೆ. ಹಲವಾರು ಛಾಯಾ ಚಿತ್ರಗಳು ಇಲ್ಲಿ ಆಯಾ ವಿಷಯಕ್ಕೆ ಅನುಗುಣವಾಗಿ ಸಂಗ್ರಹಗೊಂಡಿವೆ.

---

೧೮. ಡಾ.ಎಸ್.ಸಿ.ಪಾಟೀಲ : ಬಾರೋಕ ಕಲೆ, ಭಾರತೀಯ ಕಲಾಕೇಂದ್ರ, ಧಾರವಾಡ, ೧೯೮೭

೧೯. ಡಾ.ಎಸ್.ಸಿ.ಪಾಟೀಲ : ವರ್ಣ ಸಂಜಯ, ಪ್ರಕಾಶನ,ವಿಜಯ ಚಿತ್ರಕಲಾ ಮಹಾವಿದ್ಯಾಲಯ, ಇಲಕಲ್. ೨೦೦೧

**ನಿಜದ ನೆಲೆ**[20]

ಡಾ.ಬಿ.ಕೆ.ಹಿರೇಮಠರ ಅಭಿನಂದನಾ ಗ್ರಂಥವಾಗಿದ್ದು. ಈ ಗ್ರಂಥದಲ್ಲಿ ಒಟ್ಟು ೧೩೭ ಸಂಶೋಧನಾ ಲೇಖನಗಳಿವೆ. ಅವುಗಳಲ್ಲಿ ಸುಮಾರು ೮೦ ಲೇಖನಗಳು ಚಿತ್ರಕಲೆಯನ್ನು ಕುರಿತಾಗಿವೆ. ಶಾಸ್ತ್ರ ಗ್ರಂಥಗಳು, ಚಿತ್ರಕಲೆ, ವಿಷ್ಣುಧರ್ಮೋತ್ತರ ಚಿತ್ರಕಲೆ, ಶ್ರೀತತ್ವನಿಧಿ ಚಿತ್ರಕಲೆ, ಮಾನಸೋಲ್ಲಾಸ ಚಿತ್ರಕಲೆ, ಶಿವತತ್ವರತ್ನಾಕರ ಚಿತ್ರಕಲೆ, ಕರ್ನಾಟಕ ಹಸ್ತಪತ್ರಿ ಚಿತ್ರಕಲೆ, ಜೈನ, ವೀರಶೈವ, ಮುಸ್ಲಿಂ, ಚಿತ್ರಕಲೆ, ಉದ್ದರಣೆ ಪಟಲಗಳು ಚಿತ್ರಕಲೆ ಕರ್ನಾಟಕದ ಗುಹಾ ಚಿತ್ರಕಲೆ, ಕರ್ನಾಟಕದ ಭಿತ್ತಿಚಿತ್ರಕಲೆ ಮೊದಲಾದ ಕರ್ನಾಟಕದ ಚಿತ್ರಕಲೆಯ ವಿವಿಧ ವಿಷಯಗಳ ಕುರಿತು ೧೨೦ಕ್ಕೂ ಹೆಚ್ಚು ಲೇಖನಗಳು ಈ ಗ್ರಂಥದಲ್ಲಿ ಸಂಗ್ರಹಗೊಂಡಿದೆ.

**ವಿ. ಟಿ. ಕಾಳೆ**[21]

ಕಲಾವಿದ ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿದ್ದ ವಿ.ಟಿ.ಕಾಳೆಯವರ ಜೀವನ ಮತ್ತು ಕಲಾಕೃತಿಗಳ ಕುರಿತು ಸ್ಥೂಲವಾದ ವಿವರಗಳನ್ನು ಈ ಕೃತಿಯಲ್ಲಿ ಕಾಣಬಹುದು. ೧೯೩೪ರಲ್ಲಿ ಬಾಗಲಕೋಟೆ ಜಿಲ್ಲೆಯ ಹುನಗುಂದದಲ್ಲಿ ಜನಿಸಿದ ವಿ.ಟಿ.ಕಾಳೆಯವರ ಬಾಲ್ಯ ಜೀವನ, ಶಿಕ್ಷಣ, ಕಲಾಶಿಕ್ಷಣ, ಶಿಕ್ಷಕ ವೃತ್ತಿ, ಮತ್ತು ನಿವೃತ್ತಿಯ ದಿನಗಳ ಬಗ್ಗೆ ಮಾ ಇವೆ. ವಿ.ಟಿ.ಕಾಳೆಯವರ ಕಲಾ ಚಟುವಟಿಕೆಗಳು ಕಲಾಕೃತಿಗಳು, ಭಾವಚಿತ್ರ, ರಾಗಮಾಲಾಚಿತ್ರಗಳು, ರೇಖಾಚಿತ್ರಗಳು ಮತ್ತು ಕಲಾಕೃತಿಗಳು ಕುರಿತು ದೃಶ್ಯಕಲೆಯ ಹಿನ್ನೆಲೆಯಲ್ಲಿ ಇವುಗಳನ್ನು ವಿವರಿಸಿದ್ದಾರೆ. ಹಲವಾರು ವರ್ಷಗಳಿಂದ ಕಾಳೆಯವರು ನಟರಾಗಿ ನಿರ್ದೇಶಕರಾಗಿ ರಂಗಭೂಮಿಯ ಪ್ರಸಾದನ ಕಲೆಯ ಕಲಾವಿದರಾಗಿ ಸೇವೆ ಸಲ್ಲಿಸಿದ್ದಾರೆ. ಇವರು ಕಲಾಸಾಹಿತಿಯು ಕೂಡಾ ಆಗಿದ್ದಾರೆ. ಇವರಿಗೆ ದೊರೆತ ಪ್ರಶಸ್ತಿ ಪುರಸ್ಕಾರಗಳ ಜೊತೆಗೆ ಇವರ ಕಲಾಕೃತಿಗಳ ವರ್ಣಮಯ ಛಾಯಾಚಿತ್ರಗಳನ್ನು ಈ ಕೃತಿಯಲ್ಲಿ ಕಾಣಬಹುದು.

**ಸಾಧನೆಯ ಸಮುಚ್ಚಯ ಎಲ್.ಶಿವಲಿಂಗಪ್ಪ**[22]

ಚಿತ್ರಕಲಾವಿದ ಎಲ್.ಶಿವಲಿಂಗಪ್ಪನವರ ಜೀವನ ಮತ್ತು ಕಲಾಕೃತಿಗಳ ಕುರಿತು ಸ್ಥೂಲವಾದ ವಿವರಗಳನ್ನು ಈ ಕೃತಿಯಲ್ಲಿ ಕಾಣಬಹುದು. ಕಲಾವಿದರು ಮೈಸೂರಿನವರಾಗಿದ್ದ ಮೈಸೂರು ಸಾಂಸ್ಕೃತಿಕ ಅಂಶಗಳನ್ನು ಇಲ್ಲಿ ಕಾಣಬಹುದು. ಕಲಾವಿದರ ಕಲಾಕೃತಿ ರಚನೆ ಎಲ್ಲ ವಿಧಿಗಳನ್ನು ಇಲ್ಲಿ ಚೆನ್ನಾಗಿ ಉಲ್ಲೇಖಿಸಿದ್ದಾರೆ. ಕಲಾವಿದನ ಸಾಹಿತ್ಯ ಸೃಷ್ಟಿ, ಕಲಾಚಟುವಟಿಕೆಗಳು, ಸಮಾಜ

---

೨೦. ಡಾ.ಎಸ್.ಸಿ.ಪಾಟೀಲ ಮತ್ತು ಸತ್ಯಾನಂದ ಪಾತ್ರೋಟ (ಸಂ.) : ನಿಜದ ನಲೆ, ಸತ್ಯಾನಂದ ಪಾತ್ರೋಟ, ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ, ಬಸವೇಶ್ವರ ವಿದ್ಯಾವರ್ಧಕ ಸಂಘ, ಬಾಗಲಕೋಟ, ೨೦೦೩

೨೧. ಡಾ.ಎಸ್.ಸಿ.ಪಾಟೀಲ : ವಿ.ಟಿ.ಕಾಳೆ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು

೨೨. ಡಾ.ಎಸ್.ಸಿ.ಪಾಟೀಲ : ಸಾಧನೆಯ ಸಮುಚ್ಚಯ ಎಲ್.ಶಿವಲಿಂಗಪ್ಪ, ರಾಷ್ಟ್ರೀಯ ದೃಶ್ಯಕಲಾ ಅಕಾಡೆಮಿ, ಧಾರವಾಡ. ೨೦೧೦

ಕಾರ್ಯ, ಬದುಕಿನ ಹಿನ್ನೋಟ, ಕಲಾಗ್ಯಾಲರಿ ಸ್ಥಾಪನೆ, ಪ್ರಶಸ್ತಿಗಳು ಸಂಶೋಧನ್ಮಾಕ ಬರಹವನ್ನು ಕಾಣಬಹುದು. ಕಲಾವಿದರು ವಿದೇಶ ಪ್ರವಾಸದ ಅನುಭವಗಳು ಮತ್ತು ಕಲಾಕೃತಿಗಳ ವರ್ಣ ಛಾಯಾಚಿತ್ರಗಳನ್ನು ಕಾಣಬಹುದು.

### ದೃಶ್ಯ ಸಂಚಲನ[೨೩]

ದೃಶ್ಯ ಸಂಚಲನ ಈ ಕೃತಿಯಲ್ಲಿ ೧೨ ಸಂಶೋಧನಾ ಲೇಖನಗಳಿವೆ. ಚಿತ್ರಕಲಾ ಪರಂಪರೆ ಬೆಳೆದು ಬಂದ ಹೆಜ್ಜೆಯ ಗುರುತುಗಳನ್ನು ಇಲ್ಲಿನ ಬಹುಪಾಲು ಲೇಖನಗಳಲ್ಲಿ ಸ್ಥೂಲವಾಗಿ ಅವಲೋಕಿಸುವ ಪ್ರಯತ್ನ ಮಾಡಲಾಗಿದೆ. ಇಲ್ಲಿನ ಲೇಖನಗಳು ವಿವಿಧ ಸಂದರ್ಭದಲ್ಲಿ ವಿಚಾರ ಸಂಕಿರಣ ಸಮ್ಮೇಳನ ಮತ್ತು ಸ್ಮರಣ ಸಂಚಿಕೆಗಳಿಗಾಗಿ ಸಿದ್ಧಪಡಿಸಿದವುಗಳಾಗಿವೆ. ಬುಜರಕಂಚಿನ ಹಳ್ಳಿಯ ಭಿತ್ತಿಚಿತ್ರಕಲೆ ಎಂ.ವಿ.ಎ.ಪದವಿಗಾಗಿ ಸಾದರಪಡಿಸಿದ ಕಿರು ಸಂಶೋಧನಾ ಪ್ರಬಂಧ ಇದಾಗಿದೆ. ಭಿತ್ತಿಚತ್ರಕಲೆಯ ಹೊಸದೊಂದು ನೆಲೆಯನ್ನು ಇಲ್ಲಿ ಪರಿಚಯಿಸಲಾಗಿದೆ. ಹಳಿಯಾಳದ ಬಿ.ಕೆ.ಹಳ್ಳಿಯ ಪರಿಚಯ, ಭಿತ್ತಿಚಿತ್ರಕಲೆಯ ಅರ್ಥ, ಸ್ವರೂಪ ಭಿತ್ತಿ ರಚನಾವಿಧಾನ, ಬೆಳವಣಿಗೆಯ ಹಿನ್ನೆಲೆಯ, ಭಿತ್ತಿಚಿತ್ರಗಳ ವರ್ಗೀಕರಣ, ವಸ್ತುವಿಷಯ, ಕಾಲ, ಶೈಲಿ, ಮತ್ತು ತಂತ್ರಗಾರಿಕೆ ಈ ವಿಷಯದ ಪ್ರಮುಖ ಅಂಶಗಳನ್ನು ಇಲ್ಲಿ ಸಂಶೋಧನೆ ಮಾಡಲಾಗಿದೆ. ಈ ಕಿರುಪ್ರಬಂಧ ಅನುಗುಣವಾಗಿ ಛಾಯಾಚಿತ್ರಗಳು ಇಲ್ಲಿ ಸಂಗ್ರಹಗೊಂಡಿವೆ.

### ಹೈದ್ರಾಬಾದ ಕರ್ನಾಟಕದ ಸಾಂಸ್ಕೃತಿಕ ವಿಷಯ ಕೋಶ ಲಲಿತಕಲೆಗಳ ಸಂಪುಟ[೨೪]

ಹೈದರಾಬಾದ ಕರ್ನಾಟಕ ಸಾಂಸ್ಕೃತಿಕ ವಿಷಯ ಕೋಶವಾದ ಲಲತಕಲೆಗಳ ಸಂಪುಟವು ಗುಲಬರ್ಗಾ ವಿಶ್ವವಿದ್ಯಾಲಯವು ೨೦೧೨ರಲ್ಲಿ ಪ್ರಕಟಗೊಂಡಿದೆ. ಜಾನಪದ, ಲಲಿತಕಲೆ, ಕನ್ನಡ ಸಾಹಿತ್ಯ, ಸಂಕೀಣಸಂಪುಟಗಳ ಹಲವಾರು ವಿಷಯಗಳನ್ನು ಒಂದು ಕಡೆ ಸಂಗ್ರಹಿಸುವ ಪ್ರಯತ್ನ ಮಾಡಲಾಗಿದೆ. ಸಂಪುಟದಲ್ಲಿ ವಿಷಯದ ಶೀರ್ಷಿಕೆಯೊಂದಿಗೆ ಅಕಾರಾದಿಯಾಗಿ ಜೋಡಿಸಲಾಗಿದ್ದು ಹೈದರಾಬಾದ ಕರ್ನಾಟಕದಲ್ಲಿ ಒಳಗೊಂಡಿರುವ ಕಲೆ, ಸಾಹಿತ್ಯ ಜಾನಪದ, ಲಲಿತಕಲೆ ಒಂದೊಂದು ಭಾಗವಾಗಿ ಕ್ಷೇತ್ರಕ್ಕೆ ಬಂದು ಹೊಸ ಬೆಳಕು ನೀಡಲಾಗಿದೆ. ವಿಷಯಗಳು ಆ ಭಾಗದ ಮೂಲೆ ಮೂಲೆಗಳಂದಲೂ ಎಲ್ಲಾ ಅಂಶಗಳು ಈ ಸಂಪುಟದಲ್ಲಿ ಸಂಕ್ಷಿಪ್ತ ಮಾಹಿತಿಯನ್ನು ದೊರೆಯುತ್ತದೆ.

ಆಯಾ ಕ್ಷೇತ್ರಕ್ಕೆ ಸಂಬಂಧಪಟ್ಟ ಜನರ ಶ್ರಮವು ಈ ಸಂಪುಟದಲ್ಲಿ ನೋಡಬಹುದು. ಒಂದೊಂದು ವಿಷಯದ ಬಗ್ಗೆ ಮಾಹಿತಿ ಬೇಕಾದಾಗ ಹಲವಾರು ಪುಸ್ತಕಗಳನ್ನು ಹುಡುಕಲು

---

೨೩. ಡಾ.ಎಸ್.ಸಿ.ಪಾಟೀಲ : ದೃಶ್ಯ ಸಂಚಲನ, ರಾಷ್ಟ್ರೀಯ ದೃಶ್ಯಕಲಾ ಅಕಾಡೆಮಿ, ಧಾರವಾಡ. ೨೦೧೧

೨೪. ಡಾ. ಎಸ್. ಸಿ. ಪಾಟೀಲ ಮತ್ತು ಡಾ. ಪಿ. ಕೆ. ಖಂಡೋಬಾ (ಸಂ.) : ಹೈದ್ರಾಬಾದ್-ಕರ್ನಾಟಕ ಸಾಂಸ್ಕೃತಿಕ ವಿಷಯ ಕೋಶ ಲಲಿತಕಲೆಗಳ ಸಂಪುಟ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ. ೨೦೧೨

ಸಮಯವ್ಯರ್ಥ ಆದರೆ ಈ ಸಂಪುಟದಲ್ಲಿ ಎಲ್ಲಾ ವಿಷಯಗಳ ಮಾಹಿತಿಯು ದೊರೆಯುತ್ತದೆ. ಈ ಸಂಪುಟ ರಚಿಸಲು ಪ್ರಯತ್ನ ಮಾಡಿದ ಸಂಪಾದಕರು ಡಾ.ಎಸ್.ಸಿ.ಪಾಟೀಲ, ಹಾಗೂ ಡಾ.ಪಿ.ಕೆ.ಖಂಡೋಬಾ ಅವರು ಕ್ಷೇತ್ರಕ್ಕೆ ಒಂದು ಒಳ್ಳೆ ಕೊಡುಗೆ ನೀಡಿದ್ದಾರೆ. ಜೊತೆಗೆ ಗುಲಬರ್ಗಾ ವಿಶ್ವವಿದ್ಯಾಲಯ ಹಾಗೂ ಕನ್ನಡ ಭಾಷಾಭಿವೃದ್ಧಿ ಯೋಜನೆಯು ಸಹ ಕೈಗೊಂಡಿದೆ.

**ಸುರೇಶ ಕುಲಕರ್ಣಿಯವರ ಕೃತಿಗಳು**

**ಕಲೋಪಾಸಕ ಎಂ. ಜಿ. ವಾಚೇದಮಠ**[೨೫]

ರೇಖಾ ಚಿತ್ರಕ್ಕೆ ಹೆಸರಾದ ಕಲೋಪಾಸಕ ಎಂ.ಜಿ.ವಾಚೇದಮಠರ ಬಗ್ಗೆ ಪುಸ್ತಕ ಬರೆದಿದ್ದಾರೆ. ಕಲಾವಿದನ ಬಾಲ್ಯ ಜೀವನ ಪರಿಸರ ಶಿಕ್ಷಣ ಮತ್ತು ಕಲಾಶಿಕ್ಷಣ, ಕಲಾಬದುಕನ್ನು ಸತ್ಕಾರ ಸನ್ಮಾನಗಳು ಕುರಿತು ವಿವರಿಸಲಾಗಿದೆ. ವಾಚೇದಮಠರು ರೇಖಾಚಿತ್ರಗಳನ್ನು ಹೆಚ್ಚಾಗಿ ರಚಿಸುತ್ತಾರೆ. ಚೌಕಾಕಾರದ ರೇಖಾ ಚಿತ್ರಗಳನ್ನು ರಚಿಸುವುದು ಗುಂಪು ಚಿತ್ರಗಳನ್ನು, ಜನರ ಸಮೂಹಗಳನ್ನು ರೇಖಾ ವಿನ್ಯಾಸದಲ್ಲಿ ಸಂಯೋಜಿಸಿರುವುದು ಇವರ ಸೃಜನಾತ್ಮಕತೆಯನ್ನು ತೋರುತ್ತದೆ. ಇವರು ರೇಖಾ ಚಿತ್ರಗಳು, ಭಾವಚಿತ್ರಗಳು, ಸಂಯೋಜನಾ ಚಿತ್ರ, ಸ್ಥಿರ ಚಿತ್ರ, ನಿಸರ್ಗ ಚಿತ್ರಗಳನ್ನು ಸಹ ರಚಿಸಿರುತ್ತಾರೆ. ಇವರ ತಂತ್ರ ಶೈಲಿ, ಪ್ರಭಾವ, ಪ್ರೇರಣೆಗಳನ್ನು ಇಲ್ಲಿ ವಿವರವಾಗಿ ಪರಿಚಯ ಮಾಡಿಕೊಡಲಾಗಿದೆ.

**ಪಿಕಾಸೋ**[೨೬]

ಪಾಶ್ಚಾತ್ಯ ಖ್ಯಾತ ಕಲಾವಿದ ಪಿಕಾಸೊನ ಕುರಿತು ಈ ಕೃತಿಯನ್ನು ರಚಿಸಿದ್ದಾರೆ. ಕಲಾವಿದ ಪಾಬ್ಲೋಪಿಕಾಸೋನ ಕಲಾ ಬದುಕನ್ನು ಸರಳವಾದಿ ರೀತಿಯಲ್ಲಿ ನಿರೂಪಿಸಿದ್ದಾರೆ. ಕಲಾ ಬದುಕು ಕಲಾಕೃತಿ ಕಲಾಶೈಲಿಗಳ ಕುರಿತು ಇಲ್ಲಿ ಮಾಹಿತಿ ಇದೆ. ಪಿಕಾಸೋ ಕಂಡು ಹಿಡಿದ ಕ್ಯೂಬಿಜಂ ಶೈಲಿಯ ಗುಣಲಕ್ಷಣಗಳನ್ನು ಕ್ಯೂಬಿಜಂ ಶೈಲಿಯ ಕಲಾಕೃತಿಗಳನ್ನು ಸಹ ಕೃತಿಯಲ್ಲಿ ವಿವರಿಸಿದ್ದು ಕಂಡುಬರುತ್ತದೆ.

**ಡಾ. ಎಂ. ಎಂ. ಕಲಬುರ್ಗಿ**[೨೭]

ಸೋಮೇಶ್ವರನ "ಮಾನಸೋಲ್ಲಾಸ" ಎಂಬ ಗ್ರಂಥವನ್ನು ಕಲಬುರ್ಗಿಯವರು ಕನ್ನಡಕ್ಕೆ ಅನುವಾದಿಸಿ, ಸಂಪಾದಿಸಿದ್ದಾರೆ. ಇದು ವಿಶ್ವಕೋಶ ಮಾದರಿಯ ಗ್ರಂಥವಾಗಿದ್ದು. ಒಂದು ಅಧ್ಯಾಯವನ್ನು ಚಿತ್ರಕಲೆಗೆ ಮೀಸಲಿರಿಸಲಾಗಿದೆ. ಇಲ್ಲಿನ ಚಿತ್ರಕಲಾ ವಿಷಯದಲ್ಲಿ ಭಿತ್ತಿ ತಯಾರಿಕೆ,

---

೨೫. ಸುರೇಶ ಕುಲಕರ್ಣಿ : ಕಲೋಪಾಸಕ ಎಂ.ಜಿ.ವಾಚೆದಮಠ, ಶ್ರೀಮತಿ ಶಾರದ ವಾಚೇದಮಠ ಪ್ರಕಾಶನ, ಧಾರವಾಡ, ೧೯೮೫

೨೬. ಸುರೇಶ ಕುಲಕರ್ಣಿ : ಪಿಕಾಸೋ, ತಾರಾ ಪ್ರಕಾಶನ, ಭಾರತಿನಗರ, ಧಾರವಾಡ, ೧೯೮೧

೨೭. ಡಾ.ಎಂ.ಎಂ.ಕಲಬುರ್ಗಿ : ಮಾನಸೋಲ್ಲಾಸ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಅದರ ಪರಿಕರಗಳು ಚಿತ್ರರಚನೆ ಅದರ ಪರಿಕರಗಳು, ಚಿತ್ರಪ್ರಕಾರಗಳು, ಬಣ್ಣ, ಕುಂಚ, ಅಂಟು ತಯಾರಿಕೆ ಹೀಗೆ ಹಲವಾರು ಮುಖ್ಯವಾದ ಸಂಗತಿಗಳ ವಿವರವಿದೆ.

**ಸುರೇಶ ಹಾಲಭಾವಿ**[೨೮]

ಧಾರವಾಡದ ಹಿರಿಯ ಕಲಾವಿದರಾದ ಎಮ್.ಆರ್.ಬಾಳೀಕಾಯಿಯವರ ಕುರಿತು ಕೃತಿ ರಚನೆ ಮಾಡಿದ್ದು ಇದು ಲಲಿತಕಲಾ ಅಕಾಡೆಮಿಯಿಂದ ಪ್ರಕಟಗೊಂಡಿದೆ. ಕಲಾಗುರು ಎಂದೇ ಪ್ರಸಿದ್ಧಿ ಪಡೆದ ಎಂ.ಆರ್.ಬಾಳಿಕಾಯಿಯವರ ಬಾಲ್ಯ ಜೀವನ, ಕಲಾಶಿಕ್ಷಣ, ವೃತ್ತಿ ಕಲಾಬದುಕು, ಕಲಾಕೃತಿಗಳು ಅವುಗಳ ತಂತ್ರ, ಶೈಲಿ, ಪ್ರಭಾವ, ಪ್ರೇರಣೆ ಇವುಗಳ ಕುರಿತು ಬರೆಯಲಾಗಿದೆ.

**ಬಿ.ಎಂ.ಪಾಟೀಲ್**[೨೯]

೧೯೨೦ರಲ್ಲಿ ಬೆಳಗಾಂವ್ ನಗರದಲ್ಲಿ ಜನಿಸಿದ "ಕೃಷ್ಣರಾವ್ ಭೀಮರಾವ್ ಕುಲಕರ್ಣಿಯವರ" ಕುರಿತು ಬಿ.ಎಂ.ಪಾಟೀಲ ಅವರು ಕೃತಿರಚನೆ ಮಾಡಿದ್ದು ಇದು ಲಲಿತಕಲಾ ಅಕಾಡೆಮಿಯಿಂದ ಪ್ರಕಟಗೊಂಡಿದೆ. ಕಲಾವಿದರ ಶಿಕ್ಷಣ ವೃತ್ತಿ ಜೀವನ, ಕಲಾಶಿಕ್ಷಣ ಪ್ರೇರಣೆ, ಅವರ ರೇಖಾಚಿತ್ರ, ವರ್ಣಚಿತ್ರಗಳ ಕಲಾಕೃತಿಗಳು ಹಾಗೂ ಕಲಾಶೈಲಿ, ಕುರಿತು ಮಾಹಿತಿಗಳು ಕನ್ನಡ ಮತ್ತು ಆಂಗ್ಲಭಾಷೆಯಲ್ಲಿವೆ. ಕಲಾಕೃತಿಗಳ ಕಪ್ಪು, ಬಿಳುಪು, ವರ್ಣಚಿತ್ರಗಳು ಪ್ರಕಟಗೊಂಡಿವೆ.

**ಶಂಕರ ಪಾಟೀಲರ ಕಲಾ ತಪಸ್ವಿ ಡಾ.ಮಿಣಜಗಿ**[೩೦]

೧೯೮೭ರಲ್ಲಿ ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ, ಮೂರು ಸಾವಿರ ಮಠ, ಹುಬ್ಬಳ್ಳಿ ಇವರಿಂದ ಈ ಗ್ರಂಥಪ್ರಕಟಗೊಂಡಿದೆ. ಮಿಣಜಗಿಯವರು ತಮ್ಮ ಸಂಪೂರ್ಣ ಜೀವನವನ್ನು ಕಲೆಗಾಗಿ ಅರ್ಪಿಸಿಕೊಂಡಿದನ್ನು ಗಮನಿಸಿ ಲೇಖಕರು ಅವರನ್ನು ಕಲಾತಪಸ್ವಿ ಎಂದು ಕರೆದು ಮಿಣಜಗಿಯವರ ಕಲೆ ಮತ್ತು ಕಲಾಬದುಕನ್ನು ಮುಖ್ಯವಾಗಿಟ್ಟುಕೊಂಡು ಹನ್ನೊಂದು ಅಧ್ಯಾಯಗಳಲ್ಲಿ ವಿಷಯಗಳನ್ನು ಸಂಕ್ಷಿಪ್ತವಾಗಿ ಬರೆದಿದ್ದಾರೆ. ಬಾಲ್ಯ, ಶಿಕ್ಷಣ, ಚಿತ್ರಕಲಾ ಶಿಕ್ಷಣ, ಚಿತ್ರಕಲಾ ಜೀವನ ಪ್ರಾರಂಭ ಚಿತ್ರಕಲೆಗೆ ರಾಗಮಾಲ ದೇಣಿಗೆ, ಚಿತ್ರಕಲಾ ಶಿಕ್ಷಕ ಕಲಾಸೇವೆಗೆ ಮನ್ನಣೆ ಇತ್ಯಾದಿ ವಿವರಗಳನ್ನು ಕೃತಿ ಒಳಗೊಂಡಿದೆ.

---

೨೮. ಸುರೇಶ ಹಾಲಭಾವಿ : ಎಂ.ಆರ್.ಬಾಳಿಕಾಯಿ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು. ೨೦೦೪

೨೯. ಬಿ.ಎಂ.ಪಾಟೀಲ : ಕೆ.ಬಿ.ಕುಲಕರ್ಣಿ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು. ೨೦೧೨

೩೦. ಶಂಕರ ಪಾಟೀಲ : ಕಲಾ ತಪಸ್ವಿ ಡಾ.ಮಿಣಜಗಿ, ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳಿ, ಮೂರು ಸಾವಿರ ಮಠ, ಹುಬ್ಬಳ್ಳಿ, ೧೯೮೭

**ಎಸ್. ಕೆ. ಹೂಗಾರ ಅವರ ಕೃತಿ[೩೧]**

ಕಲಾವಿದ ಡಿ. ವಿ. ಹಾಲಭಾವಿಯವರ ಕುರಿತು ಕಿರು ಪುಸ್ತಕವನ್ನು ಬರೆದಿದ್ದಾರೆ. ಇದನ್ನು ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೮೭ರಲ್ಲಿ ಪ್ರಕಟಿಸಿತು. ಇದರಲ್ಲಿ ಡಿ.ವಿ. ಹಾಲಭಾವಿಯವರ ಬಾಲ್ಯ ಜೀವನ ಅವರ ಮನೆತನದ ವಿವರಗಳಿವೆ. ಹಾಲಭಾವಿಯವರು ರಚನೆ ಮಾಡಿದ ಕಲಾಕೃತಿಗಳು, ಕಪ್ಪು-ಬಿಳುಪು ಛಾಯಾಚಿತ್ರಗಳಿವೆ ಹಾಗೂ ಇವರಿಗೆ ದೊರೆತ ಪ್ರಶಸ್ತಿ ಪುರಸ್ಕಾರಗಳ ವಿವರಗಳಿನ್ನು ತಿಳಿಸುವ ಒಂದು ಪುಟ್ಟ ಕೃತಿ ಇದಾಗಿದೆ.

**ಡಾ. ಶಂಕರಪ್ಪ ಎಂ. ಕುಂದಗೋಳ ಅವರ ಕೃತಿಗಳು**

**ಚಿತ್ರಕಲಾವಿದ ಡಿ.ವಿ. ಹಾಲಭಾವಿ[೩೨]**

ಈ ಕೃತಿಯನ್ನು ೨೦೦೯ರಲ್ಲಿ ಅವಿರತ ಪುಸ್ತಕ ಪ್ರಕಾಶನ, ಬೆಂಗಳೂರಿನವರು ಪ್ರಕಟನೆ ಮಾಡಿದ್ದಾರೆ. ಇಲ್ಲಿ ಕಲಾವಿದ ಡಿ. ವಿ. ಹಾಲಭಾವಿಯವರ ಬದುಕು-ಕಲಾಜೀವನ, ಉತ್ತರಕರ್ನಾಟಕದ ಮೊದಲ ಕಲಾಶಾಲೆಯಾದ ಸ್ಕೂಲ್ ಆಫ್ ಆರ್ಟ್‌ನ ಸ್ಥಾಪನೆ, ಬೆಳವಣಿಗೆ ಕುರಿತು ಸಂಶೋಧನೆಯನ್ನು ಮಾಡಿದ್ದು, ಅದನ್ನು ಪುಸ್ತಕ ರೂಪದಲ್ಲಿ ಪ್ರಕಟಮಾಡಿದ್ದಾರೆ. ಡಿ. ವಿ. ಹಾಲಭಾವಿಯವರ ಕಲಾಕೃತಿ, ಶೈಲಿ, ಪ್ರಭಾವ, ಪ್ರೇರಣೆ ಹಾಗೂ ತಂತ್ರಗರಿಕೆ ಕುರಿತು ಬರೆದಿದ್ದಾರೆ. ಡಿ. ವಿ. ಹಾಲಭಾವಿಯವರು ರಚಿಸಿದ ಕಲಾಸಾಹಿತ್ಯವನ್ನು ಕುರಿತು ಸ್ಥೂಲವಾಗಿ ಬರೆದಿದ್ದಾರೆ.

**ಚಿತ್ರಕಲಾವಿದ ಎಂ. ಜಿ. ವಾಚೇದಮಠ[೩೩]**

೨೦೧೦ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಪ್ರಕಟಗೊಂಡ ಚಿತ್ರಕಲಾವಿದ ಎಂ.ಜಿ. ವಾಚೇದಮಠ ಎಂಬ ಕೃತಿಯು ಡಾ. ಶಂಕ್ರಪ್ಪ ಎಂ. ಕುಂದಗೋಳ ಅವರ ಎರಡನೆಯ ಕೃತಿಯಾಗಿದ್ದು. ಕಲಾವಿದ ಎಂ. ಜೆ. ವಾಚೇದಮಠರ ಬಾಲ್ಯ ಪರಿಸರ, ಶಾಲಾ ಶಿಕ್ಷಣ ಮತ್ತು ಇವರ ಆಸಕ್ತಿಯ ವಿಷಯಗಳನ್ನು ವಿವರವಾಗಿ ಬರೆಯಲಾಗಿದೆ. ಇವರ ಗದಗ ಕಲಾಮಂದಿರದಲ್ಲಿ ಚಿತ್ರಕಲೆಯ ಅಧ್ಯಯನ ಮತ್ತು ಅವರ ಕಲಾಗುರುಗಳ ಪರಿಚಯವನ್ನು ಕುರಿತು ಈ ಕೃತಿಯಲ್ಲಿ ತಿಳಿಸಲಾಗಿದೆ.

ಹೀಗೆ ಧಾರವಾಡ ಜಿಲ್ಲೆಯಲ್ಲಿ ಅನೇಕ ಜನ ಕಲಾವಿದರು, ಸಾಹಿತಿಗಳು ಚಿತ್ರಕಲೆಯ ಕುರಿತು ಹಲವಾರು ಬಿಡಿ ಲೇಖನಗಳನ್ನು, ಅನೇಕ ಪತ್ರಿಕೆ, ಅಭಿನಂದನಾ ಗ್ರಂಥ, ಸ್ಮರಣ ಸಂಚಿಕೆ

---

೩೧. ಎಸ್. ಕೆ. ಹೂಗಾರ : ಡಿ.ವಿ. ಹಾಲಭಾವಿ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು. ೧೯೮೭

೩೨. ಶಂಕ್ರಪ್ಪ ಎಂ. ಕುಂದಗೋಳ : ಚಿತ್ರಕಲಾವಿದ ಡಿ. ವಿ. ಹಾಲಭಾವಿ, ಅವಿರತ ಪ್ರಕಾಶನ, ಬೆಂಗಳೂರು. ೨೦೦೯

೩೩. ಶಂಕ್ರಪ್ಪ ಎಂ. ಕುಂದಗೋಳ : ಚಿತ್ರಕಲಾವಿದ ಎಂ. ಜೆ. ವಾಚೇದಮಠ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು. ೨೦೧೦

ಮುಂತಾದ ಪತ್ರಿಕೆಗಳಲ್ಲಿ ಬರೆದಿದ್ದಾರೆ. ಹಾಗೆಯೇ ಹಲವಾರು ಚಿತ್ರಕಲೆಗೆ ಸಂಬಂಧಿಸಿದ ಗ್ರಂಥಗಳು ಪ್ರಕಟಗೊಂಡಿವೆ. ಅವುಗಳನ್ನು ಇಲ್ಲಿ ಸ್ಥೂಲವಾಗಿ ಒಂದೆಡೆಗೆ ದಾಖಲಿಸುವ ಪ್ರಯತ್ನ ಮಾಡಲಾಗಿದೆ. ನಮ್ಮ ಗಮನಕ್ಕೆ ಬರದೇ ಇನ್ನೂ ಹಲವಾರು ಗ್ರಂಥಗಳು ಉಳಿದಿರುವ ಸಾಧ್ಯತೆ ಇದೆ. ಮತ್ತು ಕೆಲವು ಗ್ರಂಥಗಳ ಮಾಹಿತಿ ಲಭ್ಯವಿದ್ದರೂ ಅವುಗಳನ್ನು ಬರೆದ ಲೇಖಕರು, ಪ್ರಕಾಶಕರುಗಳ ವಿವರಗಳು ಉಪಲಬ್ದವಿಲ್ಲದ ಕಾರಣ ಅಂತಹವುಗಳನ್ನು ಕೈಬಿಡಲಾಗಿದೆ. ಈ ಅಧ್ಯಯನವು ಒಂದು ಕಾಲಬದ್ಧವಾದ ಪದವಿಯ ಅಧ್ಯಯನವಾಗಿದ್ದು, ಇರುವ ಕಾಲದ ಪರಿಮಿತಿಯಲ್ಲಿ ಸಾಧ್ಯವಿದ್ದ ಮಟ್ಟಿಗೆ ವಿವರಗಳನ್ನು ಕಲೆಹಾಕಿ ಅಧ್ಯಯನವನ್ನು ರೂಪುಗೊಳಿಸಲಾಗಿದೆ. ಉಳಿದಿರುವ ಗ್ರಂಥಗಳನ್ನು ಮುಂದಿನ ಹಂತದ ಅಧ್ಯಯನದಲ್ಲಿ ಅಥವಾ ಪ್ರಕಟಣೆಯ ಸಂದರ್ಭದಲ್ಲಿ ಸೇರಿಸಿಕೊಳ್ಳಲಾಗುವುದು.

❑❑❑

## ಅಧ್ಯಾಯ – ೮

# ಸಮಾರೋಪ

ಮಾನವನ ಸಾಂಸ್ಕೃತಿಕ ಬೆಳವಣಿಗೆಯ ಇತಿಹಾಸದಲ್ಲಿ ಕಲಾಸೃಷ್ಟಿಯೂ ಒಂದು ಮಹತ್ವದ ಹಂತ. ನಾಗರಿಕತೆಯ ಮೆಟ್ಟಿಲನ್ನೇರುವುದಕ್ಕಿಂತ ಪೂರ್ವದಲ್ಲಿಯೇ ಆದಿವಾಸಿ ಮಾನವ ನಿಸರ್ಗದ ಮಡಿಲಲ್ಲಿ ವಾಸಿಸುವ ಸಂದರ್ಭದಲ್ಲಿ ತನ್ನ ಮನಸ್ಸಿನ ಭಾವನೆಗಳನ್ನು ಅಭಿವ್ಯಕ್ತಗೊಳಿಸಲು ಚಿತ್ರರಚನೆಯ ಮಾಧ್ಯಮಕ್ಕೆ ಕಾಲಿಟ್ಟಿರಬೇಕು. ಶೃತಿ ಪಾತಳಿಯಲ್ಲಿದ್ದ ಸೃಜನಶೀಲ ಮನಸ್ಸು ಸಾಂಸ್ಕೃತಿಕ ಜ್ಞಾನಸಂಪತ್ತು ಕ್ರಮೇಣ ದೃಶ್ಯಮಾಧ್ಯಮದಲ್ಲಿ ಅಭಿವ್ಯಕ್ತಿ ಪಡೆಯಿತು. ವ್ಯಕ್ತಿ ತನ್ನ ಮತ್ತು ಸಮೂಹದ ಜೀವನದಲ್ಲಿ ಸೌಂದರ್ಯದ ಭಾವನೆಗಳನ್ನು ಧಾರ್ಮಿಕ ವಿಧಿಕ್ರಿಯೆಯ ಹಿನ್ನೆಲೆಯಲ್ಲಿ ಮನರಂಜನೆಯ ಸಾಧನವಾಗಿ ವೃತ್ತಿಯ ಒಂದು ಭಾಗವಾಗಿ ಹೀಗೆ ಹತ್ತು ಹಲವು ರೀತಿಯಲ್ಲಿ ಹೊರಹಾಕುತ್ತ ಬಂದಿದ್ದಾನೆ. ಈ ಸೃಜನಾತ್ಮಕವಾದ ಪುರಾತನ ಕಲಾಸೃಷ್ಟಿ ವ್ಯಕ್ತಿಯಿಂದ ವ್ಯಕ್ತಿಗೆ, ಪರಿಸರದಿಂದ ಪರಿಸರಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುವುದು ಸಹಜವಾದ ಅಂಶ. ವ್ಯಕ್ತಿ ಹಲವಾರು ರೀತಿಯ ಪ್ರಭಾವ ಪ್ರೇರಣೆಗಳಿಗೆ ಒಳಗಾಗಿ ಹೀಗೆ ತನ್ನ ಸ್ವರೂಪದಲ್ಲಿ ಆಗಾಗ ಬದಲಾವಣೆ ಮಾಡುತ್ತ ಬಂದರೂಸಹ ಆಯಾ ಪ್ರದೇಶದ ಕಲೆಗಳು ಆಯಾ ಜನರ ವಿಭಿನ್ನ ಮನೋಭಾವದ ಸುಂದರ ಅಭಿವ್ಯಕ್ತಿಯ ಪ್ರತೀಕಗಳಾಗಿ ಬೆಳೆದು ಬಂದಿವೆ.

ಇಂತಹ ಉನ್ನತವಾದ ಭವ್ಯ ಐತಿಹಾಸಿಕ, ಸಂಪ್ರದಾಯಿಕ ಹಾಗೂ ಜನಪದ ಕಲೆಗಳನ್ನು ಕೇವಲ ಕಲೆಯ ದೃಷ್ಟಿಯಿಂದ ನೋಡದೆ ಆ ಕಲೆಗಳನ್ನು ಸಂಶೋಧನೆಯ ಹಿನ್ನೆಲೆಗೆ ಒಳಪಡಿಸಿ ಅವುಗಳ ಕುರಿತು ಆಳವಾಗಿ ಅಧ್ಯಯನ ಕೈಗೊಂಡು ಅದರ ಕುರಿತು ಮಾಹಿತಿಗಳನ್ನು ಮುಂದಿನ

ಪೀಳಿಗೆಗೆ ಕಟ್ಟಿಕೊಡುವುದು ಈ ಅಧ್ಯಯನದ ಉದ್ದೇಶವಾಗಿದೆ. ಸಂಶೋಧನೆಯನ್ನು ಕೈಗೊಂಡ ಸಂಶೋಧಕ ಈ ವಿಚಾರಗಳಿಗೆ ಹೆಚ್ಚು ಒತ್ತು ಕೊಟ್ಟರೆ ಪ್ರತಿಯೊಂದು ಕಲೆಯ ಕುರಿತು ಮಾಡಿದ ಅಧ್ಯಯನವು ಹೆಚ್ಚು ಮೌಲಿಕವಾಗುತ್ತದೆ.[೧] ಚಿತ್ರಕಲೆ ಭಾರತೀಯ ಸಂಸ್ಕೃತಿಯಲ್ಲಿ ವಿವಿಧ ರಾಜ್ಯಗಳಲ್ಲಿ ವಿವಿಧ ಪ್ರದೇಶಗಳಲ್ಲಿ ಆಯಾ ಸಂಸ್ಕೃತಿಯ ಪ್ರಾದೇಶಿಕತೆಯ ಅಂಶಗಳನ್ನು ಪ್ರತಿನಿಧಿಸುವ ಒಂದು ಪ್ರಾಚೀನ ಕಲೆಯಾಗಿದೆ. ಕರ್ನಾಟಕದ ಸಾಂಸ್ಕೃತಿಕ ಪರಂಪರೆ ಪ್ರಾಚೀನ ಕಾಲದಿಂದಲೂ ಹೊಸತನವನ್ನು ರೂಢಿಸಿಕೊಂಡು ಬೆಳವಣಿಗೆ ಹೊಂದಿದೆ. ಕರ್ನಾಟಕದ ಪ್ರತಿಯೊಂದು ಜಿಲ್ಲೆಯು ಹಲವು ಪ್ರಕಾರದ ಕಲೆಗಳನ್ನು ಇನ್ನು ತನ್ನ ಸಾಂಪ್ರದಾಯಿಕ ಆಚರಣೆಗಳ ಮೂಲಕ ಬೆಳೆದುಕೊಂಡು ಬರುತ್ತಿವೆ. ಲಲಿತ ಕಲೆಗಳು ಮಾನವನ ಸಾಂಸ್ಕೃತಿಕ ಜೀವನದ ಅಂಗಗಳಾಗಿವೆ.

ಲಲಿತಕಲೆಗಳಲ್ಲಿ ಮುಖ್ಯವಾದ ಚಿತ್ರಕಲೆಯ ಪ್ರತಿಯೊಂದು ಭಾಗದ ಸಂಸ್ಕೃತಿಯನ್ನು ಆಚಾರ, ವಿಚಾರ, ಧಾರ್ಮಿಕ ಸಂಪ್ರದಾಯಿಕ ವ್ಯವಸ್ಥೆಯನ್ನು ಬಿಂಬಿಸುವಲ್ಲಿ ಅನನ್ಯ ಆಕರವಾಗಿ ತನ್ನ ಪಾತ್ರವನ್ನು ವಹಿಸುತ್ತ ಬಂದಿದೆ. ಈ ಹಿನ್ನೆಲೆಯಲ್ಲಿ ಉತ್ತರ ಕರ್ನಾಟಕದ ಸಾಂಸ್ಕೃತಿಕ ರಾಜಧಾನಿಯೆಂದೇ ಪ್ರಸಿದ್ಧಿ ಪಡೆದ ಧಾರವಾಡ ಜಿಲ್ಲೆಯವ್ಯಾಪ್ತಿಯಲ್ಲಿ ಚಿತ್ರಕಲೆಯು ಯಾವ ರೀತಿಯಾಗಿ ತನ್ನ ಉನ್ನತವಾದ ಸ್ಥಾನವನ್ನು ಉಳಿಸಿಕೊಂಡು, ಹೊಸತನವನ್ನು ಅಳವಡಿಸಿಕೊಂಡು ಬರುತ್ತಿದೆ ಎಂಬುದನ್ನು ಅರಿತುಕೊಳ್ಳಲು ಈ ಅಧ್ಯಯನವು ಸಹಕಾರಿಯಾಗಿದೆ. ಸಾಂಸ್ಕೃತಿಕ ನಗರದ ತುಂಬಾ ಲಲಿತಕಲೆಗಳ ಹರವು ಹೇಗೆ ತನ್ನ ವಿವಿಧ ಆಯಾಮದ ಮೂಲಕ ತನ್ನ ಸ್ಥಾನವನ್ನು ಗಟ್ಟಿನೆಲೆಯಾಗಿಸಿದೆ ಎಂಬುದನ್ನು ಪ್ರಸ್ತುತ ಅಧ್ಯಯನವು ಎಂಟು ಅಧ್ಯಾಯಗಳಲ್ಲಿ ಹರಡಿಕೊಂಡಿದೆ. ಈ ಅಧ್ಯಯನದ ಮಹತ್ವ ಮತ್ತು ಎಲ್ಲಾ ಅಧ್ಯಾಯಗಳ ಫಲಿತಗಳನ್ನು ಸ್ಥೂಲವಾಗಿ ಈ ಕೆಳಗಿನಂತೆ ಸಮೀಕ್ಷಿಸಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ, ಮತ್ತು ವೈಧಾನಿಕತೆಗಳನ್ನು ಕುರಿತು ಚರ್ಚಿಸಲಾಗಿದೆ. ಈ ಸಂಶೋಧನೆಯ ಮುಖ್ಯ ಉದ್ದೇಶವನ್ನು ಇಲ್ಲಿ ಸ್ಪಷ್ಟವಾಗಿ ಮತ್ತು ಇತರ ಕ್ಷೇತ್ರದೊಂದಿಗೆ ತೌಲನಿಕವಾಗಿ ಅಧ್ಯಯನ ಮಾಡಿ ಅದರ ಫಲಿತಾಂಶದೊಟ್ಟಿಗೆ ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಧಾರವಾಡ ಜಿಲ್ಲೆಯ ಸಾಂಸ್ಕೃತಿಕ ಹಿನ್ನೆಲೆ ಮತ್ತು ಲಲಿತಕಲೆಗಳು ಎಂಬುದಾಗಿದೆ. ಧಾರವಾಡ ಜಿಲ್ಲೆಯ ಐತಿಹಾಸಿಕ ಹಿನ್ನೆಲೆ, ಪರಿಸರ, ಸಾಹಿತ್ಯ, ಸಂಗೀತ, ಚಿತ್ರಕಲೆ ಸಂಪ್ರದಾಯಿಕ ಆಚರಣೆಗಳನ್ನು ಕುರಿತು ಪರಿಚಯಾತ್ಮಕ ಅಧ್ಯಯನ ಮಾಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ವಿಶೇಷವಾಗಿ ಧಾರವಾಡ ಜಿಲ್ಲೆಯ ಜನಪದ ಕಲೆಗಳನ್ನು ಪ್ರಯೋಜನ ಮೂಲ ಹಾಗೂ ಮನೋರಂಜನ ಮೂಲವೆಂದು ವರ್ಗೀಕರಿಸಿಕೊಂಡು ರಂಗೋಲಿ,

---

೦೧. ಡಾ. ಎಸ್. ಸಿ. ಪಾಟೀಲ : ಹಚ್ಚೆ ಚಿತ್ರಕಲೆ, ಪುಟ – ೧

ಕಸೂತಿ, ಮದರಂಗಿ, ಕಲಘಟಗಿ ಕಲೆ, ಹಚ್ಚೆ, ಈ ಮುಂತಾದ ಜನಪದ ಮೂಲದ ಚಿತ್ರಕಲೆಯನ್ನು ಅದರ ಹುಟ್ಟು, ಬೆಳವಣಿಗೆ ಜನಪದ ನಂಬುಗೆ, ಆಚರಣೆ ಮುಂತಾದ ಅಂಶಗಳನ್ನು ವಿವರಿಸಲಾಗಿದೆ. ಸಮಕಾಲೀನ ಸಂದರ್ಭದಲ್ಲಿ ಈ ಕಲೆಗಳ ನೆಲೆ ಹಿನ್ನೆಲೆ ಅವುಗಳ ಪ್ರಸ್ತುತ ಸ್ಥಿತಿಯನ್ನು ಸಹ ಇಲ್ಲಿ ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಧಾರವಾಡ ಜಿಲ್ಲೆಯಲ್ಲಿ ಧಾರ್ಮಿಕ ಹಿನ್ನೆಲೆಯಲ್ಲಿ ಬೆಳೆದುಬಂದ ಅಮ್ಮಿನಭಾವಿಯ ಭಿತ್ತಿಚಿತ್ರಗಳ ಬಗ್ಗೆ ಅಧ್ಯಯನ ಮಾಡಲಾಗಿದೆ. ಇವು ೧೮-೧೯ನೇ ಶತಮಾನದಲ್ಲಿ ರಚನೆಯಾದ ಭಿತ್ತಿ ಚಿತ್ರಗಳಾಗಿವೆ. ಈ ಭಿತ್ತಿ ಚಿತ್ರಗಳ ರಚನೆಯಲ್ಲಿ ಕಲಾವಿದನ ಸೃಜನಾತ್ಮಕತೆಯನ್ನು ಗುರುತಿಸಬಹುದು. ಅಮ್ಮಿನಭಾವಿಯ ಮಠ ವೀರಶೈವ ಪರಂಪರೆಗೆ ಸೇರಿದ್ದರು ಇಲ್ಲಿ ಶೈವ ಮತ್ತು ವೈಷ್ಣವ ಪರಂಪರೆಗೆ ಸೇರಿದ ವಿಶೇಷ ವರ್ಣ ಸಂಯೋಜನೆಯ ಚಿತ್ರಗಳಿವೆ. ಈ ಚಿತ್ರಗಳ ಹಿನ್ನೆಲೆಯ ಧಾರವಾಡದ ಜನಪದ ಅಂಶಗಳನ್ನು ಒಳಗೊಂಡು ರಚಿತವಾಗಿವೆ. ಜೊತೆಗೆ ಕಿತ್ತೂರಿನ ರಾಣಿ ಚೆನ್ನಮ್ಮ ಮತ್ತು ಸಂಗೊಳ್ಳಿರಾಯಣ್ಣರಂಥ ಐತಿಹಾಸಿಕ ಮಹನೀಯರ ಚಿತ್ರಗಳು ಇಲ್ಲಿವೆ. ಹೀಗೆ ಧಾರ್ಮಿಕ ಮತ್ತು ಜನಪದ ಅಂಶಗಳನ್ನು ಬಳಸಿಕೊಂಡು ಚಿತ್ರ ರಚನೆಗೊಂಡಿವೆ. ಈ ಚಿತ್ರಗಳನ್ನು ಅವು ರಚನೆಗೊಂಡ ಹಿನ್ನೆಲೆಯಲ್ಲಿ ವಿಂಗಡಿಸಿಕೊಂಡು ಅದರಲ್ಲಿರುವ ಕಲಾತ್ಮಕ ಅಂಶಗಳನ್ನು ವಿವರಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಧಾರವಾಡ ಜಿಲ್ಲೆಯ ಕನ್ನಡ ಸಂಶೋಧನ ಸಂಸ್ಥೆಯ ವಸ್ತುಸಂಗ್ರಹಾಲಯ, ಬೇಂದ್ರೆ ಸ್ಮಾರಕ ಭವನ, ಕರ್ನಾಟಕ ವಿಶ್ವವಿದ್ಯಾಲಯದ ಜನಪದ ವಿಭಾಗದಲ್ಲಿ ಸಂಗ್ರಹಗೊಂಡ ವರ್ಣಕಲಾಕೃತಿಗಳನ್ನು ಅಧ್ಯಯನ ಮಾಡಲಾಗಿದೆ. ವಸ್ತು ಸಂಗ್ರಹಾಲಯದ ಸ್ಥಾಪನೆ ಹಾಗೂ ಅಲ್ಲಿರುವ ವಸ್ತುಗಳನ್ನು ಕುರಿತು ವಿವರಿಸಲಾಗಿದೆ. ಕಲಾಕೃತಿಗಳ ರಚನೆಯ ಹಿನ್ನೆಲೆ ಅದರ ವಸ್ತುವಿಷಯ ವರ್ಣ ಸಂಯೋಜನೆ, ಕಲಾವಿದರ ಪರಿಚಯವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

ಆರನೆಯ ಅಧ್ಯಾಯದಲ್ಲಿ ಧಾರವಾಡ ಜಿಲ್ಲೆಯ ಶಿಕ್ಷಣ ಸಂಸ್ಥೆಗಳು ಮತ್ತು ಹಿರಿಯ ಕಲಾವಿದರ ಜೀವನ ಸಾಧನೆ, ಕಲಾಕೃತಿ, ತಂತ್ರ, ಶೈಲಿ,ಅವರ ಕಲಾಕೃತಿಗಳ ಕುರಿತು ಅಧ್ಯಯನ ಮಾಡಲಾಗಿದೆ. ಉತ್ತರ ಕರ್ನಾಟಕದಲ್ಲಿ ಮೊದಲ ಆರಂಭವಾದ ಡಿ.ವಿ.ಹಾಲಭಾವಿಯವರ ಸ್ಕೂಲ್ ಆಫ್ ಆರ್ಟ್, ಹುಬ್ಬಳ್ಳಿಯ ಡಾ.ಎಂ.ವಿ.ಮಿಣಜಗಿಯವರ ಶ್ರೀ ವಿಜಯ ಮಹಾಂತೇಶ ಲಲಿತಕಲಾ ಮಹಾವಿದ್ಯಾಲಯದ ಧಾರವಾಡದ ಸರಕಾರಿ ಚಿತ್ರಕಲಾಮಹಾವಿದ್ಯಾಲಯ ಈ ಕಲಾಶಾಲೆಗಳ ಸ್ಥಾಪನೆ, ಬೆಳವಣಿಗೆ, ಹುಬ್ಬಳ್ಳಿ ಧಾರವಾಡದ ಸಾಂಸ್ಕೃತಿಕ ಪರಿಸರ ಕಲಾಹಿನ್ನೆಲೆ, ಕಲಾಚಟುವಟಿಕೆ, ಕಲಾಶಿಬಿರ, ಮತ್ತು ಕಲಾಪ್ರದರ್ಶನಗಳ ಕುರಿತು ಅವುಗಳ ಮೂಲ ಉದ್ದೇಶಗಳನ್ನು ಸಹ ಈ

ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಕಲಾಕ್ಷೇತ್ರಕ್ಕೆ ಧಾರವಾಡದ ಕೊಡುಗೆ ಕಲಾಶಾಲೆಗಳ ಜೊತೆಗೆ ಕಲಾವಿದರನ್ನು ಕೂಡ ನೀಡಿದೆ. ಹಿರಿಯ ಕಲಾವಿದರಾದ ಡಿ.ವಿ.ಹಾಲಭಾವಿ, ಎಂ.ವಿ.ಮಿಣಜಗಿ, ಬಸವರಾಜ ಹಳಿಜೋಳ, ಡಿ.ಜಿ.ಬಡಿಗೇರ, ಎನ್.ಜಿ.ಬಡಿಗೇರ ಇವರ ಬಾಲ್ಯ, ಪರಿಸರ ಶಿಕ್ಷಣ, ಅವರು ಮಾಡಿದ ಕಲಾ ಪ್ರದರ್ಶನಗಳು ಪಡೆದ ಪ್ರಶಸ್ತಿ ಇತ್ಯಾದಿ ಕಲಾವಿದರ ಸಂಕ್ಷಿಪ್ತ ಪರಿಚಯವನ್ನು ಮಾಡಿಕೊಡಲಾಗಿದೆ. ಧಾರವಾಡದ ಭಾರತೀಯ ಕಲಾಕೇಂದ್ರ, ಸೃಜನಾ ಕಲಾನಿಕೇತನ, ಈ ಕಲಾಶಾಲೆ ಮತ್ತು ಈ ಎಲ್ಲ ಕಲಾಶಾಲೆಗಳಲ್ಲಿರುವ ಉಪನ್ಯಾಸಕರ ಪರಿಚಯವನ್ನು ಮಾಡಿಕೊಡಲಾಗಿದೆ. ಇದರ ಜೊತೆಗೆ ಸಮಕಾಲೀನ ಸಂದರ್ಭದಲ್ಲಿ ಈ ಕಲಾಶಾಲೆಗಳಲ್ಲಿ ನಡೆಯುತ್ತಿರುವ ಪಾಠಪ್ರವಚನಗಳನ್ನು ಸಹ ಇಲ್ಲಿ ವಿವರಿಸಲಾಗಿದೆ. ಒಟ್ಟಾರೆಯಾಗಿ ಧಾರವಾಡ ಜಿಲ್ಲೆಯಲ್ಲಿ ಆರು ಕಲಾಶಾಲೆಗಳು ಮತ್ತು ಕಲಾವಿದರು ತಮ್ಮ ಕಲೆಯ ಮೂಲಕ ಈ ಕ್ಷೇತ್ರಕ್ಕೆ ನೀಡಿದ ಕೊಡುಗೆಯನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

ಏಳನೆಯ ಅಧ್ಯಾಯದಲ್ಲಿ ದೃಶ್ಯಕಲಾ ಸಾಹಿತ್ಯದ ನೆಲೆ ಹಿನ್ನೆಲೆಯನ್ನು ಕುರಿತು ಚರ್ಚಿಸಿದ್ದು. ಸಾಹಿತ್ಯದ ಹುಟ್ಟು, ಬೆಳವಣಿಗೆ, ಲಲಿತಕಲೆಗಳ ಕುರಿತು ಬಂದಂತಹ ಲೇಖನಗಳು, ದೃಶ್ಯಕಲಾ ಸಾಹಿತಿಗಳ ಪರಿಚಯವನ್ನು ಕೂಡ ಮಾಡಲಾಗಿದೆ. ಕರ್ನಾಟಕ ದೃಶ್ಯಕಲಾ ಸಾಹಿತ್ಯ ಕ್ಷೇತ್ರಕ್ಕೆ ಧಾರವಾಡ ಜಿಲ್ಲೆಯ ಕೊಡುಗೆ ಅಪಾರವಾಗಿದೆ. ಕರ್ನಾಟಕ ವಿಶ್ವವಿದ್ಯಾಲಯ, ಸಮಾಜ ಪುಸ್ತಕಾಲಯ, ಹಾಲಭಾವಿ ಸ್ಕೂಲ್ ಆಫ್ ಆರ್ಟ್‌ನಿಂದ ಪ್ರಕಟಗೊಂಡ ಗ್ರಂಥಗಳ ಅಧ್ಯಯನವನ್ನು ಇಲ್ಲಿ ಮಾಡಲಾಗಿದೆ. ಶಿವರಾಮಕಾರಂತ, ಬಿ.ಪಿ.ಬಾಯರಿ, ಡಿ.ವಿ.ಹಾಲಭಾವಿ, ಡಾ.ಎಸ್.ಸಿ.ಪಾಟೀಲ, ಸುರೇಶ ಕುಲಕರ್ಣಿ ಇವರ ಪ್ರಕಟಿತ ದೃಶ್ಯಕಲಾ ಗ್ರಂಥಗಳ ಸಮೀಕ್ಷೆಯನ್ನು ಇಲ್ಲಿ ಮಾಡಲಾಗಿದೆ. ಚಿತ್ರಕಲೆಗೆ ಪೂರಕವಾಗಿ ಬಂದ ಎಂ.ಫಿಲ್, ಪಿಎಚ್.ಡಿ ಪ್ರಬಂಧಗಳನ್ನು ಸಹ ಇಲ್ಲಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಎಂಟನೆಯ ಅಧ್ಯಾಯ ಸಮಾರೋಪವಾಗಿದ್ದು ಧಾರವಾಡ ಜಿಲ್ಲೆಯ ಚಿತ್ರಕಲೆಯ ಧಾರವಾಡ ಜಿಲ್ಲೆಯ ಚಿತ್ರಕಲೆಯ ವೈಶಿಷ್ಟ್ಯ ಹಾಗೂ ಚಾರಿತ್ರಿಕ ಮಹತ್ವ ಕುರಿತಂತೆ ಒಟ್ಟು ಅಧ್ಯಯನದ ಫಲಿತವನ್ನು ಕೊಡಲಾಗಿದೆ.

**ಅಧ್ಯಯನದ ಫಲಿತಗಳು**

ಧಾರವಾಡ ಜಿಲ್ಲೆಯ ಸಾಹಿಕವಾಗಿ, ಶೈಕ್ಷಣಿಕವಾಗಿ ತುಂಬಾ ಮುಂದುವರಿದ ನಾಡು. ಈ ಕ್ಷೇತ್ರಗಳಂತೆ ಚಿತ್ರಕಲಾಕ್ಷೇತ್ರವು ಈ ಜಿಲ್ಲೆಯಲ್ಲಿ ಶ್ರೀಮಂತರಾಗಿದೆ. ಉತ್ತರ ಕರ್ನಾಟಕದ ಸಾಂಸ್ಕೃತಿಕ ಮುಖಗಳ ಸಮಗ್ರತೆಯನ್ನು ಮೈಗೂಡಿಸಿಕೊಂಡಿರುವ ಧಾರವಾಡ ಜಿಲ್ಲೆಯಲ್ಲಿ ಹಬ್ಬ ಹರಿದಿನಗಳು ಸಂದರ್ಭಗಳಾದರೆ, ಅವುಗಳ ಆಚರಣೆ, ಆಚರಣೆಯ ಹಿನ್ನೆಲೆಯಲ್ಲಿ ಉಗಮಗೊಂಡ

ಚಿತ್ರ ವಿನ್ಯಾಸಗಳು ಪಠ್ಯಗಳೆನಿಸಿವೆ. ಹೀಗಾಗಿ ಧಾರವಾಡ ಜಿಲ್ಲೆಯ ಚಿತ್ರಕಲೆ ಜನಸಮುದಾಯದ ಬದುಕಿನ ಪಠ್ಯಕ್ರಮವಾಗಿ ಬೆಳೆದು ಬಂದಿರುವುದನ್ನು ಗಮನಿಸಬಹುದು. ಇಲ್ಲಿಯ ಚಿತ್ರಕಲೆಯನ್ನು ಸರಕಾರಿ ವಸ್ತು ಸಂಗ್ರಹಾಲಯ, ಶೈಕ್ಷಣಿಕ ಸಂಸ್ಥೆಗಳ ವಸ್ತು ಸಂಗ್ರಹಾಲಯ, ಧಾರ್ಮಿಕ ಸಂಸ್ಥೆಗಳ ವಸ್ತುಸಂಗ್ರಹಲಾಯ, ವ್ಯಾಪಾರಿ ಕೇಂದ್ರಿತ ಚಿತ್ರಕಲೆ, ಜನಸಮುದಾಯದ ಚಿತ್ರಕಲೆ ಎಂದು ಸ್ಥೂಲವಾಗಿ ವರ್ಗೀಕರಿಸಬಹುದು. ಪುರಾತತ್ವ ವಿಭಾಗದ ಸಂಗ್ರಹಾಲಯ, ಬೇಂದ್ರೆ ಸ್ಮಾರಕ ಭವನ ಹಾಗೂ ರಂಗಾಯಣ ಸಂಗ್ರಹಾಲಯಗಳು, ಸರಕಾರಿ ವಸ್ತುಸಂಗ್ರಹಾಲಯಗಳೆಂದು ಭಾವಿಸಿದರೆ, ಕರ್ನಾಟಕ ವಿಶ್ವವಿದ್ಯಾಲಯದ ಜನಪದ ವಿಭಾಗ, ಕನ್ನಡ ಸಂಶೋಧನ ಸಂಸ್ಥೆ, ಡಿ.ವಿ.ಹಾಲಭಾವಿ, ಶ್ರೀವಿಜಯಮಹಾಂತೇಶ ಕಲಾಶಾಲೆ, ಮುಂತಾದವು ಶೈಕ್ಷಣಿಕ ಚಿತ್ರಕಲಾ ಸಂಸ್ಥೆಗಳಾಗಿವೆ. ಅಮ್ಮಿನಭಾವಿ ಪಂಚಗ್ರಹಮಠ, ಶ್ರೀಮುರುಘಾಮಠ, ಹುಬ್ಬಳ್ಳಿ ಮೂರು ಸಾವಿರ ಮಠದ ಚಿತ್ರಸಂಪತ್ತು ಧಾರ್ಮಿಕ ನೆಲೆಯಲ್ಲಿ ಗುರುತಿಸಬಹುದಾಗಿದೆ. ಕಲಘಟಗಿ ಕಲೆ ಉಪಜೀವನಕ್ಕಾಗಿ ರೂಪುಗೊಂಡ ವ್ಯಾಪಾರಿ ಪ್ರವೃತ್ತಿಯ ಪ್ರಯೋಜನ ಕಲೆಯಾಗಿರುವುದು ವಿಶೇಷ ಇನ್ನು ರಂಗೋಲಿ, ಹಚ್ಚೆ, ಮೆಹಂದಿ ಮುಂತಾದ ಚಿತ್ರಕಲೆ ಮನೋರಂಜನೆ ಇಲ್ಲದೇ ಪ್ರಯೋಜನ ನೆಲೆಯಲ್ಲಿ ನಮ್ಮ ಜನಸಮುದಾಯ ರೂಪಿಸಿಕೊಂಡ ಕಲೆಯಾಗಿದೆ.

ಧಾರವಾಡ ಜಿಲ್ಲೆಯ ಚಿತ್ರಕಲೆಯ ಅಧ್ಯಯನವನ್ನು ಕೇಂದ್ರೀಯ ನೆಲೆಯ ಆಕರಗಳು ಮತ್ತು ಕ್ಷೇತ್ರೀಯ ನೆಲೆಯ ಆಕರಗಳು ಎಂದು ಎರಡು ವಿಧಾನದಲ್ಲಿ ವರ್ಗೀಕರಿಸಿಕೊಂಡು ಅಧ್ಯಯನ ಮಾಡಲಾಗಿದೆ. ಈಗಾಗಲೇ ಶಿಕ್ಷಣ ಸಂಸ್ಥೆಗಳಲ್ಲಿ, ಧಾರ್ಮಿಕ ಸಂಸ್ಥೆಗಳಲ್ಲಿ ಸಂಗ್ರಹಗೊಂಡ ಆಕರಗಳು ಕೇಂದ್ರೀಯ ನೆಲೆಗಳಾದರೆ, ಹಚ್ಚೆ, ಮೆಹಂದಿ, ಕಸೂತಿ, ಮುಂತಾದವು ಆ ಕಲೆಯನ್ನು ಕಲಿತು, ಬೆಳೆಸುತ್ತಾ ಬಂದ ಜನವರ್ಗದ ಸಂದರ್ಶನ ಕ್ಷೇತ್ರೀಯ ನೆಲೆಯ ಆಕರ ಶೋಧವಾಗಿದೆ. ಇದು ಈ ಕಿರುಪ್ರಬಂಧ ವೈಧಾನಿಕತೆಯೂ ಆಗಿದೆ.

ಧಾರವಾಡ ಜಿಲ್ಲೆಯ ಚಿತ್ರಕಲೆಯ ವೈಶಿಷ್ಟ್ಯವೆಂದರೆ ಸ್ಥಳೀಯತೆ ಬಣ್ಣ ಸುಣ್ಣ ಕುಂಚ ತಯಾರಿಸುವಲ್ಲೂ ಸ್ಥಳೀಯ ಸಾಮಾಗ್ರಿಗಳ ಬಳಕೆ ಕಂಡುಬರುತ್ತದೆ. ಕಲೆಯಲ್ಲಿ ಕಿತ್ತೂರು ಚೆನ್ನಮ್ಮ, ಸಂಗೊಳ್ಳಿ ರಾಯಣ್ಣರಂಥ ಸ್ಥಳೀಯ ಚಾರಿತ್ರಿಕ ವ್ಯಕ್ತಿಗಳನ್ನು ಅನಾವರಣಗೊಳಿಸಿರುವುದು ಇಲ್ಲಿಯ ವಿಶೇಷತೆಯಾದೆ. ಹೀಗಾಗಿ ಕಲೆ ಕಲೆಗಾಗಿ ಅಲ್ಲ, ಕಲೆ ಬದುಕಿಗಾಗಿ, ನಮ್ಮ ತನವನ್ನು ಪ್ರತಿಬಿಂಬಿಸುವುದಕ್ಕಾಗ ಎಂಬ ಅಂಶವನ್ನು ಈ ಅಧ್ಯಯನದಲ್ಲಿ ಎತ್ತಿ ಹೇಳಲಾಗಿದೆ.

ಧಾರವಾಡ ಜಿಲ್ಲೆಯ ಪ್ರದೇಶವು ಸಾಂಸ್ಕೃತಿಕವಾಗಿ ಪ್ರಸಿದ್ಧಿಯನ್ನು ಪಡೆದಿರುವಂತೆ ಚಿತ್ರಕಲೆಯ ದೃಷಿವಿಯಿಂದಲೂ ಉತ್ತಮವಾದ ಕಲಾ ಪರಂಪರೆಯನ್ನು ಬೆಳೆಸಿಕೊಂಡು ಬರುತ್ತಿದೆ. ಎಂಬುದನ್ನು ಈ ಅಧ್ಯಯನದಿಂದ ತಿಳಿಯಬಹುದು. ಹೀಗೆ ಜಿಲ್ಲಾವಾರು ಚಿತ್ರಕಲೆಯ

ಅಧ್ಯಯನದಿಂದ ಕಲಾ ಕ್ಷೇತ್ರಕ್ಕೆ ನೀಡಿದ ಸಮಗ್ರ ಕೊಡುಗೆಯನ್ನು ತಿಳಿಯಬಹುದು. ಧಾರವಾಡ ಜಿಲ್ಲೆಯ ವಿದ್ಯಾಕಾಶಿ ವಿದ್ಯೆಯ ತವರೂರ ಎನ್ನುವಂತೆ ಕಲಾ ಶಿಕ್ಷಣವು ಕೂಡ ಇಲ್ಲಿ ಬೆಳೆದು ಸಮಕಾಲೀನ ಸಂದರ್ಭದಲ್ಲಿ ತನ್ನ ಉನ್ನತವಾದ ಸ್ಥಾನವನ್ನು ಕಾಪಾಡಿಕೊಂಡು ಬರುತ್ತಿದೆ. ಧಾರವಾಡ ಜಿಲ್ಲೆಯಲ್ಲಿ ಬರುವ ಕೆಲವು ವಸ್ತುಸಂಗ್ರಹಾಲಯದಲ್ಲಿ ಚಿತ್ರಕಲಾಕೃತಿಗಳನ್ನು ಪ್ರದರ್ಶನ ಮಾಡಿದ್ದಾರೆ. ಆದರೆ ಅದನ್ನು ವ್ಯವಸ್ಥಿತ ರೀತಿಯಲ್ಲಿ ಮಾಡದೆ ಇರುವುದು ಕಂಡುಬರುತ್ತದೆ. ಧಾರವಾಡ ಜಿಲ್ಲೆಯ ಎಲ್ಲ ಕಲಾಶಾಲೆಗಳು ಚಿತ್ರಕಲೆಯನ್ನು ಕಲಿಸುವ ಮತ್ತು ಉತ್ತಮ ಕಲಾವಿದರನ್ನು ನಿರೂಪಿಸುವ ಕಾರ್ಯದಲ್ಲಿ ಸಮರ್ಥವಾಗಿ ತೊಡಗಿಸಿಕೊವೆ.

ಹೀಗೆ ವಿವಿಧ ಉದ್ದೇಶಗಳನ್ನು ಪ್ರತಿಫಲಿಸುವ ಈ ಅಧ್ಯಯನವು ಹಲವಾರು ದೃಷಿವಿಕೋನಗಳಿಂದ ಮಹತ್ವ ಪಡೆದುಕೊಂಡಿದೆ. ಸಾಂಸ್ಕೃತಿಕವಾಗಿ, ಕಲಾತ್ಮಕವಾಗಿ ಇದೊಂದು ಸಮಗ್ರವಾದ ಅಧ್ಯಯನವಲ್ಲ ಇನ್ನೂ ಅನೇಕ ದೃಷಿವಿಕೋನದಿಂದ ಧಾರವಾಡ ಜಿಲ್ಲೆಯ ಅಧ್ಯಯನ ಮಾಡಬಹುದಾದ ಸಾಧ್ಯತೆಗಳಿವೆ.

❑❑❑

## ಅನುಬಂಧ – ೧

# ಸಂಕ್ಷೇಪಗಳು

| | | |
|---|---|---|
| ಕ.ವಿ.ವಿ.ಧಾ | : | ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ |
| ಕ.ವಿ.ವಿ.ಹಂ | : | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ಕ.ಲ.ಅ.ಬೆಂ | : | ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು |
| ಕ.ಸಾ.ಪ.ಬೆಂ | : | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು |
| ಕ್ರಿ.ಶ. | : | ಕ್ರಿಸ್ತ ಶಕ |
| ಮೈ.ವಿ.ವಿ. | : | ಮೈಸೂರು ವಿಶ್ವವಿದ್ಯಾಲಯ |
| ಗು.ವಿ.ವಿ. | : | ಗುಲಬರ್ಗಾ ವಿಶ್ವವಿದ್ಯಾಲಯ |
| ಪ್ರ.ಮೈ.ವಿ.ವಿ. | : | ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ |
| ಪು.ಸಂ | : | ಪುಟ ಸಂಖ್ಯೆ |
| ಅನು | : | ಅನುವಾದ |
| ಪ್ರ.ಕ.ವಿ.ವಿ | : | ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ |
| ಸಂ | : | ಸಂಪಾದಕರು |
| ಪ್ರ.ಸಂ | : | ಪ್ರಧಾನ ಸಂಪಾದಕರು |
| ಲೇ | : | ಲೇಖಕರು |
| ಅ.ಪ್ರ.ಮ.ಪ್ರ | : | ಅಪ್ರಕಟಿತ ಮಹಾಪ್ರಬಂಧ |
| ಎಂ.ವಿ. ಎ | : | ಮಾಸ್ಟರ್ ಆಫ್ ವಿಜ್ಯುವಲ್ ಆರ್ಟ್ |
| ಎಂ.ಎಫ್.ಎ | : | ಮಾಸ್ಟರ್ ಆಫ್ ಫೈನ್ ಆರ್ಟ್ |
| ಎಂ.ಫಿಲ್ | ; | ಮಾಸ್ಟರ್ ಆಫ್ ಫಿಲಾಸಫಿ |
| ಪಿಹೆಚ್.ಡಿ | : | ಡಾಕ್ಟರೇಟ್ ಆಫ್ ಫಿಲಾಸಫಿ |
| ಕಿ.ಪ್ರ. | : | ಕಿರುಪ್ರಬಂಧ |
| ಸಂ.ಪ್ರ | : | ಸಂಪ್ರಬಂಧ |

ಅನುಬಂಧ - ೨

# ಸಂದರ್ಶಕರ ವಿವರ

೦೧. ಗಂಗಾಧರ ಪಿರಾಜಿ ಸಾಹುಕಾರ — ೨೦ ವಯಸ್ಸು
ತೊಟ್ಟಿಲು ತಯಾರಿಕೆ,
ಕಲಘಟಗಿ

೦೨. ಮಹಾವೀರ ಬಾಳೀಕಾಯಿ — ೭೨ ವಯಸ್ಸು
ಸದಸ್ಯರು, ಲಲಿತಕಲಾ ಅಕಾಡೆಮಿ,
ಬೆಂಗಳೂರು.

೦೩. ಎಸ್. ಎಸ್. ಮೇಲಕಾರ — ೫೦ ವಯಸ್ಸು
ಕ್ಯೂರೇಟರ್
ಕನ್ನಡ ಸಂಶೋಧನ ಸಂಸ್ಥೆ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೦೪. ಡಾ. ಶಿವಾನಂದ ಹೆಚ್. ಬಂಟನೂರ — ೪೭ ವಯಸ್ಸು
ಉಪನ್ಯಾಸಕರು, ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

೦೫. ವಿರಿಯಲಕ್ಷ್ಮೀ ಸತ್ತಿಗೇರಿ — ೩೬ ವಯಸ್ಸು
ಉಪನ್ಯಾಸಕಿ, ಭಾರತೀಯ ಕಲಾಕೇಂದ್ರ,
ಹುಬ್ಬಳ್ಳಿ

೦೬. ದಿನೇಶ ಚಿಲ್ಲಾಳ — ೩೪ ವಯಸ್ಸು
ವ್ಯಾಪಾರಸ್ಥ, (ಹವ್ಯಾಸಿ ರಂಗೋಲಿ ಕಲಾವಿದ)
ಹುಬ್ಬಳ್ಳಿ

೦೭. ಸಿ. ಡಿ. ಜಟ್ಟಣ್ಣನವರ — ೪೩ ವಯಸ್ಸು
ಉಪನ್ಯಾಸಕರು, ಶ್ರೀ ವಿಜಯ ಮಹಾಂತೇಶ
ಲಲಿತಕಲಾ ಮಹಾವಿದ್ಯಾಲಯ, ಹುಬ್ಬಳ್ಳಿ

೦೮. ಡಾ. ರೇಣುಕಾ ಮಾರ್ಕಂಡೇಯ — ೫೩ ವಯಸ್ಸು
ಉಪನ್ಯಾಸಕರು, ಹಾಲಭಾವಿ ಸ್ಕೂಲ್ ಆಫ್
ಆರ್ಟ್, ಧಾರವಾಡ

ಅನುಬಂಧ – ೩

# ಗ್ರಂಥಋಣ

## ಕನ್ನಡ ಗ್ರಂಥಗಳು


೦೧. ಅಮ್ಮಿನಭಾವಿ ಭಿತ್ತಿಚಿತ್ರಕಲೆ – ಶಂಕ್ರಪ್ಪ ಎಂ. ಕುಂದಗೋಳ
ಅಪ್ರಕಟಿತ ಎಂ.ಎಫ್.ಎ ಕಿರುಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
೨೦೦೩

೦೨. ಅಮ್ಮಿನಭಾವಿ ಮತ್ತು ಮಹಾಲಿಂಗಪೂರು ವೀರಶೈವ ಮಠಗಳ ಭಿತ್ತಿಚಿತ್ರಕಲೆಗಳ ತೌಲನಿಕ ಅಧ್ಯಯನ – ಪಿ. ವಿ. ಬಡಿಗೇರ
ಅಪ್ರಕಟಿತ ಎಂ.ವಿ.ಎ ಕಿರುಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
೨೦೧೦

೦೩. ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ – ಡಾ.ಯಾದಪ್ಪ ಪರದೇಶಿ
ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
೨೦೦೦

೦೪. ಎಮ್. ಆರ್. ಬಾಳೀಕಾಯಿ – ಸುರೇಶ ಡಿ.ಹಾಲಭಾವಿ
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು, ೨೦೧೩

೦೫. ಕನ್ನಡ ನಾಡಿನ ಕಸೂತಿ – ವಿಜಯಾ ಹಿರೇಮಠ ಗೀತಾಮಹಾಲೆ
ಸಮಾಜ ಪುಸ್ತಕಾಲಯ, ಧಾರವಾಡ
೨೦೦೨

೦೬. **ಕರ್ನಾಟಕದ ಜನಪದ ಚಿತ್ರಕಲೆ** – ಎಸ್. ಸಿ. ಪಾಟೀಲ
ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೧೯೯೧

೦೭. **ಕರ್ನಾಟಕದ ತೊಗಲುಗೊಂಬೆ ಚಿತ್ರಕಲೆ** – ಶಶಿಕಲಾ ಹೂಗಾರ
ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೪

೦೮. **ಕರ್ನಾಟಕದ ಹಸ್ತಪ್ರತಿ ಚಿತ್ರಕಲೆ** – ಎಚ್. ಎನ್. ಚಿತ್ರಗಾರ
ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೫

೦೯. **ಕರ್ನಾಟಕದ ದೃಶ್ಯಕಲಾ ಸಾಹಿತ್ಯ ಒಂದು ವೈಚಾರಿಕ ಅಧ್ಯಯನ** – ಪ್ರೇಮಾನಂದ ಟಿ. ಲಕ್ಕಣ್ಣನವರ
ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೮

೧೦. **ಕರ್ನಾಟಕದ ಗಾಜಿನ ಮೇಲಿನ ಚಿತ್ರಕಲೆ** – ಎನ್. ಎಂ. ಅಂಗಡಿ
ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೦

೧೧. **ಕರ್ನಾಟಕ ದೇವಾಲಯ ಕೋಶ – ಧಾರವಾಡ ಜಿಲ್ಲೆ** – ಡಾ. ಸಿ. ಮಹಾದೇವ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೨೦೦೬

೧೨. **ಕರ್ನಾಟಕ ಸಂಗಾತಿ** – ಸಂ. ಚಿ. ಶ್ರೀನಿವಾಸರಾಜು
ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು
೨೦೦೨

೧೩. **ಕರ್ನಾಟಕ ಕಸೂತಿ** – ಗೀತಾ ಮಹಾಲೆ
ಶಿವಪ್ರಕಾಶನ ಗ್ರಾಮೀಣ ಗೃಹವಿಜ್ಞಾನ
ವಿದ್ಯಾಲಯ, ಧಾರವಾಡ. ೧೯೯೧

೧೪. **ಕರ್ನಾಟಕದ ಚಿತ್ರಕಲಾ ಪರಂಪರೆ** – ಎನ್. ಮರಿಶಾಮಾಚಾರ್
ಸಿ.ಎಂ.ಎಸ್. ಪ್ರಕಾಶನ, ಬೆಂಗಳೂರು
೨೦೧೨

೧೫. ಕರ್ನಾಟಕದಲ್ಲಿಯ ಜಾನಪದ ವಸ್ತುಸಂಗ್ರಹಾಲಯಗಳ ಅಧ್ಯಯನ – ಡಾ. ಸಂತೋಷ ಭದ್ರಾಪೂರ
ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೨೦೧೦

೧೬. ಕಲಾಕೋಶ – ಪ್ರಸಂ. ಪಿ.ಆರ್. ತಿಪ್ಪೇಸ್ವಾಮಿ
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು.

೧೭. ಕಲಘಟಗಿಯ ಕಲೆ ಒಂದು ಅಧ್ಯಯನ – ಶಶಿಕಾಂತ ಕೆ. ಬಸರಿಕಟ್ಟಿ
ಅಪ್ರಕಟಿತ ಎಂ.ಫಿಲ್ ಸಂಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೭

೧೮. ಕಲಾಪ್ರಪಂಚ – ಶಿವರಾಮ ಕಾರಂತ
ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ. ೧೯೭೮

೧೯. ಕಲಾತಪಸ್ವಿ ಡಾ. ಮಿಣಜಿಗಿ – ಶಂಕರ ಪಾಟೀಲ
ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ
ಮಂಡಳಿ, ಮೂರು ಸಾವಿರ ಮಠ, ಹುಬ್ಬಳ್ಳಿ
೧೯೮೭

೨೦. ಕಲಾವಿದ ಬಿ. ಮಾರುತಿ ಕಲೆ ಮತ್ತು ಬದುಕು – ಆರ್. ಆರ್. ಸಿದ್ಧಾಪೂರ
ಅಪ್ರಕಟಿತ ಎಂ.ವಿ.ಎ. ಕಿರುಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೮

೨೧. ಕಲಾವಿದ ಎಸ್. ಎಂ. ದಾಟನಾಳ ಅವರ ಜೀವನ ಮತ್ತು ಕಲಾಕೃತಿಗಳ ಒಂದು ಅಧ್ಯಾಯನ – ಇಸ್ಮಾಯಿಲ್ ಜಿ. ನದಾಫ್
ಅಪ್ರಕಟಿತ ಎಂ.ವಿ.ಎ. ಕಿರುಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೯

೨೨. ಕಲಾವಿದ ವಿ.ಬಿ. ಬಡಿಗೇರ ಬದುಕು ಮತ್ತು ಕಲಾಕೃತಿಗಳು – ಆರ್. ಎಫ್. ಹಿರೇಗೌಡರ್
ಅಪ್ರಕಟಿತ ಎಂ.ವಿ.ಎ. ಕಿರುಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೧೦

| | | |
|---|---|---|
| ೨೩. **ಕಲಾವಿದ ಡಿ. ವಿಶ್ವನಾಥ ಜೀವನ ಮತ್ತು ಕಲಾಕೃತಿಗಳ ಒಂದು ಅಧ್ಯಯನ**<br>ಅಪ್ರಕಟಿತ ಎಂ.ವಿ.ಎ. ಕಿರುಪ್ರಬಂಧ<br>ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೧೦ | – | ಎಂ. ಎಸ್. ಹೊಸಹಳ್ಳಿಮಠ |
| ೨೪. **ಕಲಾವಿದ ಡಾ. ಎಂ.ವಿ. ಮಿಣಜಿಗಿ ಒಂದು ಅಧ್ಯಯನ**<br>ಅಪ್ರಕಟಿತ ಎಂ.ಫಿಲ್ ಸಂಪ್ರಬಂಧ<br>ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೫ | – | ಸಿ. ಡಿ. ಜಟ್ಟೆಣ್ಣನವರ |
| ೨೫. **ಕಲೆಗಾರರ ಕಥೆಗಳು**<br>ಸಮಾಜ ಪುಸ್ತಕಾಲಯ, ಧಾರವಾಡ<br>೧೯೯೫ | – | ಬಿ. ಪಿ. ಬಾಯಿರಿ |
| ೨೬. **ಕಲೋಪಾಸಕ ಎಂ. ಜಿ. ವಾಚೇದಮಠ**<br>ಶ್ರೀಮತಿ ಶಾರದ ವಾಚೇದಮಠ ಪ್ರಕಾಶನ,<br>ಧಾರವಾಡ. ೧೯೮೫ | – | ಸುರೇಶ ಕುಲಕರ್ಣಿ |
| ೨೭. **ಕೆ. ಬಿ. ಕುಲಕರ್ಣಿ**<br>ಕರ್ನಾಟಕ ಲಲಿತಕಲಾ ಅಕಾಡೆಮಿ,<br>ಬೆಂಗಳೂರು. ೨೦೧೧ | – | ಬಿ. ಎಂ. ಪಾಟೀಲ |
| ೨೮. **ಚಿಕ್ಕ ಮಕ್ಕಳ ಚಿತ್ರಕಲೆ**<br>ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ,<br>ಮೈಸೂರು. ೧೯೬೯ | – | ಬಿ. ಪಿ. ಬಾಯಿರಿ |
| ೨೯. **ಚಿತ್ರಕಲಾ ಪ್ರಪಂಚ**<br>ಕರ್ನಾಟಕ ಲಲಿತಕಲಾ ಅಕಾಡೆಮಿ,<br>ಬೆಂಗಳೂರು. ೧೯೯೩ | – | ಪ್ರಸಂ. ಪಿ.ಆರ್. ತಿಪ್ಪೇಸ್ವಾಮಿ |
| ೩೦. **ಚಿತ್ರಕಲಾ ದರ್ಪಣ**<br>ಕರ್ನಾಟಕ ಲಲಿತಕಲಾ ಅಕಾಡೆಮಿ,<br>ಬೆಂಗಳೂರು. | – | ವಿ.ಟಿ.ಕಾಳೆ |
| ೩೧. **ಚಿತ್ರಕಲಾ ಪ್ರಪಂಚಕ್ಕೆ ಧಾರವಾಡ ಸರಕಾರಿ ಚಿತ್ರಕಲಾ ಮಹಾವಿದ್ಯಾಲಯದ ಕೊಡುಗೆ**<br>ಅಪ್ರಕಟಿತ ಎಂ.ವಿ.ಎ. ಕಿರುಪ್ರಬಂಧ<br>ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೧೧ | – | ಸಿ. ಸಿ. ಬಾರಕೇರ |

೩೨. **ಚಿತ್ರಕಲಾವಿದ ಎಂ. ಜಿ. ವಾಚೇದಮಠ ಬದುಕು ಮತ್ತು ಕಲಾಕೃತಿಗಳು** – ಭಾನುಮತಿ ಕೆ. ಎಲ್
ಅಪ್ರಕಟಿತ ಎಂ.ಫಿಲ್ ಸಂಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೧೦

೩೩. **ಚಿತ್ರಕಲಾವಿದ ಡಿ. ವಿ. ಹಾಲಭಾವಿ** – ಶಂಕ್ರಪ್ಪ ಎಂ. ಕುಂದಗೋಳ
ಅವಿರತ ಪುಸ್ತಕ ಪ್ರಕಾಶನ, ಬೆಂಗಳೂರು
೨೦೦೯

೩೪. **ಚಿತ್ರಕಲಾವಿದ ಎಂ. ಜಿ. ವಾಚೇದಮಠ** – ಶಂಕ್ರಪ್ಪ ಎಂ. ಕುಂದಗೋಳ
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು. ೨೦೧೦

೩೫. **ಚಿತ್ರಕಲೆ** – ಬಿ. ಪಿ. ಬಾಯಿರಿ
ಸಮಾಜ ಪುಸ್ತಕಾಲಯ, ಧಾರವಾಡ
೧೯೮೦

೩೬. **ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು** – ಡಾ. ಎಸ್. ಸಿ. ಪಾಟೀಲ
ಸ್ಕೂಲ್ ಆಫ್ ಆರ್ಟ್ ವಜ್ರಮಹೋತ್ಸವ
ಸಮಿತಿ, ಧಾರವಾಡ. ೧೯೯೫

೩೭. **ಚಿತ್ರಕಲೆಯ ಚಿಕ್ಕ ಕಥೆಗಳು** – ಬಿ. ಪಿ. ಬಾಯಿರಿ
ಪ್ರತಿಭಾ ಗ್ರಂಥಮಾಲೆ, ಧಾರವಾಡ
೧೯೮೦

೩೮. **ಚಿತ್ರಶಾಲ್ಮಲಾ** – ಪ್ರಸಂ. ಆರ್ಯಆಚಾರ್ಯ
ಧಾರವಾಡ ಜಿಲ್ಲಾಡಳಿತ, ಧಾರವಾಡ
೨೦೦೭

೩೯. **ಚಿತ್ರಾಕ್ಷಿ** – ಸಂ. ಡಾ. ಎಸ್. ಸಿ. ಪಾಟೀಲ
ಸ್ಕೂಲ್ ಆಫ್ ಆರ್ಟ್ ವಜ್ರಮಹೋತ್ಸವ
ಸಮಿತಿ, ಧಾರವಾಡ. ೧೯೯೫

೪೦. **ಜನಪ್ರಿಯ ಕಲಾಮಾಲಿಕ ಜನಪದಕಲೆ** – ಡಾ. ಎಸ್. ಸಿ. ಪಾಟೀಲ
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು. ೧೯೯೫

೪೧. **ಜಾಗತಿಕ ಚಿತ್ರಕಲೆ** – ಬಿ. ಪಿ. ಬಾಯಿರಿ
ಪ್ರತಿಭಾ ಗ್ರಂಥಮಾಲೆ, ಧಾರವಾಡ
೧೯೮೫

೪೨. **ಡಾ. ಮಿಣಜಗಿಯವರ ಶ್ರೀ ವಿಜಯ ಮಹಾಂತೇಶ ಲಲಿತಕಲಾ ಮಹಾವಿದ್ಯಾಲಯ ಐತಿಹಾಸಿಕ ಅಧ್ಯಯನ** – ಶ್ರೀಮತಿ ಲತಾರಾಣಿ ಮಲ್ಲಾರ
ಅಪ್ರಕಟಿತ ಎಂ.ವಿ.ಎ. ಕಿರುಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೭೪

೪೩. **ಡಿ.ವಿ. ಹಾಲಭಾವಿ** – ಎಸ್. ಕೆ. ಹೂಗಾರ
ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು
೧೯೮೭

೪೪. **ದಶಕದ ಕನ್ನಡ ಸಾಹಿತ್ಯ** – ಡಾ. ಎಫ್. ಟಿ. ಹಳ್ಳಿಕೇರಿ, ಡಾ. ರವೀಂದ್ರನಾಥ ಕೆ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,
ಹಂಪಿ

೪೫. **ಧಾರವಾಡದ ಕೋಲಾಜ ಚಿತ್ರಕಲಾವಿದರು** – ಸುನೀಲ ಹೆಗಡೆ
ಅಪ್ರಕಟಿತ ಬಿ.ವಿ.ಎ. ಕಿರುಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೧

೪೬. **ಧಾರವಾಡದ ಚಿತ್ರಕಲಾವಿದ ಡಿ. ವಿ. ಹಾಲಭಾವಿ ಅವರ ಬದುಕು ಮತ್ತು ಕಲಾಕೃತಿಗಳು** – ಶಂಕ್ರಪ್ಪ ಎಂ. ಕುಂದಗೋಳ
ಅಪ್ರಕಟಿತ ಎಂ.ವಿ.ಎ. ಕಿರುಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೫

೪೭. **ಧಾರವಾಡದ ಹಾಲಭಾವಿ ಸ್ಕೂಲ್ ಆಫ್ ಆರ್ಟ್ ಒಂದು ಐತಿಹಾಸಿಕ ಅಧ್ಯಯನ** – ಬಿ. ಎಂ. ಪಾಟೀಲ
ಅಪ್ರಕಟಿತ ಎಂ.ವಿ.ಎ. ಕಿರುಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೬

೪೮. **ದೃಶ್ಯ ಸಂಚಲನ** – ಡಾ. ಎಸ್. ಸಿ. ಪಾಟೀಲ
ರಾಷ್ಟ್ರೀಯ ದೃಶ್ಯಕಲಾ ಅಕಾಡೆಮಿ, ಧಾರವಾಡ
೨೦೧೧

೪೯. **ದೃಶ್ಯಾನುಭವ** – ಡಾ. ಎಂ.ಬಿ. ಪಂಚಾಳ
ಅನ್ನಪೂರ್ಣ ಪ್ರಕಾಶನ, ಬೀದರ
೨೦೧೦

೫೦. ದೃಷ್ಟಿ ಸೃಷ್ಟಿ – ಡಾ. ಶಿವಾನಂದ ಬಂಟನೂರ
ಅಲಕಾ ಪ್ರಕಾಶನ, ಕೈನೂರು
೨೦೦೯

೫೧. ನನ್ನ ಸಮಕಾಲೀನರು – ಡಿ. ವಿ. ಹಾಲಭಾವಿ
ಸುರೇಶ ಹಾಲಭಾವಿ ಪ್ರಕಾಶನ, ಧಾರವಾಡ.
೧೯೬೮

೫೨. ನನ್ನ ಸಿಲೋನಿನ ಸಂದರ್ಶನ – ಡಿ. ವಿ. ಹಾಲಭಾವಿ
ಸುರೇಶ ಹಾಲಭಾವಿ ಪ್ರಕಾಶನ, ಧಾರವಾಡ.
೧೯೮೫

೫೩. ನವ್ಯ ಕಲೆ ಹಾಗೂ ಕಲಾವಿದರು – ಬಿ. ಪಿ. ಬಾಯಿರಿ
ಪ್ರತಿಭಾ ಗ್ರಂಥಮಾಲೆ, ಧಾರವಾಡ.
೧೯೮೨

೫೪. ನಿಜದ ನೆಲೆ – ಸಂ. ಡಾ. ಎಸ್. ಸಿ. ಪಾಟೀಲ
ಸತ್ಯಾನಂದ ಪಾತ್ರೋಟ
ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ,
ಬಾಗಲಕೋಟೆ. ೨೦೦೩

೫೫. ಪಿಕಾಸೋ – ಸುರೇಶ ಕುಲಕರ್ಣಿ
ತಾರಾ ಪ್ರಕಾಶನ, ಭಾರತೀನಗರ
ಧಾರವಾಡ. ೧೯೮೧

೫೬. ಬಳ್ಳಾರಿ ಜಿಲ್ಲೆಯ ಚಿತ್ರಕಲೆ – ಡಾ.ಎಚ್. ಈ. ಬಸವರಾಜಪ್ಪ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,
ಹಂಪಿ. ೨೦೦೦

೫೭. ಬಸವರಾಜ ಹಳಿಜೋಳ – ಆರ್.ಜಿ. ರಾಯ್ಕರ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು. ೨೦೦೦

೫೮. ಬಾರೋಕ್ ಕಲೆ – ಡಾ. ಎಸ್. ಸಿ. ಪಾಟೀಲ
ಭಾರತೀಯ ಕಲಾಕೇಂದ್ರ, ಧಾರವಾಡ.
೧೯೮೭

೫೯. ಬಿಜಾಪೂರ ಚಿತ್ರಕಲೆ – ಗಿರಿಜಾ ಬಿರಾದಾರ
ಅಪ್ರಕಟಿತ ಎಂ.ಫಿಲ್ ಸಂಪ್ರಬಂಧ,
ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೮

೬೦. **ಬೀದರ ಜಿಲ್ಲೆಯ ಚಿತ್ರಕಲೆ** – **ವೈಶಾಲಿ ಕಾಂಬಳೆ**
ಅಪ್ರಕಟಿತ ಎಂ.ಫಿಲ್ ಸಂಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೨

೬೧. **ಭರತ ಕುಮಾರ ಅವರ ಬದುಕು ಮತ್ತು ಕಲಾಕೃತಿಗಳು** – **ಅರ್ಚನಾ ಸುತಾರ**
ಅಪ್ರಕಟಿತ ಎಂ.ವಿ.ಎ. ಕಿರುಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೯

೬೨. **ಮಾಟದೊಳಗಣ ನೋಟ** – **ಡಾ. ಶಿವಾನಂದ ಬಂಟನೂರು**
ಯಾಜಿ ಪ್ರಕಾಶನ, ಹೊಸಪೇಟೆ
೨೦೧೨

೬೩. **ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ** – **ಎಸ್. ಸಿ. ಪಾಟೀಲ**
ಅಪ್ರಕಟಿತ ಬಿ.ವಿ.ಈಡಿ ಕಿರುಪ್ರಬಂಧ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೧೯೮೩

೬೪. **ಮಾನಸೋಲ್ಲಾಸ** – **ಡಾ. ಎಂ. ಎಂ ಕಲಬುರ್ಗಿ**
ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ.

೬೫. **ರಂಗೋಲಿ ಚಿತ್ರಕಲೆ** – **ಡಾ. ಎಸ್. ಸಿ. ಪಾಟೀಲ**
ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು
೨೦೦೪

೬೬. **ವರ್ಣಸಂಚಯ** – **ಡಾ. ಎಸ್. ಸಿ. ಪಾಟೀಲ**
ವಿಜಯ ಚಿತ್ರಕಲಾ ಮಹಾವಿದ್ಯಾಲಯ,
ಇಲಕಲ್. ೨೦೦೧

೬೭. **ವಸ್ತುಸಂಗ್ರಹಾಲಯ ಶಾಸ್ತ್ರದ ಮೂಲತತ್ವಗಳು** – **ಪ್ರಸಂ. ಹಾ.ಮಾ. ನಾಯಕ**
ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು
ವಿಶ್ವವಿದ್ಯಾನಿಲಯ, ಮೈಸೂರು

೬೮. **ವಿ. ಟಿ. ಕಾಳೆ** – **ಡಾ. ಎಸ್. ಸಿ. ಪಾಟೀಲ**
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು ೨೦೦೪

೬೯. **ಶಿಲ್ಪ, ಚಿತ್ರ, ವಾಸ್ತು ಕಲೆಗಳು** – ಶಿವರಾಮ ಕಾರಂತ
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ

೭೦. **ಸಂಶೋಧನ ಸ್ವರೂಪ** – ಡಾ. ಬಿ. ವಿ. ಶಿರೂರ
ಅನ್ನಪೂರ್ಣ ಪ್ರಕಾಶನ, ಹುಬ್ಬಳ್ಳಿ
೨೦೦೪

೭೧. **ಸಾಧನೆಯ ಸಮುಚ್ಚಯ ಎಲ್. ಶಿವಲಿಂಗಪ್ಪ** – ಡಾ. ಎಸ್. ಸಿ. ಪಾಟೀಲ
ರಾಷ್ಟ್ರೀಯ ದೃಶ್ಯಕಲಾ ಅಕಾಡೆಮಿ, ಧಾರವಾಡ
೨೦೧೦

೭೨. **ಸುರಪುರ ಚಿತ್ರಕಲೆ** – ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ
ಸರಚಂದ್ರ ಪ್ರಕಾಶನ, ಚಿತ್ತಾಪೂರ
೨೦೦೯

೭೩. **ಸುರೇಶ ಹಾಲಭಾವಿಯವರ ಕಲೆ ಮತ್ತು ಬದುಕು** – ಎನ್. ಎನ್. ಚಿನ್ನಣ್ಣವರ
ಅಪ್ರಕಟಿತ ಎಂ.ವಿ.ಎ. ಕಿರುಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೧೦

೭೪. **ಹಚ್ಚೆ ಚಿತ್ರಕಲೆ** – ಡಾ. ಎಸ್. ಸಿ. ಪಾಟೀಲ
ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು
೨೦೦೪

೭೫. **ಹೈದ್ರಾಬಾದ್-ಕರ್ನಾಟಕ ಸಾಂಸ್ಕೃತಿಕ ವಿಷಯ ವಿಶ್ವಕೋಶ ಲಲಿತಕಲೆಗಳ ಸಂಪುಟ** – ಸಂ. ಡಾ. ಎಸ್. ಸಿ. ಪಾಟೀಲ, ಡಾ. ಪಿ. ಕೆ. ಖಂಡೋಬಾ
ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ,
ಗುಲಬರ್ಗಾ. ೨೦೧೨

## ಇಂಗ್ಲೀಷ್ ಗ್ರಂಥಗಳು


1. **A Critical analysis of Art Education at School level in Karnataka State with Special Reference to Drawing and Painting** — **Dr S C Patil**
   Unpublished Ph.D Thesis,
   Karnataka University, Dharwad
   2002
2. **Painting Karnataka Hand Book** — **D.K.Bharadvaj (Ed.,)**
   Mysore, 1924
3. **Souviner form The Sibi Temple** — **R.Ramkrishna**
   The Sibi Murals, 1988
4. **Traditional Painting Karnataka** — **S.R.Rao, B.V.K.Shastry**
   CKP, Bangalore, 1980
5. **Vijayanagara Sexcentehary Commemoration Volume I** — **C.Shivaramamurti, S.Paramasivah**
   Dharwad, Vijayanagara
   Painting & Formlepakshi, 1936
6. **Vijayanagara Painting** — **S.Sivaramamurti**
   Delhi, 1985


❑❑❑

# ೪. ಧಾರವಾಡ ಜಿಲ್ಲೆಯ ನಕಾಶೆ



